ಮನೋಹರ ಗ್ರಂಥಮಾಲೆಯ ಹದಿನೈದನೆಯ ಕುಸುಮ

# ಕುರಿಹಿಂಡು

(ವಿಡಂಬನಾತ್ಮಕ ಏಳು ಸಮಾಜ ಚಿತ್ರಗಳು)

ಬರೆದವರು

ಪರಶುರಾಮ

ಅನುವಾದಕರು

ಜಲಧರ

ಚಿತ್ರಕಾರರು

ಯತೀಂದ್ರ ಕುಮಾರ ಸೇನ

ಡಿಸೆಂಬರ ೧೯೩೫ ]

[ ಬೆಲೆ ೧-೦-೦

ಸಂಪಾದಕರು:—

ಜಿ. ಬಿ. ಜೋಶಿ

ಜಿ. ವ್ಹಿ. ಚುಳಕಿ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:—

ದ. ರಾ. ಬೇಂದ್ರೆ ಎಂ. ಎ.

ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ.

ವಿ. ಕೃ. ಗೋಕಾಕ ಎಂ. ಎ.

ಮುದ್ರಕರು:—

ಬಿ. ಎನ್. ಬಾಗಲವಾಡಿ

ಮೋಹನ ಮುದ್ರಣಾಲಯ

ಧಾರವಾಡ

ಪ್ರಕಾಶಕರು:—

ಜಿ. ಬಿ. ಜೋಶಿ

ಮನೋಹರ ಗ್ರಂಥಮಾಲಾ

ಸಾಧನಕೇರಿ, ಧಾರವಾಡ

# ನಮ್ಮ ಮಾತು

ನಮ್ಮ ಈ ಗ್ರಂಥವು ಮಾಲೆಯ ಮೂರನೆಯ ವರುಷದ ಮೂರನೆಯ ಕುಸುಮವು. ನಾವು ಸಾಮಾನ್ಯವಾಗಿ ಚಂದಾದಾರರಿಗೆ ೩-೮-೦ ರಲ್ಲಿ ಕೊಡಬೇಕಾಗಿದ್ದುದು ೧೫೦ ಪುಟ; ಆದರೆ ಈಗ ಇದರಲ್ಲಿ ಕೊಟ್ಟದ್ದು ೧೮೦ ಪುಟ. ಇದಲ್ಲದೆ ಇನ್ನೂ ಒಂದು ಹೆಚ್ಚಿನ ಮಾತೆಂದರೆ, ಈ ಪುಸ್ತಕದಲ್ಲಿ ಒಳ್ಳೇ ರಸಪೂರ್ತವಾದ ೩೫ ಚಿತ್ರಗಳನ್ನೂ ಹಾಕುವ ಸಾಹಸ ಮಾಡಿದ್ದೇವೆ. ಈ ಮಾದರಿಯ ಪುಸ್ತಕವು ಕನ್ನಡ ಸಾಹಿತ್ಯಕ್ಕೇ ಹೊಸದು. ಪುಸ್ತಕದ ಬಾಹ್ಯಸೌಂದರ್ಯವು ಇನ್ನೂ ಹೆಚ್ಚಲೆಂದು ಒಂದು ತ್ರಿವರ್ಣ ಚಿತ್ರವನ್ನೂ ಹಾಕಿದ್ದೇವೆ. ಇಷ್ಟೆಲ್ಲ ನಾವು ಮಾಡಿದ್ದು ನಮ್ಮ ಚಂದಾದಾರರನ್ನು ನಂಬಿ. ಅವರು ನಮ್ಮ ಈ ಸಾಹಸದಲ್ಲಿ ತಮ್ಮ ಮಿತ್ರರನ್ನೂ ಚಂದಾದಾರರನ್ನಾಗಿ ಮಾಡಿಕೊಟ್ಟು ತಮ್ಮ ಸಹಾನುಭೂತಿಯನ್ನು ತೋರಿಸಿ ನಮ್ಮನ್ನು ಪ್ರೋತ್ಸಾಹಿಸುವರೆಂದು ನಂಬಿದ್ದೇವೆ.

ನಮ್ಮ ಈ ಸಚಿತ್ರ ಲೇಖನಗಳನ್ನು ಕನ್ನಡದಲ್ಲಿ ಭಾಷಾಂತರಿಸಲು ಅನುಮತಿಯನ್ನು ಕೊಟ್ಟದ್ದಕ್ಕಾಗಿ ಶ್ರೀ. 'ಪರಶುರಾಮರ'ಗೂ, ಅವರ ಲೇಖನಗಳನ್ನು ಕನ್ನಡದಲ್ಲಿ ಸ್ವಾರಸ್ಯಮಯವಾಗಿ ಪರಿವರ್ತಿಸಿ ನಮಗೆ ಕೊಟ್ಟದ್ದಕ್ಕೆ ಶ್ರೀ. 'ಜಲಧರ'ರಿಗೂ ನಾವು ಅತ್ಯಂತ ಋಣಿಯಾಗಿದ್ದೇವೆ. ಅಲ್ಲದೆ ಈ ಗ್ರಂಥಕ್ಕೆ ಬೆಲೆಯುಳ್ಳ ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕೆ ಶ್ರೀಮಾನ್ ದ. ರಾ. ಬೇಂದ್ರೆ ಎಂ. ಎ. ಇವರಿಗೂ ನಾವು ಉಪಕೃತರಾಗಿದ್ದೇವೆ.

ಪ್ರೊ. ವಿ. ಕೃ. ಗೋಕಾಕ ಎಂ. ಎ. ಇವರು ೭೫-೦-೦ ಕೊಟ್ಟು ನಮ್ಮ ಮಾಲೆಯ **ಆಜೀವಚಂದಾದಾರರಾಗಿ** ನಮ್ಮನ್ನು ಚಿರಋಣಿಗಳನ್ನಾಗಿ ಮಾಡಿದ್ದಾರೆ.

**ಪ್ರಕಾಶಕರು.**

# ಅರಿಕೆ

ವಂಗೀಯ ಸಾಹಿತ್ಯದಲ್ಲಿ ಶ್ರೀಮಾನ್ ಪರಶುರಾಮರು ಅದ್ವಿತೀಯ ಹಾಸ್ಯ-ವ್ಯಂಗ್ಯ ಕಥಾಲೇಖಕರೆಂದು ವಿಖ್ಯಾತರಾಗಿದ್ದಾರೆ. ಅವರ ಕಥೆಗಳು ಅತ್ಯಂತ ಲೋಕಪ್ರಿಯವಾಗಿವೆ. ಕೆಲ ಪ್ರಾಂತೀಯ ಭಾಷೆಗಳಲ್ಲಿಯೂ ಅವು ಪರಿವರ್ತಿಸಲ್ಪಟ್ಟಿವೆ.

ಶ್ರೀ. ಪರಶುರಾಮರು ಅಸಾಧಾರಣ ಪ್ರತಿಭಾಶಾಲಿಗಳು. ಅವರ ಕಥೆಗಳ ಕಲ್ಪನೆಯಲ್ಲಿ ವೈಶಿಷ್ಟ್ಯವಿದೆ; ಭಾವದಲ್ಲಿ ವೈಶಿಷ್ಟ್ಯವಿದೆ; ರಸದಲ್ಲಿ ವೈಶಿಷ್ಟ್ಯವಿದೆ. ಇಂತಹ ಕಥೆಗಳನ್ನು ಕನ್ನಡದಲ್ಲಿ ಪರಿವರ್ತಿಸುವದು ಸಾಹಸದ ಕೆಲಸವೇ ಸರಿ. ಆದರೂ ಏನೋ ಒಂದು ಬಗೆಯ ಚಾಪಲ್ಯದ ಮೂಲಕ ಕೈ ಹಾಕಿದ್ದೇನೆ. ಎಷ್ಟರಮಟ್ಟಿಗೆ ಯಶಸ್ವಿಯಾಗಿರುವೆನೆಂಬುದನ್ನು ನಿರ್ಧರಿಸುವದು ಪ್ರವೀಣರ ಕೆಲಸ.

'ಪರಶುರಾಮ' ಇದು, ಶ್ರೀ. ರಾಜಶೇಖರ ಬೋಸ ಇವರ ಉಪನಾಮ. ಶ್ರೀ. ಬೋಸ ಇವರು ಚತುರ ಕಥಾಲೇಖಕರಷ್ಟೇ ಅಲ್ಲ, ಭಾಷಾಶಾಸ್ತ್ರವಿಶಾರದರೂ ಆಹುದು. ಇವರು ರಚಿಸಿದ 'ಚಲಂತಿಕಾ' ಎಂಬ ಬಂಗಾಲೀ ಭಾಷೆಯ ಕೋಶವು ತೀರಾ ಹೊಸ ಮಾದರಿಯಾಗಿದೆ. ವಿದ್ವಾಂಸರು ಅದರಲ್ಲಿಯ ರಚನಾನೈಪುಣ್ಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ವಿಜ್ಞಾನ ಶಾಸ್ತ್ರದಲ್ಲಿ ಸಹ ಶ್ರೀ. ಬೋಸರು ಸುಪಂಡಿತರಾಗಿದ್ದಾರೆ. ವೈಜ್ಞಾನಿಕ ವಿಷಯಗಳ ಮೇಲೆ ಅನೇಕ ಲೇಖಗಳನ್ನು ಬರೆದಿದ್ದಾರೆ. ಇವರು ಪ್ರಸಿದ್ಧ Bengal chemical & Pharmaceautical works ದ ಮ್ಯಾನೇಜಿಂಗ ಡಾಯರೆಕ್ಟರರಾಗಿದ್ದಾರೆ.

'ಪರಶುರಾಮ' ಈ ಹೆಸರಾದರೂ ಅನ್ವರ್ಥಕವಾಗಿದೆಯೆಂಬುದು ಅವರ ಕಥೆಗಳನ್ನು ಓದಿದವರಿಗೆ ಸಹಜವಾಗಿ ತಿಳಿಯುವಂತಿದೆ. ನಮ್ಮ ಸಮಾಜದಲ್ಲಿ ಕಂಡು ಬರುವ ಅಂಧಾಚಾರ ಅನಾಚಾರ ಅತ್ಯಾಚಾರಗಳ ಮೇಲೆ, ಸ್ವಾರ್ಥ ಅಹಂಕಾರಗಳ ಮೇಲೆ, ಬಾಹ್ಯ ಆಡಂಬರ ಆಂತರಿಕ ಪೇಸತೆಗಳ

ಮೇಲೆ ಅವರು ತಮ್ಮ ತೀಕ್ಷ್ಣ ಪರಶುವನ್ನು ಎತ್ತಿದ್ದು ಅದರ ರಭಸವೂ ನಮ್ಮ ಅನುಭವಕ್ಕೆ ಬಾರದೆ ಇರುವದಿಲ್ಲ.

ಶ್ರೀ. ಪರಶುರಾಮರ ಕಥೆಗಳನ್ನು ನಾನು ಮೂರು ನಾಲ್ಕು ವರ್ಷಗಳ ಹಿಂದೆ ಓದಿದೆನು. ಆ ಕಥೆಗಳ ಅಭಿನವ ಶೈಲಿಯೂ ಕಥಾವಸ್ತುವಿನ ಚಮತ್ಕೃತಿಯೂ ಪಾತ್ರಗಳ ಸಜೀವತೆಯೂ ಅಲ್ಲಲ್ಲಿ ಉಕ್ಕುವ ನಗೆಯೂ ಮನುಗುವ ವಿಡಂಬನವೂ ನನ್ನ ಮನವನ್ನು ಸೂರೆಗೊಂಡವು. ಆಗಲೆ ಅವುಗಳನ್ನು ಕನ್ನಡದಲ್ಲಿ ಅನುವಾದಿಸಬೇಕೆಂಬ ಇಚ್ಛೆಯುಂಟಾಯಿತು. ಅದೀಗ ದೃಶ್ಯರೂಪದಲ್ಲಿದೆಯೆಂದು ಸಂತೋಷಿಸುತ್ತೇನೆ.

ಕೇವಲ ಅನುವಾದ ಮಾಡದೆ ಕಥೆಗಳನ್ನು ರೂಪಾಂತರಿಸಿದ್ದರೆ ಚೆನ್ನಾಗುತ್ತಿತ್ತೆಂದು ಕೆಲವರ ಅಭಿಪ್ರಾಯವಿರಬಹುದು. ಆದರೆ ಇದಕ್ಕೆ ಶ್ರೀ. ಪರಶುರಾಮರ ಒಪ್ಪಿಗೆಯಿಲ್ಲ. ಇದಲ್ಲದೆ ಇನ್ನೂ ಒಂದು ವಿಚಾರ: ಬಂಗಾಲವು ನಮಗೆ ಪರಕೀಯವೆಂದೇಕೆ ಅನಿಸಬೇಕು? ಅದಿನ್ನೂ ಎಷ್ಟು ದಿನ ಅಪರಿಚಿತವಾಗಿ ಉಳಿಯಬೇಕು? ಬಂಗಾಲದ ಸಂಸ್ಕೃತಿ ಹೇಗಿದೆ? ಅದರ ಜೀವನವು ಹೇಗಿದೆ? ಬಂಗಾಲದ ಜನರ ಆಚಾರ-ವಿಚಾರಗಳೇನು? ಆಶೆ ಆಕಾಂಕ್ಷೆಗಳೇನು? ಸ್ಥಿತಿ-ಗತಿಗಳೇನು? ಸುಖ-ದುಃಖಗಳೇನು? .... ಇವೇ ಮೊದಲಾದ ವಿಷಯಗಳು ನಮಗೆ ತಿಳಿಯಬೇಕಲ್ಲವೆ? ಏಕರಾಷ್ಟ್ರೀಯತೆಯ ದಿನಗಳಿವು. ಅಂತಪ್ರಾಂತೀಯ ಬಾಂಧವ್ಯವು ಬೆಳೆದಷ್ಟೂ ರಾಷ್ಟ್ರೀಯತೆಯು ದೃಢ ಪಡುವದು. ಅದಕ್ಕಾಗಿ ಪರಸ್ಪರ ಪರಿಚಯವು ಆವಶ್ಯಕ. ಇಂತಹ ಪರಿಚಯಕ್ಕೆ ಸಾಹಿತ್ಯಕ್ಕಿಂತ ಮೇಲಾದ ಸಾಧನವಾವುದು?

ಈಚೆಗೆ ರಶಿಯನ್ ಫ್ರೆಂಚ ಮೊದಲಾದ ಪರದೇಶೀಯ ಭಾಷೆಗಳಲ್ಲಿಯ ಕಥೆಗಳನ್ನು ಸಹ ಇದ್ದಕ್ಕಿದ್ದ ಹಾಗೆಯೆ ಪರಿವರ್ತಿಸುವ ಪರಿಪಾಠವು ಹೆಚ್ಚಾಗಿದೆಯೆಂಬುದೂ ಅದು ವಿದ್ವಾಂಸರಿಂದ ಅನುಮೋದಿತವಾಗಿದೆಯೆಂಬುದೂ ವಾಚಕರಿಗೆ ಅರಿಯದ ವಿಷಯವಲ್ಲ. ಅದರ ಕಾರಣ ಮೀಮಾಂಸೆಯನ್ನು ಮಾಡಲು ಇದು ಸ್ಥಳವಲ್ಲ.

ತಮ್ಮ ಕಥೆಗಳನ್ನು ಕನ್ನಡದಲ್ಲಿ ಅನುವಾದಿಸಲು ಒಪ್ಪಿಗೆಯನ್ನು ಕೊಟ್ಟದ್ದಕ್ಕಾಗಿ ಶ್ರೀ. ಪರಶುರಾಮರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ಗು. ಬೇಂದ್ರೆಯವರು ನನ್ನ ಬಿನ್ನಹವನ್ನು ಮನ್ನಿಸಿ ಈ ಕಥಾಸಂಗ್ರಹಕ್ಕೆ

ಮುನ್ನುಡಿಯನ್ನು ಬರೆದು ನನ್ನನ್ನು ಅನುಗ್ರಹೀತನನ್ನಾಗಿ ಮಾಡಿದ್ದಾರೆ. ಮನೋಹರ ಗ್ರಂಥಮಾಲೆಯವರು ನನ್ನ ಅನುವಾದವನ್ನು ಇಷ್ಟು ಸುಂದರವಾಗಿ ಪ್ರಕಟಿಸಿದ್ದಕ್ಕಾಗಿ ನಾನು ಉಪಕೃತನಾಗಿರುವೆನೆಂದು ಬೇರೆ ಹೇಳಬೇಕೆ ?

ಇದರಲ್ಲಿ ಪ್ರಕಟವಾದ ಚಿತ್ರಗಳನ್ನು ಬಂಗಾಲದ ಪ್ರಖ್ಯಾತ ಚಿತ್ರಕಾರರಾದ ಶ್ರೀ. ಯತೀಂದ್ರಕುಮಾರ ಸೇನರು ತೆಗೆದಿದ್ದಾರೆ. ಅವುಗಳಲ್ಲಿ ಅವರು ಅದ್ಭುತ ಕೌಶಲ್ಯವನ್ನು ತೋರಿಸಿದ್ದಾರೆ. ಪರಶುರಾಮರ ವ್ಯಂಗ್ಯವನ್ನು ಕುಂಚದ ಕೆಲ ರೇಖೆಗಳಲ್ಲಿಯೆ ಸೊಗಸಾಗಿ ವ್ಯಕ್ತಪಡಿಸಿದ್ದಾರೆ. ಕಥೆಗಳಿಗೆ ಇದರಿಂದ ಅಪೂರ್ವವಾದ ಸೊಬಗು ಬಂದಿವೆ.

ಕೊನೆಗೆ ಹೇಳುವದಿಷ್ಟೆ: ಈ ಅನುವಾದದಲ್ಲಿಯ ಗುಣಾಂಶವು ಶ್ರೀ. ಪರಶುರಾಮರದು; ದೋಷಾಂಶವು ನನ್ನದು.

ವಿನೀತ,

**ಜಲಧರ.**

# ಮುನ್ನುಡಿ

ಈ 'ಕುರಿಹಿಂಡ'ನ್ನು ಕನ್ನಡ ಓದುಗರ ಕಣ್ಣಿಗೆ ಹಾಕಿದ ನನ್ನ ತರುಣ ಮಿತ್ರರಾದ ಕಲಘಟಗಿಯ ಹಳಿಪ್ಪನವರ ಬಾಬೂರಾಯರು ತಾವೇ ಮಾಡಿಕೊಂಡ ಅರಿಕೆಯು ಈ ಪುಸ್ತಕಕ್ಕೆ ಸಾಕಿತ್ತು. ಆದರೆ ನಾನೊಂದು ಮುನ್ನುಡಿ ಬರೆಯಬೇಕೆಂದು ಅವರಾಸೆ. ಒಮ್ಮೊಮ್ಮೆ ಅವರಿಗೂ ನನಗೂ ನಿಮಿತ್ತಮಾತ್ರವಾಗಿ ಉಂಟಾಗಿದ್ದ ಶಿಷ್ಯ-ಶಿಕ್ಷಕ ಸಂಬಂಧವೂ ಈ ಆಸೆಗೆ ಒಂದು ಕಾರಣವಿರಬೇಕು. ಅದಲ್ಲದೆ ಹತ್ತಿಪ್ಪತ್ತು ಮುನ್ನುಡಿಗಳನ್ನು ಬರೆದದ್ದರಿಂದ ನನಗೂ ಮುನ್ನುಡಿಗೂ ಬೇಗ ಬಿಡದ ಹತ್ತುಗಡೆಯುಂಟಾಗಿದೆಯೋ ಏನೋ! ಅದೇನಿದ್ದರೂ ಹೌದೆನ್ನಬೇಕಾದ ಕೆಲಸಕ್ಕೆ ಹೌದೆಂದು ಹೇಳುವವರಿಗೆ ಹುಮ್ಮಸವಿರುವಷ್ಟು, ಅದನ್ನು ಕೇಳಿದರೆ ಆ ಕೆಲಸ ಮಾಡಿದವನಿಗೂ ಅಷ್ಟೇ ಹುರುಪು. ಈ ಭಾವನೆಯಿಂದಲೇ ಈ ಮುನ್ನುಡಿಯನ್ನು ಬರೆದಿದ್ದೇನೆ.

ಶ್ರೀ. ಹಳಿಪ್ಪನವರು ತಮ್ಮ ವಿದ್ಯಾವ್ಯಾಸಂಗಕ್ಕಾಗಿ ಪುಣೆ, ಕಾಶಿ, ಶಾಂತಿನಿಕೇತನಗಳಿಗೆ ಹೋಗಿ ಬಂದಿರುವದರಿಂದ ಸಹಜವಾಗಿಯೇ ಅನೇಕ ಭಾಷಾವಿದರಾಗಿದ್ದಾರೆ. ತಮ್ಮ ವಿನೋದಕ್ಕಾಗಿಯೂ, ಸಂಸ್ಕಾರಕ್ಕಾಗಿಯೂ ಅನೇಕ ಸಾಹಿತ್ಯಗಳನ್ನು ಅವರು ಓದಿಕೊಳ್ಳುವದುಂಟು. ತಮಗೆ ಆನಂದವನ್ನು ಕೊಟ್ಟ ಶ್ರೀಯುತ 'ಪರಶುರಾಮ'ರ ಕೃತಿಯನ್ನು ಕನ್ನಡಕ್ಕೆ ತಂದು ತಮ್ಮ ವ್ಯಾಸಂಗದ ಉತ್ಕಟತೆಯೊಡನೆ ಕನ್ನಡದ ಪ್ರೀತಿಯನ್ನೂ ಅವರು ವ್ಯಕ್ತಪಡಿಸಿದ್ದಾರೆ. ಮೂಲ ಲೇಖಕರ ಬಂಗಾಲೀ ಸಮಯ ವಿಧಾನಗಳನ್ನನುಸರಿಸಿಯೂ ಒಟ್ಟಿನಲ್ಲಿ ತಿರುಳುಗೆಡದಂತೆ ಹಾಸ್ಯಪಾಕವನ್ನು ಕನ್ನಡಕ್ಕಿಳಿಸಿದ್ದಾರೆ. ಕೆಲವು ತೊಡಕುಗಳು ಅನಿವಾರ್ಯವಾಗಿ ಬಂದಿವೆ. ಉತ್ತರ ಕರ್ನಾಟಕದ ರೂಢಿಪ್ರಯೋಗಗಳು ಎಲ್ಲೆ ಮೀರಿಲ್ಲ. ತೀರ ಬಂಗಾಲಿಯಾಗಗೊಡದೆ ಮೂಲ ಹಾಸ್ಯಕಾರಕ ಶೈಲಿಯ ಒನಪು ಒಯ್ಯಾರಗಳನ್ನು ತಮ್ಮ ಶೈಲಿಯಲ್ಲಿಯೂ ಸಾಕಷ್ಟು ಜಾಣ್ಮೆಯಿಂದ ಲೇಖಕರು ಹೊಂದಿಸಿಕೊಂಡಿದ್ದಾರೆ.

ಈ ಬಗೆಯ ಬರೆವಣಿಗೆಯು ಕನ್ನಡದಲ್ಲಿ ಸಾಕಷ್ಟಿಲ್ಲ. ಪುಸ್ತಕರೂಪ ದಲ್ಲಿ ಬಂದದ್ದು ಬಹಳ ಸ್ವಲ್ಪ. 'ಸಮ್ಮಾರಿನ ರಸಿಕರು,' 'ಹಳ್ಳಿಯ ಚಿತ್ರಗಳು' 'ಜೀವನದ ಸೊಗಸು' 'ಗ್ನಾನ' ಇವೇ ಮೊದಲಾದುವು ವಿವಿಧ ಹಾಸ್ಯಕೋನ ಗಳನ್ನು ತೋರಿಸುವವು. 'ವಿಶ್ವಾಮಿತ್ರನ ಸೃಷ್ಟಿ' 'ಇಜ್ಜೋಡು' ಈ ಬಗೆಯ ಕಾದಂಬರಿಗಳಲ್ಲಿಯೂ, ಶ್ರೀ ಕೈಲಾಸಂ, ಕಾರಂತ, ಜಹಗಿರದಾರ ಇವರುಗಳ ಉಪರೂಪಕಗಳಲ್ಲಿಯೂ ವ್ಯಂಗ್ಯಹಾಸ್ಯದ ವಿವಿಧವಿಲಾಸವು ಕನ್ನಡ ವಾಚ ಕರ ಪರಿಚಯದಾಗಿದೆ. ಇನ್ನೊಂದು ಸಾಹಿತ್ಯದಿಂದ ಇದೊಂದು ಮಾದರಿ ಯನ್ನು ಚಿತ್ರಗಳೊಂದಿಗೆ ಒದಗಿಸಿದ್ದುದು ನವಸಾಹಿತ್ಯ ನಿರ್ಮಿತಿಗೆ ಉದ್ದೀ ಪಕವೂ ಉಪಕಾರಕವೂ ಆಗುವಂತಿದೆ. ಅನುವಾದಕರು ಒಳ್ಳೆಯ ಲೇಖಕನ ಒಳ್ಳೆಯ ಲೇಖನಗಳನ್ನು ಆಯ್ದುಕೊಳ್ಳುವದರಲ್ಲಿ ಉಚಿತಜ್ಞತೆಯನ್ನು ತೋರಿಸಿದ್ದಾರೆ.

ಮಾನವ ಸ್ವಭಾವವೊಂದು ನಗೆಯ ಹುತ್ತ. ಜ್ಞಾನಿ ಅಜ್ಞಾನಿಯ ರೆಂಡು ನಗುವಂತೆ ತನ್ನ ಹುಚ್ಚುತನದ ಅರಿವಾದಾಗ ತಾನಾಗಿ ಚಿಮ್ಮಿ ಬರುವ ರಸನಗೆಯ ಊಟೆಯೊಂದು ಮಾನವನ ಹೃದಯಾಂತರಾಳದಲ್ಲಿದೆ. ಆ ರಸದಲ್ಲಿ ಜಳಕ ಹೊಂದಿ ಮಾಸಿದ ಮನವು ಮಡಿಯಾಗುವದು. ನಗೆ ಯೊಂದು ಬೆಳಕು. ವ್ಯಂಗ್ಯಹಾಸ್ಯದ ವಕ್ರಕಿರಣಗಳ ಬೆಳಕಿನಲ್ಲಿ ಮಾನವರ ಮೋಹ ಮೋಸಗಳ ವೈಪರೀತ್ಯವು ವಿವರವಿವರವಾಗಿ ಕಣ್ಣಿಗೆ ಬೀಳುವದು. ನಗೆಯಲ್ಲಿ ಇನ್ನೊಂದು ಶಕ್ತಿಯಿದೆ. ಕೀರ್ತಿಯ ಆಸೆಯೂ ಅಪಕೀರ್ತಿಯ ಅಂಜಿಕೆಯೂ ಎಂಥೆಂಥ ಉದಾತ್ತ ಚರಿತರಿಗೂ ಅಂಟಿಕೊಂಡಿರುವದು. ನಗೆ ಯೊಂದು ಸಾಮಾನ್ಯವಾದ ಕ್ಷುದ್ರ ಚೇಷ್ಟೆ. ಆದರೂ ನಾಲ್ಕು ಜನರು ನಕ್ಕಾರು ಎಂಬ ಭೀತಿಗಿಂತ ಸೂಕ್ಷ್ಮವಾದ ಭೀತಿ ಬೇರೆಯಿದೆಯೇ ? ಎಲ್ಲರೂ ತಮ್ಮ ಕೂಡ ನಗಬೇಕು, ತಮ್ಮ ಕಂಡು ನಗಬಾರದು ಎಂದು ಜನರು ಎಚ್ಚರದಿಂದ ನಡೆದುಕೊಳ್ಳುವರು. ಹೂವಿಗಿಂತ ಹಗುರಾದರೂ ನಗೆಯು ವಜ್ರಾಯುಧಕ್ಕಿಂತಲೂ ಬಿರಸು. ಇದರ ಹೊಡೆತಕ್ಕೆ ಎಷ್ಟೋ ಮಾನಗಳು ಮಣ್ಣುಗೂಡಿವೆ. ಸಮಾಜದೊಳಗಿನ ಪ್ರತಿಷ್ಠಿತರು, ಕರ್ಮಠರೊಳಗಿನ ಶಿಷ್ಟರು, ಅಧಿಕಾರಮದದಲ್ಲಿದ್ದ ಆಢ್ಯರು, ಜ್ಞಾನಿಗಳೆನಿಸುವ ಅಹಂ ಮನ್ಯರೂ, ಹತ್ತರ ಕೂಡ ಹನ್ನೊಂದೆನ್ನುವ ಕುರಿಗಳೂ ಎಲ್ಲರೂ ವ್ಯಂಗ್ಯ

ಹಾಸ್ಯದ ವಿಚಿತ್ರ ಪ್ರಕಾಶಕ್ಕೆ ಬೆದರುವರು. ಜನಸಾಮಾನ್ಯಕ್ಕೂ ಈ ಪ್ರಕಾಶವನ್ನುಂಟು ಮಾಡಿಕೊಳ್ಳುವ ಸಂಸ್ಕಾರ ಕೊಡುವದೇ ಈ ಬಗೆಯ ಸಾಹಿತ್ಯದ ಶಕ್ತಿ.

ಹಾದಿ ತೋರಿಸುವ ಬೆಳಕು ಹರಡಬಲ್ಲ ವ್ಯಂಗ್ಯ ಹಾಸ್ಯಕಾರನಿಗೂ, ತಮಾಷೆಗಾಗಿ ಗೇಲಿ ಮಾಡುವ ಕುಚೇಷ್ಟೆಗಾರನಿಗೂ ಅಂತರವಿದೆ. ಎಲ್ಲದರ ಬೆಲೆತಪ್ಪಿ ಹೋದ ಸಮಾಜಕ್ರಾಂತಿಯ ಈ ಕಾಲದಲ್ಲಿ ನಗೆಚೇಷ್ಟೆಯಾವುದು ಕುಚೇಷ್ಟೆಯಾವುದು ಎಂಬುದನ್ನು ಹೇಳುವದು ಬಿಗಿಯಾಗಿದೆ. ಈ ಭೇದವು ಲೇಖಕರ ಮನಃಸಂಸ್ಕಾರದ ಫಲವಾಗಿದೆ. ಈ ಬಗೆಯ ಲೇಖನದಿಂದಾಗುವ ಪರಿಣಾಮದಿಂದಲೂ ಕೆಲಮಟ್ಟಿಗೆ ಅದರ ಗುಣನಿರ್ಣಯವಾಗಬಹುದು. 'ಪರಶುರಾಮ'ರು ತಮ್ಮ ಚಪ್ಪಕೊಡಲಿಯ ಕಾದಬಾಯನ್ನು ನಗೆಯ ನೀರಿನಲ್ಲದ್ದಿದ್ದಾರೆ. ಎಲ್ಲ ಕಥನಗಳನ್ನು (ಕೊನೆಯವೆರಡು ಬಿಟ್ಟು) ಕಾಮಸೂತ್ರದಲ್ಲಿ ಹೆಣೆದು ಕಥೆಯ ರೂಪಕ್ಕೆ ತಂದಿದ್ದಾರೆ. ಅವರ ವರ್ಣನೆಗಳಲ್ಲಿ ಚಿತ್ರಕ ಶಕ್ತಿಯಷ್ಟೆ, ಸರಸದ ಬಣ್ಣಗಾರಿಕೆಯಿದೆ. ಅವರ ಮಾತುಗಾರಿಕೆಯ ಧ್ವನಿ-ಸರಸ-ವ್ಯಂಗ್ಯ-ಕಟುಕಿ-ಕೊಂಕುಗಳೆಲ್ಲವೂ ಬೆರೆತುಕೊಂಡಿವೆ. ನಮ್ಮ ಸಮಾಜದ ದೋಷದೌರ್ಬಲ್ಯ, ಕೊಂಕುಕೊರತೆ, ಅಂಧವಿಶ್ವಾಸ ಮೂಢರೂಢಿ, ಆತ್ಮವಂಚನೆ ಪರವಂಚನೆ; ನೀತಿನಡಾವಳಿಗಳೆಲ್ಲವೂ ನಗೆಯ ನೆರಳು ಬೆಳಕಾಟದಲ್ಲಿ ವಿನೋದಕ್ಕೂ ವಿಚಾರಕ್ಕೂ ಅವಕಾಶಕೊಡುವಂತಾಗಿವೆ. ಹೀಗೆ ರಸದಲ್ಲಿ ನಾವು ತೇಲುವಾಗ ಮೂಲ ಚಿತ್ರಗಳು ಬಂಗಾಲೀ ಸಮಾಜದವೆಂದಾಗಲಿ, ಈ ಪುಸ್ತಕವು ಭಾಷಾಂತರವೆಂಬುದಾಗಲಿ ನೆನಪೇ ಉಳಿಯುವದಿಲ್ಲ. ಇದು ಮೂಲದೊಳಗಿನ ರಸದ ಹಾಗು ಕನ್ನಡದೊಳಗಿನ ಶೈಲಿಯ ಗುಣವೆಂದೇ ಹೇಳಬಹುದು.

ದ. ರಾ. ಬೇಂದ್ರೆ.

# ಕುರಿಹಿಂಡು

........ಒಮ್ಮಿಂದೊಮ್ಮೆ ಇದರ ಅಸಾಮಾನ್ಯತೆಯನ್ನು ನೋಡಿ ಬೆರಗಾದೆನು........ಪುಸ್ತಕವು ಚರಿತ್ರ–ಚಿತ್ರಶಾಲೆಯಾಗಿದೆ....ಲೇಖಕನು ಒಂದರ ಮೇಲೊಂದು ಮೂರ್ತಿಯನ್ನು ಎರಕಹೊಯ್ದು ತೆಗೆದು ನಿಲ್ಲಿಸಿದ್ದಾನೆ. ನೋಡಿ, ನಾವು ಇವರನ್ನು ಎಂದಿನಿಂದಲೂ ಬಲ್ಲೆವೆಂದು ಅನಿಸುತ್ತದೆ. ಬಹಳವೇನು, ದೆವ್ವಗಳ ಬೀಡಿನಲ್ಲಿಯ ಭೂತಪ್ರೇತಗಳ ಸ್ಥಳವು ನನ್ನ 'ಭ್ರಮಣ–ವಿವರಣ'ದಲ್ಲಿ ಎಲ್ಲಿಯೋ ಬರೆದಂತಿದೆ........ಬರೆಹದ ದೃಷ್ಟಿಯಿಂದ ಈ ಪುಸ್ತಕವು ನನಗೆ ವಿಸ್ಮಯಕರವೆನಿಸಿದಂತೆ ಇದರಲ್ಲಿ ಇನ್ನೂ ಒಂದು ವಿಸ್ಮಯದ ವಿಷಯವಿದೆ. ಅದು, ಯತೀಂದ್ರಕುಮಾರ ಸೇನರ ಚಿತ್ರಾವಲಿ. ಲೇಖನಿಯ ಕೂಡ ಕುಂಚದ ಎಂತಹ ಸೊಗಸಾದ ಜತೆಯಿದೆ! ಲೇಖನದ ಧಾರೆಯೂ ರೇಖೆಯ ಧಾರೆಯೂ ಸಮಾನ ತಾಲದಲ್ಲಿ ಸಾಗಿವೆ; ಯಾವುದೂ ಹಿಂದುಮುಂದಿಲ್ಲ. ಹೀಗಾಗಿ ಇದರಲ್ಲಿಯ ಪಾತ್ರಗಳು ಭಾಷೆಯಲ್ಲಿ ಹಾಗೂ ರೂಪದಲ್ಲಿ, ಭಾವದಲ್ಲಿ ಹಾಗು ಭಂಗಿಯಲ್ಲಿ ಎಡಕ್ಕೂ ಬಲಕ್ಕೂ ಬಿಗಿಯಾಗಿ ಹೆಣೆದುಬಿಟ್ಟಿವೆ; ಓಡಿಹೋಗಲು ಅವಕಾಶವೇ ಇಲ್ಲ.

—ಶ್ರೀ ರವೀಂದ್ರನಾಥ ಠಾಕೂರ.

# ಕುರಿಹಿಂಡು

ಒಂದು ವರ್ಷದಲ್ಲಿ ೧೫೦ ಪುಟಗಳುಳ್ಳ ಆರು ಸರಸ ಗ್ರಂಥಗಳು

ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ ೩-೮-೦ ಮಾತ್ರ.

**ಮುಂದಿನ ಕುಸುಮ**

ಮನೋಹರ ಗ್ರಂಥಮಾಲೆಯ ೧೬ನೆಯ ಕುಸುಮ

# ಧೂಮಕೇತು

**(ಸಾಮಾಜಿಕ ಕಾದಂಬರಿ)**

ಬರೆದವರು:

**ಶ್ರೀ. ಕಡೆಂಗೋಡ್ಲು ಶಂಕರಭಟ್ಟ**

# ವಿರಿಂಚಿ ಮಹಾರಾಜ



ನಂಬರ ಒಂಬತ್ತು ಹಾಬಶೀಬಾಗಾನ ಲೇನಿನಲ್ಲಿರುವ ಮೆಸ್ (ಊಟದ ಮನೆ) ಚಿಕ್ಕದಾದರೂ ಚೊಕ್ಕಟವಾಗಿದೆ. ಇದರ ಕಾರಣವೆಂದರೆ ಅದರ ಮ್ಯಾನೇಜರರಾದ ನಿವಾರಣ ಮಾಸ್ತರರು ಒಳ್ಳೆ ವಿನೋದಪ್ರಿಯರಾದರೂ ಎಲ್ಲದರ ಮೇಲೆ ಅವರದು ಬಲು ತೀಕ್ಷ್ಣದೃಷ್ಟಿ. ಮೆಸ್ಸಿನಲ್ಲಿರುವವರೇನೊ ಐದಾರೆ ಜನ. ಆದರೆ ಎಲ್ಲರೂ ಮನೆತನದಿಂದ ಶ್ರೀಮಂತರು. ಕೂಡೇಳುವದಕ್ಕಾಗಿ ಬೇರೊಂದು ಕೋಣೆಯಿದೆ. ಅದರಲ್ಲಿ ಮೇಲಾದ ಜಮಖಾನಿಯನ್ನು ಹಾಸಿದ್ದಾರೆ. ವಿವಿಧ ವಾದ್ಯಗಳು, ಪಗಡಿ, ಇಸ್ಪೇಟು, ಚದುರಂಗ, ಕ್ರಿಕೆಟ್‌ಬ್ಯಾಟ್ ಟೆನಿಸ್‌ರ್‍ಯಾಕೆಟ್ ಮೊದಲಾದ ಆಟದ ಸಾಮಾನುಗಳು ಅಲ್ಲಲ್ಲಿ ವ್ಯವಸ್ಥಿತವಾಗಿ ಇಡಲ್ಪಟ್ಟಿವೆ. ಕೆಲ ಪತ್ರ-ಪತ್ರಿಕೆಗಳೂ ಇದೇ ಬಗೆಯ ಚಿತ್ತರಂಜನೆಯ ಅನೇಕ ಉಪಕರಣಗಳೂ ತಂತಮ್ಮ ಸ್ಥಳಗಳಲ್ಲಿ ಶೋಭಿಸುತ್ತಿವೆ. ನಿನ್ನೆಯಿಂದ ದುರ್ಗಾಪೂಜೆಯ ರಜೆ ಆರಂಭವಾಗಿದೆ. ಆದ್ದರಿಂದ ಬಹುತರವಾಗಿ ಮೆಸ್ಸಿನ ಎಲ್ಲ ಜನರು ಊರಿಗೆ ಹೊರಟು ಹೋಗಿದ್ದಾರೆ. ಉಳಿದವರೆಂದರೆ ನಿವಾರಣ ಹಾಗು ಪರಮಾರ್ಥ ಇವರಿಬ್ಬರೆ. ಇವರೆಲ್ಲಿಗೂ ಹೋಗುವದಿಲ್ಲ. ಏಕೆಂದರೆ ಇವರ ಮಾವಂದಿರ ಮನೆಯವರೇ ಕಲಕತ್ತೆಗೆ ಬರುವವರಿದ್ದಾರೆ.

ನಿವಾರಣರು ಕಾಲೇಜಿನಲ್ಲಿ ಪ್ರೊಫೇಸರರಾಗಿದ್ದಾರೆ. ಪರಮಾರ್ಥರ ಇನ್ಸ್ಯೂರನ್ಸಿನ ದಲಾಲಿಯನ್ನೂ ಹಠಯೋಗ ಮತ್ತು ಥಿಯಾಸಫಿಯ ಅಭ್ಯಾಸವನ್ನೂ ಮಾಡುತ್ತಾರೆ. ಈ ದಿನ ಸಾಯಂಕಾಲ ಇವರಿಬ್ಬರೂ ನೆ ಮನೆಯ ನಿತಾಯಿಬಾಬುಗಳೂ ಕೂಡಿಕೊಂಡು ಹರಟೆ ಹೊಡೆಯುತ್ತಿದ್ದಾರೆ ಮೆಸ್ಸಿನ ಮೊಗಸಾಲೆಯಲ್ಲಿ. ನಿತಾಯಿಬಾಬುಗಳು ದಿನಾಲು ಇಲ್ಲಿಗೆ ಬಂದು ಹರಟೆ ಕೊಚ್ಚಿ ಹೋಗುತ್ತಾರೆ. ತುಸು ವಯಸ್ಸಾಗಿರುವ ಮೂಲಕ ಮೆಸ್ಸಿನ ಹುಡುಗರು ಅವರಿಗಷ್ಟು ಮರ್ಯಾದೆ ಕೊಡುತ್ತಾರೆ. ಅರ್ಥಾತ್ ಅವರ ಬೆನ್ನಹಿಂದೆ ಸಿಗರೇಟು ಸೇದುತ್ತಾರೆ.

ನಿತಾಯಿಬಾಬೂ ಹೇಳುತ್ತಿದ್ದರು. " ಮನಸ್ಸಿನಲ್ಲಿ ಸೊಗಸು ಇಲ್ಲವಯ್ಯಾ. ಒಕ್ಕಲಗಿತ್ತಿ ಓಡಿ ಹೋಗಿದ್ದಾಳೆ. ಕೂಸಿಗೆ ಜ್ವರ, ಹೆಂಡತಿಯ ಕಿಟಿಕಿಟಿ ಸಾಕುಸಾಕಾಗಿದೆ. ಆಫೀಸಿಗೆ ಹೋಗಿ ಏನೋ ಒಂದು ಗಳಿಗೆ ಮಲಗಿಕೊಳ್ಳಬೇಕೆಂದರೆ ಆ ಹೊಸ ಸಾಹಬನೊಬ್ಬ ಬಂದಿರುವನಲ್ಲ– ದೆವ್ವನಂತೆ ತಿರುಗುತ್ತಿರುತ್ತಾನೆ ಮಗ ! "

**ಪರಮಾರ್ಥ:**—ಅದೇಕೆ, ನಿಮ್ಮ ಆಫೀಸಿನಲ್ಲಿ ಬಹಳ ಚೆನ್ನಾದ ವ್ಯವಸ್ಥೆಯಿದೆ ?

**ನಿತಾಯಿ:**— ಆ ದಿನಗಳು ಹೋದವಯ್ಯಾ, ಹೋದವು. ಇತ್ತೊಂದು ಕಾಲ, ಆ ಮೆಕೆಂಝಿ ಸಾಹೇಬನ ಆಳಿಕೆಯಲ್ಲಿ. ಪರಬಾ ಮುಕರ್ಜಿಯವರು ಗೊತ್ತುಂಟೋ ? ಶಾಮನಗರದವರು. ರಾಯರು ಎರಡುಗಂಟೆಗೆ ಅಫು ತಿನ್ನುತ್ತಿದ್ದರು. ಎರಡುವರೆಯಿಂದ ನಾಲ್ಕುವರೆ ವರೆಗೆ ಮಲಗುತ್ತಿದ್ದರು. ನಾವೆಲ್ಲರೂ ನಡುವೆ ಎದ್ದು ಟಿಫಿನ್‌ರೂಮಿನ ಕಡೆಗಾದರೂ ಹಾದು ಬರುತ್ತೇವೆ. ಆದರೆ ರಾಯರು ಖುರ್ಚಿಯನ್ನು ಬಿಟ್ಟು ಏಳುತ್ತಿರಲೇ ಇಲ್ಲ. ಒಂದು ದಿನ ಹೀಗಾಯಿತು: 'ಲೆಜರ'ದ ಬೇರೀಜು ಮಾಡಮಾಡುತ್ತ ಕಾಗದದ ತುದಿಗೆ ಬಂದು ಮುಟ್ಟಿದ್ದರು; ಅಷ್ಟರಲ್ಲಿ ಒಂದು ಜಂಪು ಬಂತು. ಅಲುಗಾಟವಿಲ್ಲ, ಗೊರಿಕೆಯಿಲ್ಲ, ಕೊರಳು ಸಹ ಬಾಗಿಲ್ಲ. ಟೋಟಲಿನ ಸ್ಥಳದಲ್ಲಿ ಸರಿಯಾಗಿ ಲೇಖನಿಯನ್ನು ಹಿಡಿದುಕೊಂಡು ಕುಳಿತಿದ್ದಾರೆ. ಅಸಾಧಾರಣ ಕ್ಷಮತೆಯದು? ದೂರದಿಂದ ನೋಡಿ ರಾಯರಿಗೆ ನಿದ್ದೆ ಹತ್ತಿದೆಯೆಂದು ಹೇಳುವದು ಯಾರಿಗಾದೀತು ! ಅಷ್ಟರಲ್ಲಿ ಮೆಕೆಂಝೀ ಸಾಹೇಬರು

ಬಂದರು. ಎಲ್ಲರೂ ಕೆಲಸದಲ್ಲಿ ಮಗ್ನರಾಗಿ ಬಿಟ್ಟಿದ್ದಾರೆ, ಮೋರೆ ಎತ್ತಿ ನೋಡಲೂ ಅವಕಾಶವಿಲ್ಲ. ಸಾಹೇಬರು ಪರದಾಬಾಬುಗಳ ಹತ್ತಿರ ನಿಂತು ಕೊಂಡು ಎಷ್ಟೋ ಹೊತ್ತು ನೋಡಿದರು. ಆಮೇಲೆ ಅವರ ಬೆನ್ನ ಹಿಂದೆ ಚುಟಿಕೆ ಹೊಡೆದರು. ರಾಯರು ಬೆಚ್ಚಿಬಿದ್ದು ಪಿಳಿಪಿಳಿ ಕಣ್ಣುಬಿಡುತ್ತ ಬಡ ಬಡಿಸತೊಡಗಿದರು. 'ಮೂವತ್ತೇಳಲೆ ಏಳು, ಕೈಲೆ ಮೂರು.' ಸಾಹೇಬರು



'ಮೂವತ್ತೇಳಲೆ ಏಳು, ಕೈಲೆ ಮೂರು'

ನಕ್ಕು ಹೇಳಿದರು "ಹ್ಯಾವ್ ಎ ಕಪ್ ಆಫ್ ಟೀ, ಬಾಬೂ" (ರಾಯರೆ, ಒಂದು ಕಪ್ ಚಹ ಕುಡಿಯಿರಿ). ಹೀಗಿತ್ತು ಆಗ. ಈಗ ಆ ರಾಮನೂ ಇಲ್ಲ, ಆ ಅಯೋಧ್ಯೆಯೂ ಇಲ್ಲ. ಸಂಸಾರವಂತೂ ನನಗೆ ತಲೆಚಿಟ್ಟು ಹಿಡಿದಿದೆ. ಯಾವನಾದರೊಬ್ಬ ಒಳ್ಳೆಯ ಸಾಧು ಸನ್ಯಾಸಿಯು ಗಂಟುಬಿದ್ದರೆ ಎಲ್ಲ ವನ್ನೂ ಬಿಟ್ಟು ಹೊರಡಬೇಕೆನ್ನುತ್ತೇನೆ.

**ಪರಮಾರ್ಥ:**— ಜಗನ್ನಾಥ ಘಾಟಿನಲ್ಲಿ ಇಂದು ಒಬ್ಬ ಸಾಧು ವನ್ನು ನೋಡಿದೆ,– ಆಶ್ಚರ್ಯ! ಜನರು ಆವನಿಗೆ ನುರೀಚ್ಯಾನಂದರೆಂದು ಕರೆಯುತ್ತಾರೆ. ಅವನು ತಿನ್ನುವದು ಬರೀ ಮೆಣಸಿನಕಾಯಿ! ಅನ್ನವಿಲ್ಲ, ಬೇಳೆಯಿಲ್ಲ, ರೊಟ್ಟಿಯಿಲ್ಲ– ಬರೀ ಮೆಣಸಿನಕಾಯಿ. ಸಾವಿರಾರು ಜನರು ಆವನ ಕಡೆಗೆ ಔಷಧ ತೆಗೆದುಕೊಳ್ಳಲು ಹೋಗುತ್ತಾರೆ. ಸಾಧುವು ಎಲ್ಲ ರಿಗೂ ಒಂದೊಂದು ಮಂತ್ರಿಸಿದ ಮೆಣಸಿನಕಾಯಿಯನ್ನು ಕೊಡುತ್ತಾನೆ. ಆದರಿಂದ ಎಲ್ಲರ ಎಲ್ಲ ರೋಗಗಳೂ ಓಡುತ್ತವೆ. ಆತನ ಗುರುಗಳ ಸಾಧನೆ ಯಂತೂ ಅದಕ್ಕಿಂತ ಮಿಗಿಲಾಗಿದೆಯಂತೆ! ಅವರು ತಿನ್ನುವದು ಬರೀ ಕಟ್ಟಿ ಗೆಯ ಪುಡಿ– ಕೊರೆಯುವಾಗ ಉದರುತ್ತದೆಯಲ್ಲ, ಅದು!

**ನಿತಾಯಿ:**—ಏನಯ್ಯಾ ಮಾಷ್ಟರ, ನೀನಂತೂ ಫಿಲಾಸಫಿಯಲ್ಲಿ (ತತ್ವಜ್ಞಾನ) ಎಮ್. ಎ. ಪಾಸಾಗಿರುವಿ. ಮೆಣಸಿನಕಾಯಿ ಕಟ್ಟಿಗೆಯ ಪುಡಿ ಇವೆಲ್ಲವುಗಳ ಆಧ್ಯಾತ್ಮಿಕ ತಾತ್ಪರ್ಯವೇನೆಂಬುದನ್ನು ಹೇಳ ಬಲ್ಲೆಯಾ?....ಮಹಾರಾಯಾ, ಸಾಕುಮಾಡು ನಿನ್ನ ಬಾರಿಸುವಿಕೆ; ಕೇಸ ರಿಟ್ಟಿತು.

ನಿವಾರಣ ಮಾಷ್ಟರರು ಮೊದಲು ಒಂದು ಮಾಸಪತ್ರಿಕೆಯನ್ನು ತೆಗೆ ದುಕೊಂಡು ಆದರ ಪಾನುಗಳನ್ನು ತಿರುವಿಹಾಕುತ್ತಿದ್ದರು. ಆದರಲ್ಲಿ ನಾಲ್ಕಾರು ಬಳ್ಳೆ ಕತೆಗಳು ಅಚ್ಚಾಗಿದ್ದವು. ಒಂದೊಂದರ ನಾಯಿಕೆಯು ಒಬ್ಬೊಬ್ಬ ಸತೀ–ಸಾಧ್ವೀ ವಾರಾಂಗನೆಯಾಗಿದ್ದಳು. ಕೊನೆಗೆ ಆವರು ಪತ್ರಿ ಕೆಯನ್ನು ಚೆಲ್ಲಿಕೊಟ್ಟು ಒಂದು ತಬಲೆಯನ್ನು ತೆಗೆದುಕೊಂಡು ದಪದಪ ಬಡೆಯತೊಡಗಿದರು. ನಿತಾಯಿಬಾಬುಗಳ ಮಾತು ಕೇಳಿ ಬಾರಿಸುವದನ್ನು ನಿಲ್ಲಿಸಿ ನುಡಿದರು.

"ರಾಯರೆ, ಅವೆಲ್ಲ ಭಿನ್ನ ಭಿನ್ನ ಸಾಧನೆಯ ಮಾರ್ಗಗಳು. ಹೇಗೆ ಜ್ಞಾನಮಾರ್ಗ ಕರ್ಮಮಾರ್ಗ,–ಭಕ್ತಿಮಾರ್ಗಗಳೋ ಹಾಗೆಯೆ ಮೆಣಸಿನ ಕಾಯಿ ಮಾರ್ಗ, ಕಟ್ಟಿಗೆಪುಡಿ ಮಾರ್ಗ, ಲವಣ ಮಾರ್ಗ, ಏಕಾದಶೀ ಮಾರ್ಗ, ಗಾಂಜೀ–ಮಾರ್ಗ, ಚಂಡಿಕೆ–ಮಾರ್ಗ, ಗಡ್ಡದ–ಮಾರ್ಗ ಕಾಕ ಮಾರ್ಗ—"

**ನಿತಾಯಿ:**—ಕಾಕಮಾರ್ಗ ಎಂತಹದು ?

**ನಿವಾರಣ:**—ಗೊತ್ತಿಲ್ಲವೆ ನಿಮಗೆ ? ಹೋದವರ್ಷ ಹರಿಹರ ಛತ್ರದ ಜಾತ್ರೆಗೆ ಹೋಗಿದ್ದೆ. ನೋಡಿದೆ, ಒಂದು ಕಡೆಗೆ ಬಿದರಿನ ಒಂದು ದೊಡ್ಡ ಪಂಜರದಲ್ಲಿ ನೂರಾರು ಕಾಗೆಗಳು ಕಾಕಾ ಎನ್ನುತ್ತಿವೆ. ಬಳಿಯಲ್ಲಿ ಒಬ್ಬ ಮನುಷ್ಯನು ಕುಳಿತುಕೊಂಡು ಕೂಗುತ್ತಿದ್ದಾನೆ. "ಎರಡಾಣೆ ಕಾಗೆ, ಎರಡೆರಡಾಣೆ." ನಾ ತಿಳಿದೆ, ಇವು ಪೇಶಾವರ ಅಥವಾ ಮುಲ್ತಾನದ ಕಾಗೆಗಳಾಗಿರಬಹುದು; ಸ್ಪಷ್ಟವಾಗಿ ಮಾತಾಡಲಿಕ್ಕೆ ಬರುತ್ತಿರಬಹುದು. ಪುಂದಿಯಾಗಿ ಕಾಣುವಂತಹ ಒಂದು ಕಾಗೆಯ ಹತ್ತರ ಹೋಗಿ ಸಿಳ್ಳು ಹೊಡೆದು ಅಂದೆ, "ಅನ್ನೋ, ಸೀತಾರಾಮ, ರಾಧಾಕಿಸನ." ಆದರೆ ಅದು ಕುಕ್ಕಲಿಕ್ಕೆ ಬಂತು. ಕಾಗೆಯವನೆಂದ, "ರಾಯರೆ ಕಾಗೆ ಮಾತಾಡುವದಿಲ್ಲ." "ಹಾಗಾದರೆ ಏನು ಮಾಡುತ್ತದೆ ? ಕಾಗೆಯ ಮಾಂಸವಂತೂ ಕಹಿಯಾಗಿರುತ್ತದೆಯಂತೆ.'ಸುಕ್ತ' ಮಾಡಲಿಕ್ಕೆ ಕೊಳ್ಳುತ್ತಾರೆಯೊ" ? ಎಂದು ಕೇಳಿದ್ದಕ್ಕೆ ಅವ ಹೇಳಿದ. "ಇಲ್ಲ, ಹಾಗಲ್ಲ. ಈ ಕಾಗೆಗಳು ಪಂಜರದಲ್ಲಿ ಹಿಡಿದು ಹಾಕಲ್ಪಟ್ಟಿವೆಯಷ್ಟೆ ? ಎರಡೆರಡಾಣೆ ಕೊಟ್ಟು ಎಷ್ಟು ಬೇಕಷ್ಟು ಕಾಗೆಗಳನ್ನು ಕೊಂಡು ಜೀವಗಳನ್ನು ಬಂಧನದಶೆಯಿಂದ ಮುಕ್ತಮಾಡಬಹುದು. ನಿಮಗಾದರೂ ಮುಕ್ತಿ ದೊರೆಯುವದು." ಆಗ ವಿಚಾರ ಬಂದಿತು, ಮೋಕ್ಷದ ಮಾರ್ಗವು ಎಷ್ಟು ವಿಚಿತ್ರವಾಗಿದೆ ! ಎರಡನೆಯವರು ಮುಕ್ತಿಯನ್ನು ಪಡೆಯಲೆಂದು ಪಾಪ ಈ ಕಾಗೆಯವನು ತನ್ನ ಪರಲೋಕವನ್ನು ಹಾಳುಮಾಡಿಕೊಳ್ಳುತ್ತಿದ್ದಾನೆ. ಇದಕ್ಕೇ ಅನ್ನುವದು Conservation of virtue; ಒಬ್ಬನು ಪಾಪ ಮಾಡದೆ ಮತ್ತೊಬ್ಬನಿಗೆ ಪುಣ್ಯ ಬರುವಂತಿಲ್ಲ.

ಹೀಗೆ ಮಾತುಕತೆ ನಡೆದಿರುವಾಗ ಒಬ್ಬ ಹ್ಯಾಟ್-ಕೋಟ-ಧಾರೀ ಇಪ್ಪತ್ತೆರಡು ಇಪ್ಪತ್ತುಮೂರು ವರ್ಷದ ಹುಡುಗ ಬಂದು ನುಗ್ಗಿದ. ಹಾಗು ಬೀಸಣಿಕೆಯ ರೆಗ್ಯುಲೇಟರನ್ನು ತುದಿಯವರೆಗೆ ಜಗ್ಗಿ ಹ್ಯಾಟ್ ಒಕ್ಕೊಟ್ಟು ನೆಲದಮೇಲೆ ದೊಪ್ಪನೆ ಕುಳಿತುಕೊಂಡ. ಈತನ ಹೆಸರು ಸತ್ಯವ್ರತ. ಈಚೆಗೆ ಓದು-ಬರೆಹಕ್ಕೆ ಶರಣು ಹೊಡೆದು ಆಫೀಸಿನಲ್ಲಿ ಕೆಲಸ ಹಿಡಿದಿದ್ದಾನೆ. ಸತ್ಯವ್ರತ ತೇಕುತ್ತ ಅಂದ. "ಉಶ್ ! ಎಂಥ ತೊಳಲಾಟವಿದು....!"

ಸತ್ಯವ್ರತನು ಯಾವಾಗಲೂ ತೊಳಲಾಟದಲ್ಲಿ ಸಿಗಿಬಿದ್ದಿರುತ್ತಾನೆ. ಆದ್ದರಿಂದ ಆತನ ಮಾತು ಕೇಳಿ ಯಾರೂ ಉತ್ಕಂಠೆಯನ್ನು ವ್ಯಕ್ತ ಮಾಡ ಲಿಲ್ಲ. ಮಾಡಬೇಕೇನು ಪಾಪ, ತನ್ನಷ್ಟಕ್ಕೆ ತಾನೇ ಅಂದುಕೊಳ್ಳಹತ್ತಿದ. "ಇಡೀ ದಿನ ಆಫೀಸಿನಲ್ಲಿ ಮೈಮುರಿ ದುಡಿದು ಸಂಜೆಯ ಮುಂದೆ ಏನೋ ಅಷ್ಟು ಬೇಸರ ಕಳೆದುಕೊಳ್ಳಬೇಕೆಂದರೆ ಅಷ್ಟೂ ಅವಕಾಶವಿಲ್ಲ. ಈ ದಿನ ಮ್ಯಾಟಿನಿಯಲ್ಲಿ 'ಸೀತಾ' ನೋಡಬೇಕೆಂದು ಮನಸ್ಸಿನಲ್ಲಿ ಬಂದಿತ್ತು. ಅಷ್ಟ ರಲ್ಲಿ ಅತ್ತಿಗೆ ಬಂದು, "ನತೂ, ನೀನು ಅಡ್ಡಹಾದೀ ಹಿಡಿದಿರುವಿ; ನಡೆ ನನ್ನ ಕೂಡ, ಹರಿದಾಸರ ಕೀರ್ತನ ಕೇಳಲಿಕ್ಕೆ" ಎಂದು ಪಟ್ಟಳು. ಮಾಡಲೇನು, ಹೋಗಬೇಕಾಗಿ ಬಂತು. ಆದರೆ ಎಲ್ಲವೂ ಸುಳ್ಳು. ಹರಿದಾಸರೇನೋ ಧರ್ಮಜೀವನದ ಮಾಧುರಿಯನ್ನು ಬಣ್ಣಿಸುತ್ತಿದ್ದರು. ಆದರೆ ನನ್ನ ತಲೆ ಯಲ್ಲಿ ಮಾತ್ರ ಜೊಂಡಿಂಗ...."

**ನಿತಾಯಿ**:— ಜೊಂಡಿಂಗs !

**ಸತ್ಯವ್ರತ**:— ಅಹುದು, ಮೂರು ಟನ್ ಜೊಂಡಿಂಗ ! ಫಾರ್ವರ್ಡ ಕಂಟ್ರ್ಯಾಕ್ಟು, ನವಂಬರ ಡಿಸೆಂಬರ ಶಿಪ್‌ಮೆಂಟು, ನಲವತ್ತು ಪೌಂಡ ಹದಿ ನೈದು ಶಿಲಿಂಗ ಟನ್ನು, ಸಿ–ಆಯ್–ಎಫ್ ಹಾಂಗಕಾಂಗ. ಚಾಯನಾದಲ್ಲಿ ಯುದ್ಧ ಆರಂಭವಾಗುವದಿದೆಯಲ್ಲ, ಅದಕ್ಕಾಗಿ ಮುಂಚಿತವಾಗಿಯೆ ಸಾಮಾನುಗಳನ್ನು ಕೂಡಿಹಾಕುತ್ತಿದ್ದಾರೆ.* ಒಂದು ತಿಂಗಳೊಳಗಾಗಿ ಎಲ್ಲ ಮಾಲನ್ನು ಪಿಪಾಯಿಗಳಲ್ಲಿ ತುಂಬಿಸಿ ಇಡಿಸಬೇಕೆಂದು ಬಡಾಸಾಹೇಬರ ಆರ್ಡರ ಆಗಿದೆ. ಎಲ್ಲಿ ಸಿಗಬೇಕೂ ss ಹೇಳಿರಿ? ಒಳ್ಳೆ ಸಂಕಟ ಬಂದಿದೆ !

**ನಿತಾಯಿ** :— ಏನಯ್ಯಾ ಸತ್ಯವ್ರತ, ನೀನಂತೂ ಬ್ರಹ್ಮೋಸಮಾಜದವ. ನಿಮ್ಮಲ್ಲಿ ಸುಳ್ಳು ಹೇಳುವದು ನಿಷಿದ್ಧವಾಗಿರಬಹುದು, ಅಲ್ಲವೆ ?

**ಸತ್ಯವ್ರತ**:— ಅದೇಕೆ ಹೇಳಬಾರದು ? ಅತ್ತಿಗೆಯ ಮುಂದೆ ಹೇಳ ದಿದ್ದರೆ ಆಯಿತು.

**ನಿವಾರಣ**:— ಸತ್ಯವ್ರತ, ನಿನಗೇನಾದರೂ ಒಳ್ಳೆ ಸಾಧೂ–ಗಿಧೂ ಕಣ್ಣಿಗೆ ಬಿದ್ದಿರುವರೇನೊ ?

* ಚೀನದೇಶದವರು ಜೊಂಡಿಂಗ ತಿನ್ನುತ್ತಾರೆಂದು ಅನೇಕರು ಕೇಳಿರಬಹುದು.

**ಸತ್ಯವ್ರತ:**— ಎಷ್ಟು ಬೇಕು ?

**ನಿತಾಯಿ:**— ಸಾಕು ಬಿಡೋ, ಹುಡುಗಾಟಿಕೆ ಮಾಡಬೇಡ..... ಮಂತ್ರತಂತ್ರಗಳಲ್ಲಿಯೆ ಮೊದಲು ನಿಮಗೆ ವಿಶ್ವಾಸವಿಲ್ಲ; ಸಾಧುಗಳ ಮಾತಂತೂ ದೂರ ಉಳಿಯಿತು.

**ಸತ್ಯವ್ರತ:**— ಅದೇಕೆ ಇಲ್ಲ ?.... ಆ ದಿನ ಅತ್ತಿಗೆಗೆ ಹಲ್ಲು ನೋವು ಎದ್ದಿತು. ಊಟ ನಿಂತಿತು. ನಿದ್ದೆ ಹಾರಿತು. ಮಾತಾಡುವದು ಗುಪ್ತ ಹೊರು ವಂತೆನಿಸಿತು....ಮಾವನನ್ನು ಮಾತ್ರ ಗದರಿಸುತ್ತಿದ್ದಳು. ಮನೆಯವರೆಲ್ಲರೂ ಹೌಹಾರಿ ಕುಳಿತರು. ಪೆಪರಮಿಂಟ್, ಆ್ಯಸ್ಪಿರಿನ್, ಯಂತ್ರ, ಮಂತ್ರ, ತಂತ್ರ ಏನು ಮಾಡಿದರೂ ಗುಣವಾಗಲಿಲ್ಲ. ಆಗ ಮಾವನು ಜೋರಿನಿಂದ ಪ್ರಾರ್ಥ ನೆಯನ್ನು ಆರಂಭಿಸಲು ಮೂರು ದಿನಗಳಲ್ಲಿ ಹಲ್ಲು ಕಿತ್ತಿಬಿತ್ತು.

ಪರಮಾರ್ಥನಿಗೆ ಸಿಟ್ಟು ಬಂತು. ಆತನೆಂದ. " ನೋಡು ಸತ್ಯವ್ರತ, ನಿನಗೆ ತಿಳಿಯದ ವಿಷಯವನ್ನು ಹೀಗೆ ಅಪಹಾಸ್ಯಮಾಡಿ ಮಾತಾಡುವದು ಸರಿಯಲ್ಲ. ಪ್ರಾರ್ಥನೆಯೆನ್ನು ಅಥವಾ ಮಂತ್ರಸಾಧನೆಯೆನ್ನು, ಎರಡೂ ಒಂದೆ. ಮಂತ್ರಸಾಧನೆಯಿಂದ ಪ್ರಚಂಡ 'ಎನರ್ಜಿ' (ಶಕ್ತಿ) ಯು ಉತ್ಪನ್ನ ವಾಗುತ್ತದೆಯೆಂಬುದನ್ನಾದರೂ ಒಪ್ಪುವಿಯಷ್ಟೆ ?

**ಸತ್ಯವ್ರತ:**— ಬೇಕಾದ ಹಾಗೆ ! ತೆಗೆದುಕೊಳ್ಳಿರಿ ಸಾಕ್ಷೀ, ರಾಜ ಶಾಹಿಯ ತಡಿತಾನಂದ ಮಹಾರಾಜರು—ಕಾಲೇಜಿನ ಹುಡುಗರು ರೇಡಿಯೋ ಯೋಗಿ ಅನ್ನುತ್ತಾರಲ್ಲ ! ಮಹಾರಾಜರಿಗೆ ಎರಡು ಚಂಡಿಕೆಗಳು. ಒಂದು ಪಾಝಿಟಿವ್ಹ, ಮತ್ತೊಂದು ನೆಗೇಟಿವ್ಹ. ಆಕಾಶದಿಂದ ಇಲೆಕ್ಟ್ರಿಸಿಟಿಯನ್ನು ಹೀರಿಕೊಳ್ಳುತ್ತಾರೆ. ಒಂದೊಂದು ಸ್ಪಾರ್ಕ ಎನೆದರೆ ಹದಿನೆಂಟು ಹದಿನೆಂಟು ಇಂಚು ಉದ್ದ ! ಹತ್ತರ ಹೋಗುವ ಎದೆ ಯಾರಿಗಾದೀತು,....ರೇಶ್ಮೆಯ ಮಡಿ ಉಟ್ಟುಕೊಂಡು ದರ್ಶನ ತೆಗೆದುಕೊಳ್ಳಬೇಕಾಗುತ್ತದೆ.

**ನಿವಾರಣ:**— ಊಹೂಂ. ಮೆಣಶಿನಕಾಯಿ, ಕಟ್ಟಿಗೆಯ ಪುಡಿ, ವೇದಾಂತ, ಇಲೆಕ್ಟ್ರಿಸಿಟೀ ಇವುಗಳಲ್ಲಿ ಯಾವುದೂ ನಿತಾಯಿಬಾಬುಗಳಿಗೆ ಒಗ್ಗುವದಿಲ್ಲ. ಯಾವನಾದರೊಬ್ಬ ಸಾದಾ ಸಾಧುವನ್ನು ನೋಡಿದ್ದರೆ ಹೇಳು. ಆದರೆ ಒಂದಿಷ್ಟು 'ಕರಾಮತಿ' ಮಾತ್ರ ಅವಶ್ಯ ಬೇಕು. ಕೇವಲ ಭಕ್ತಿತತ್ತ್ವದಿಂದ ಕೆಲಸ ಸಾಗದು. ಏನಂದಿರಿ ನಿತಾಯಿಬಾಬು ?

**ಪರಮಾರ್ಥ:**— ಹಾಗಾದರೆ ದಮ್‌ದಮಕ್ಕೆ ನಡೆಯಿರಿ, ಗುರುಪದ ಬಾಬುಗಳ ತೋಟಕ್ಕೆ— ವಿರಿಂಚಿ ಮಹಾರಾಜರ ಕಡೆಗೆ.

**ನಿವಾರಣ:**— ಯಾರು, ಅಲೀಪುರ ಕೋರ್ಟಿನ ವಕೀಲ ಗುರುದಾಸ ಬಾಬುಗಳು? ನಮ್ಮ ಪ್ರೊಫೆಸರ ನನಿಯ ಮಾವಂದಿರು? ಅವರಿಗೆ ಈ ಮಹಾರಾಜರು ಎಲ್ಲಿಂದ ಗಂಟುಬಿದ್ದರು? ಸತ್ಯವ್ರತ, ನಿನಗೇನಾದರೂ ಗೊತ್ತಿದೆಯೇನು?

**ಸತ್ಯವ್ರತ:**— ನನಿಯ ಬಾಯಿಂದೇನೋ ಕೇಳಿದ್ದೇನೆ, ಯಾವುದೋ ಗುರುವಿನ ಬಲೆಯಲ್ಲಿ ಸಿಕ್ಕಿದ್ದಾರೆಂದು. ಹೆಂಡತಿ ತೀರಿದಂದಿನಿಂದ ಗೃಹಸ್ಥನ ಮನಸ್ಸು ಬದಲಾಗಿ ಹೋಗಿದೆ. ಮೊದಲಂತೂ ಯಾವುದನ್ನೂ ನಂಬುತ್ತಿದ್ದಿಲ್ಲ.

**ನಿವಾರಣ:**— ಗುರುಪದಬಾಬುಗಳ ಒಬ್ಬ ಮಗಳು ಇದ್ದಾಳಲ್ಲವೆ, ಮದುವೆಯಾಗದವಳು?

**ಸತ್ಯವ್ರತ:**— ಅಹುದು! – ಬುಚಕೀ, ನನಿದಾದಾನ ಹೆಂಡತಿಯ ತಂಗಿ.

**ನಿವಾರಣ:**— ಒಳ್ಳೇದು ಪರಮಾರ್ಥ, ಮಹಾರಾಜರು ಹೇಗಿದ್ದಾರೆ ಹೇಳು ನೋಡುವ?

**ಪರಮಾರ್ಥ:**— ಆಶ್ಚರ್ಯವಾಗುತ್ತದೆ! ಒಬ್ಬನು ಅವರ ವಯಸ್ಸು ಐದುನೂರು ವರ್ಷ ಎಂದರೆ ಮತ್ತೊಬ್ಬನು ಐದುಸಾವಿರ ವರ್ಷ ಎಂದು ಹೇಳುತ್ತಾನೆ. ಆದರೆ ನೋಡಲು ನಿತಾಯಿಬಾಬುಗಳಂತೆ ಕಾಣುತ್ತಾರೆ. ಯಾರಾದರೂ ಕೇಳಿದರೆ ಅವರು ನಸುನಕ್ಕು - "ವಯಸ್ಸೆಂಬ ವಸ್ತುವೇ ಜಗತ್ತಿನಲ್ಲಿಲ್ಲ. ಕಾಲ, – ಎಲ್ಲವೂ ಒಂದೇ ಕಾಲ; ಸ್ಥಾನ – ಎಲ್ಲವೂ ಒಂದೇ ಸ್ಥಾನ; ಯಾರು ಸಿದ್ಧಪುರುಷರೋ ಅವರು ತ್ರಿಕಾಲ ತ್ರಿಲೋಕಗಳನ್ನು ಕೂಡಿಯೆ ಭೋಗಿಸುತ್ತಾರೆ." ಎಂದು ಉತ್ತರ ಕೊಡುತ್ತಾರೆ. ತಿಳಿಯಿರಿ–ಈಗ ಸಪ್ಟಂಬರ ೧೯೦೫ ಇದೆ; ನೀವು ಹಾಬಶೀಬಾಗಾನದಲ್ಲಿರುತ್ತೀರಿ. ವಿರಂಚಿಮಹಾರಾಜರು ಬೇಕಾದರೆ ನಿಮ್ಮನ್ನು ಅಕಬರನ

ಕಾಲದ ಆಗ್ರಾಕ್ಕೆ ಅಥವಾ ಫೋರ್ಥ್ ಸೆಂಚರೀ ಬಿ. ಸಿ. ಯಲ್ಲಿಯ (ಕ್ರಿ. ಪೂ. ೪೦೦ ವರ್ಷ) ಪಾಟಲೀಪುತ್ರಕ್ಕೆ ಮುಟ್ಟಿಸುತ್ತಾರೆ. ವಸ್ತುತಃ ಎಲ್ಲ ವಿಷಯಗಳು ಸಾಪೇಕ್ಷವಾಗಿವೆ.

**ನಿವಾರಣ:—** ಹಾಗಾದರೆ ಐನಸ್ಟೈನಿನ ಒಗಟೆ ಎನ್ನು ?

**ಪರಮಾರ್ಥ:**- ಎಲ, ಆ ಐನಸ್ಟೈನನದೇನು ಬಿಸಾತು ? ಆತ ಕಲಿತಿದ್ದೆಲ್ಲಿ ? – ಕೇಳಿದ್ದೇವೆ, ವಿರಿಂಚಿಮಹಾರಾಜರು ಝೆಕೋಸ್ಲೋವ್ಹಾಕಿಯಾದಲ್ಲಿ ತಪಸ್ಸುಮಾಡುತ್ತಿದ್ದಾಗ ಐನಸ್ಟೈನ್ ಅಲ್ಲಿ ಎಡತಾಕುತ್ತಿದ್ದನಂತೆ. ಆದರೆ ಆತನ ವಿದ್ಯೆಯು ರಿಲೇಟಿವ್ಹಿಟಿಗಿಂತ ಮುಂದೆ ಹೋಗಲಿಲ್ಲ.

ನಿತಾಯಿಬಾಬು ಕಿವಿಗೊಟ್ಟು ಎಲ್ಲವನ್ನೂ ಕೇಳುತ್ತಿದ್ದರು. "ಹಾಗಾದರೆ ಐನಸ್ಟೈನನ ಥೇರಿಯಾದರೂ ಏನಿದೆ, ಹೇಳಿರಷ್ಟು?" ಎಂದರು ಅವರು.

**ಪರಮಾರ್ಥ:—** ನಿಮಗೆ ತಿಳಿಯಲಿಲ್ಲನೆ ? – ಸ್ಥಾನ ಕಾಲ ಪಾತ್ರ ಇವು ಮೂರೂ ಪರಸ್ಪರ ಒಂದರ ಮೇಲೊಂದು ನಿರ್ಭರವಾಗಿವೆ. ಸ್ಥಾನವು ಬದಲಾದರೆ ಪಾತ್ರವೂ ಬದಲಾಗುವದು.

**ಸತ್ಯವ್ರತ:**– ಹೆ:, ನಿಮಗೆ ಚೆನ್ನಾಗಿ ತಿಳಿಸಲಿಕ್ಕೆ ಬರುವದಿಲ್ಲ. ನಾನು ಸುಲಭವಾಗಿ ತಿಳಿಸಿಕೊಡುತ್ತೇನೆ ಕೇಳಿರಿ. ತಿಳಿಯಿರಿ, ನಿಮ್ಮ ತೂಕ ಒಂದು ಮಣ ಇದೆ. ಇಂಡಿಯನ್ ಅಸೋಶಿಯೇಶನ್ನಿಗೆ ಹೋದಿರಿ, ಅಲ್ಲಿ ನಿಮ್ಮ ತೂಕ ಎರಡು ಮಣ ಹತ್ತು ಸೇರು ಆಯಿತು; ಅಲ್ಲಿಂದ ನೀವು ಗೆಂಡಾತಲ್ಲಾ ಕಾಂಗ್ರೆಸ್ ಕಮಿಟಿಗೆ ಹೋದಿರಿ,– ಅಲ್ಲಿ ನಿಮ್ಮ ತೂಕ ಮುಕ್ಕಾಲು ಸೇರು ಆಗಿಬಿಟ್ಟಿತು. ಉಃಫ್ ಎಂದ ಕೂಡಲೆ ಹಾರಿಹೋದಿರಿ !

**ನಿವಾರಣ:—** ಸರಿ ಸರಿ! ನಮ್ಮ ಆಳುಮನುಷ್ಯ ಪೇಟೆಯಿಂದ ಬಟಾಟೆ ತರುವದು ಮೂರು ಸೇರು, ಮೆಸ್ಸಿಗೆ ಬಂದ ಕೂಡಲೆ ತೂಗಿದರೆ ಎರಡುವರೆ ಸೇರು !

**ನಿತಾಯಿ:—** ಒಳ್ಳೇದು ಪರಮಾರ್ಥ, ಒಂದು ವಿಷಯ ಕೇಳಬೇಕಾಗಿದೆ. ವಿರಿಂಚಿಮಹಾರಾಜರು ತಾವೇನೋ ತ್ರಿಕಾಲೀ ಸಿದ್ಧಪುರುಷರು. ಅವರ ಮಾತು ಬಿಡು. ಭಕ್ತರ ಮೇಲೆ ಏನಾದರೂ ಅನುಗ್ರಹ ಮಾಡುತ್ತಾರೇನು ?

**ಪರಮಾರ್ಥ:**–ಅದೇಕಿಲ್ಲ? ಆದರೆ ಅಂಥ ಇಂಥವರಿಗಲ್ಲ–ಬೇಕು ಅದಕ್ಕೆ ಸತ್ಪಾತ್ರ! ಆ ದಿನವಂತೂ ಮೋಕೀರಾಮು ಅಗರವಾಲಾನ ದೈವವನ್ನೆ ತಿರುಗಿಸಿಬಿಟ್ಟರು. ಮಹಾರಾಜರು ಅವನನ್ನು ಮೂರುದಿನ ನಾಯಿಂಟೀನ ಫೋರ್ಟಿನ (೧೯೪೧ಗಳ)ದಲ್ಲಿ ಕರೆದುಕೊಂಡು ಹೋದರು – ಸರಿಯಾಗಿ ಮಹಾ ಯುದ್ಧದ ಮೊದಲು. ಮೋಕೀರಾಮನು ಐದುಸಾವಿರ ಟನ್ ಕಬ್ಬಿಣಾ ಗಾರ್ಟರುಗಳನ್ನು ಕೊಂಡನು, ಆರು ರೂಪಾಯಿಗೆ ಹಂಡ್ರೆಡ್‌ವೇಟಿನಂತೆ. ಆಮೇಲೆ ಮಹಾರಾಜರು ಅವನನ್ನು ಒಂದು ತಿಂಗಳ ವರೆಗೆ ನಾಯಿಂಟೀನ ನಾಯಿಂಟೀನದಲ್ಲಿ (೧೯೧೯) ಇಟ್ಟರು. ಮೋಕೀರಾಮನು ಎಲ್ಲವನ್ನೂ ಇಪ್ಪತ್ತೊಂದು ರೂಪಾಯಿ ದರದಂತೆ ಮಾರಿಬಿಟ್ಟನು. ಅನಂತರ ಅವನನ್ನು ಮತ್ತೆ ವರ್ತಮಾನಕಾಲಕ್ಕೆ ಎಳತಂದರು. ಮೋಕೀರಾಮನೀಗ ಹದಿನೈದು ಲಕ್ಷದ 'ಆಸಾಮಿ.' ಬೇಕಾದರೆ ಲೆಕ್ಕ ಹಾಕಿ ನೋಡಿರಿ.

ನಿತಾಯಿಬಾಬುಗಳಿಗೆ ತಡೆಯದಾಯಿತು. ಪರಮಾರ್ಥನ ಎರಡೂ ಕೈಗಳನ್ನು ಹಿಡಿದುಕೊಂಡು ಗದ್‌ಗದ ಸ್ವರದಿಂದ ಅಂದರು.

"ಅಪಾ ಪರಮಾರ್ಥ, ನನ್ನನ್ನು ಈಗಿಂದೀಗಲೆ ವಿರಿಂಚಿ ಮಹಾ ರಾಜರ ಕಡೆಗೆ ಕರೆದುಕೊಂಡು ಹೋಗು ಮಹಾರಾಯಾ! ಮಹಾರಾಜರ ಕಾಲಲ್ಲಿಯೆ ಬಿದ್ದುಕೊಳ್ಳುವೆ. ವೆಚ್ಚ ನಾನು ನೋಡಿಕೊಳ್ಳುತ್ತೇನೆ. ತಂಬಿಗೆ ಥಾಲಿ ಮಾರಿ, ಅವಳ ಕೈಕಾಲುಬಿದ್ದು ಹೇಗಾದರೂ ಮಾಡಿ ಕೈಯೊಳಗಿನ ಹತ್ತು ತೊಲೆಯ ಬಿಲಾವರ ಇಸಿದುಕೊಂಡು ಒತ್ತೆ ಇಡುತ್ತೇನೆ – ಮಹಾ ರಾಜರ ಅನುಗ್ರಹದಿಂದ ಒಂದು ಹದಿನೈದು ದಿನಗಳ ಮಟ್ಟಿಗಾದರೂ ನಾಯಿಂಟೀನ ಫೋರ್ಟಿನದಲ್ಲಿ ತಿರುಗಾಡಿ ಬಂದೆನೆಂದರೆ, ಪರಮಾರ್ಥ, ನಿನ್ನನ್ನು ಎಂದಿಗೂ ಮರೆಯುವದಿಲ್ಲ ನೋಡು. ಟೆನ್ ಪರ್ಸೆಂಟ, – ತಿಳಿಯಿತೆ? ಹಾಯ್ ದೇವಾ, ಹಾಯ್ ಕಬ್ಬಿಣವೇ!"

**ನಿವಾರಣ:**— ಗುರುಪದಬಾಬುಗಳೇನಾದರೂ ಇದೇ ಹೊತ್ತಿನಲ್ಲಿ ಬಳಕೊಂಡಿರುವರೇನು?

**ಪರಮಾರ್ಥ:**— ಅವರಿಗೆ ಇಹಲೋಕದ ಚಿಂತೆಯೆ ಇಲ್ಲ– ಪರ ಲೋಕದ ಚಿಂತೆ ಹತ್ತಿದೆ. ದುಡ್ಡು, ಹೊಲ, ಮನೆ ಎಲ್ಲವನ್ನೂ ಗುರುಗಳಿಗೆ ಕೊಟ್ಟು ಬಿಡುವರಂತೆ!

**ನಿವಾರಣ:**— ಓಹೋ! ಇಷ್ಟು ಕೈ ಸಡಿಲು ಬಿಟ್ಟಿರುವರೇನು?— ಏನಯ್ಯಾ ಸತ್ಯವ್ರತ, ನಿಮ್ಮ ಸನಣ್ಣಾ, ನಿಮ್ಮ ಅತ್ತಿಗೆ ಯಾರೂ ಏನೂ ಹೇಳುವದಿಲ್ಲವೆ?

**ಸತ್ಯವ್ರತ:**— ಸನಣ್ಣಾನ ಸ್ಥಿತಿಯು ನಿನಗೆ ಗೊತ್ತೇ ಇದೆ, ಲಹರೀ ಮನುಷ್ಯ. ಇಪ್ಪತ್ತುನಾಲ್ಕು ತಾಸು – ಎಕ್ಸಪೇರಿಮೆಂಟು – ಅದರಲ್ಲಿಯೇ ಗುಂಗಾಗಿರುತ್ತಾನೆ. ಅತ್ತಿಗೆಯಂತೂ ಪಾಪ ಭೋಳೆ ಸ್ವಭಾವದವಳು. ಅವಳು ಯಾರಿಗೂ ಏನೂ ಹೇಳಲಿಕ್ಕೆ ಹೋಗುವವಳಲ್ಲ–ಅವರ ಕಡೆಯಿಂದ ನೀಗದ ಮಾತು. ಏನೋ ನಾವು ಕೈ ಹಚ್ಚಿದರೆ ಆಗಬೇಕು. ಆದರೆ ತಡ ಮಾಡುವಂತಿಲ್ಲ.

**ನಿವಾರಣ:**— ಹಾಗಾದರೆ ಈಗಲೆ ಪ್ರೊಫೇಸರನ ಕಡೆಗೆ ನಡೆ. ಅಲ್ಲಿ ಎಲ್ಲ ಪರಿಸ್ಥಿತಿಯನ್ನು ಚೆನ್ನಾಗಿ ತಿಳಿದುಕೊಂಡು ಆಮೇಲೆ ದಪ್ತರದಮುಕ್ಕೆ ಹೋಗೋಣವಂತೆ.

ನಿತಾಯಿಬಾಬೂ ಕಾಗದ ಪೆನ್ಸಿಲ್ ತೆಗೆದುಕೊಂಡು ಕಬ್ಬಿಣದ ಲೆಕ್ಕ ಹಾಕುತ್ತಿದ್ದರು. ದಪ್ತರದಮುಕ್ಕೆ ಹೋಗುವ ಮಾತುಕೇಳಿ ಅವರೆಂದರು. '' ನೀವೂ ಮಹಾರಾಜರ ಕಡೆಗೆ ಹೋಗುವಿರಾ? ಆದರೆ ಎಲ್ಲರೂ ಕೂಡಿ ಕೊಂಡು ಹೋಗುವದು ಸರಿಯಾದೀತೆ? ನೀವೆಲ್ಲರೂ ಕೂಡಿ ಹುಡು ಗಾಟಿಕೆ ಮಾಡುವಿರಿ,– ಮಹಾರಾಜರು ಸಿಟ್ಟಾಗುವರು.ಎಲ್ಲವೂ ಹಸಗೆಟ್ಟು ಹೋಗುವದು. ಈ ಸತ್ಯವ್ರತನಂತೂ ಮೊದಲೇ ಸಮಾಜೀ ಮನುಷ್ಯ, ಇದಲ್ಲದೆ ಮಹಾ ಉಪದ್ವ್ಯಾಪಿ. ಅವನು ಹೋಗುವದರಲ್ಲಿಯಂತೂ ಏನೂ ಅರ್ಥವಿಲ್ಲ....ಎಲ, ನಿಮ್ಮವಂತೂ ಆ ಭವ್ಯ ದಿವ್ಯ ಮಂದಿರಗಳಿವೆ. ಅಲ್ಲಿಗೇ ಹೋಗಿ ಏಕೆ ಗಂಟಲ ಹರಕೊಳ್ಳುವದಿಲ್ಲ? ನಮ್ಮ ದೇವತೆಗಳ ಮೇಲೇಕೆ ನಿಮ್ಮ ಕಣ್ಣು? ನನಗಂತೂ ನಾನು ಮತ್ತು ಪರಮಾರ್ಥ ಮೊದಲು ಹೋಗುವದು ನೆಟ್ಟಗನಿಸುತ್ತದೆ. ಅನಂತರ ನಿವಾರಣನು ಮತ್ತೊಂದು ದಿನ ಹೋಗಿ ಬರಲಿ. ''

**ನಿವಾರಣ:**— ಇಲ್ಲ ಇಲ್ಲ, ತಾವು ಹೆದರಬೇಡಿರಿ. ನಾವೇನೂ ಗೊಂದಲ ಹಾಕುವದಿಲ್ಲ. ಏನೋ ತುಸು ಶಾಸ್ತ್ರಾಲಾಪ ಮಾಡುವೆವು, ಇಷ್ಟೆ. ಅನುಕೂಲವಾದರೆ ನಾಳೆ ಸಂಜೆಗೇ ಎಲ್ಲರೂ ಕೂಡಿ ಹೋಗೋಣ.

ಪ್ರೊಫೆಸರ ಸನೀ ಇಲ್ಲಿಯ ವರೆಗೆ ಎಲ್ಲಿಯೂ ಪ್ರೊಫೆಸರಿಕೆಯನ್ನು ಮಾಡಿಲ್ಲ. ಆದರೆ ಡಿಗ್ರಿಗಳನ್ನು ಮಾತ್ರ ಬಹಳಷ್ಟು ದೋಚಿಕಿಸಿದ್ದಾರೆ. ಅವರು ಮನೆಯಲ್ಲಿಯೇ ಇದ್ದುಕೊಂಡು ಅನೇಕ ವೈಜ್ಞಾನಿಕ ಶೋಧಗಳನ್ನು ಮಾಡುತ್ತಿರುವದರಿಂದ ಗೆಳೆಯರು ಅವರಿಗೆ ಪ್ರೊಫೆಸರ ಎಂದು ಕರೆಯುತ್ತಾರೆ. ಗಳಿಸುವ ಚಿಂತೆಯಿಲ್ಲ, ತಂದೆಯ ಆಸ್ತಿ ಯಥೇಷ್ಟವಾಗಿದೆ. ಸನೀ ಗುರುಪದಬಾಬುಗಳ ಅಳಿಯಂದಿರು; ದೂರದ ಆಪ್ತತ್ವದಿಂದ ಸತ್ಯವ್ರತನ ಅಣ್ಣ; ನಿವಾರಣರ ಕ್ಲಾಸ್‌ಮೇಟ.

ನಿವಾರಣ ಹಾಗು ಸತ್ಯವ್ರತರು ಸನಿಯ ಮನೆ ಮುಟ್ಟಿದಾಗ ರಾತ್ರಿ ಎಂಟು ಗಂಟೆಯಾಗಿತ್ತು. ಪಡಸಾಲೆಯಲ್ಲಿ ಯಾರೂ ಇರಲಿಲ್ಲ. ಆಳು 'ಅಪ್ಪನವರೂ ಅಮ್ಮನವರೂ ಒಳಗೆ ಅಂಗಳದಲ್ಲಿದ್ದಾರೆಂದು' ಹೇಳಿದ.

ನಿವಾರಣ ಸತ್ಯವ್ರತರು ಒಳಗೆ ಹೋಗಿ ನೋಡಿದರು. ಅಂಗಳದಲ್ಲಿ ಒಂದು ಒದಿಗೆ ಒಲೆಯ ಮೇಲೆ ಒಂದು ದೊಡ್ಡದಾದ ಪಾತೇಲಿಯಲ್ಲಿ ಹಸುರು ಬಣ್ಣದ ಯಾವುದೋ ಪದಾರ್ಥವು ಕುದಿಯುತ್ತಿದೆ. ಸನಿಯ ಹೆಂಡತಿ ನಿರುಪಮಾ ಅದನ್ನು ಕೋಲಿನಿಂದ ತಿರುವುತ್ತಿದ್ದಾಳೆ. ಪಕ್ಕದಲ್ಲಿರುವ ಕಟ್ಟೆಯ ಮೇಲೆ ಹಾರ್ಮೋನಿಯಂ ಇಟ್ಟಿದೆ. ಅದರೊಳಗಿಂದ ಒಂದು ರಬ್ಬರದ ನಳಿಯು ಹೊರಟು ಪಾತೇಲಿಯ ಒಳತನಕ ಹೋಗಿದೆ. ಪ್ರೊಫೆಸರ ಸನೀ ಗಂಡುಗಚ್ಚೆ ಹಾಕಿ ಟೊಂಕದಮೇಲೆ ಕೈ ಇಟ್ಟುಕೊಂಡು ನಿಂತಿದ್ದಾರೆ.

ನಿವಾರಣನೆಂದ. "ಅತ್ತಿಗೀ ಇದೇನು! ಇಷ್ಟು ಪಲ್ಲೆ ಯಾರಿಗಾಗಿ ಮಾಡುತ್ತಿರುವಿ ?"

ನಿರುಪಮಾ ಉತ್ತರ ಕೊಟ್ಟಳು. "ಪಲ್ಲೆ ಅಲ್ಲ, ಹುಲ್ಲು. ಅವರ ತಲೆಯಲ್ಲೊಂದು ಹೊಕ್ಕಿದೆಯಲ್ಲ, ಏನೂ ಇಲ್ಲವೆಂದು ಹುಲ್ಲನ್ನೆ ಕುಚ್ಚುತ್ತಿದ್ದಾರೆ."

**ನಿವಾರಣ:—** ಅದೇಕೆ ನಿಮ್ಮ ಯಜಮಾನರಿಗೆ ಹಸಿ ಹುಲ್ಲು ಪಚನವಾಗುವದಿಲ್ಲವೇನು ?

**ಸನೀ:—** ನಿವಾರಣ, ಹುಡುಗಾಟಿಕೆಯೆಂದು ತಿಳಿಯಬೇಡ. ಇನ್ನು ಜಗತ್ತಿನಲ್ಲಿ ಅನ್ನದ ಕೊರತೆಯಾಗದು.

**ನಿವಾರಣ:—** ಆದರೆ ಜಗತ್ತಿನಲ್ಲಿ ಎಲ್ಲರೂ ಪ್ರೊಫೆಸರ ಸನೀ ಅಥವಾ ಮೆಲಕಾಡಿಸುವ ಪ್ರಾಣಿಗಳಂತೆ ಹುಲ್ಲು ತಿಂದು ಬದುಕುವವರಿಲ್ಲವಲ್ಲ ?

**ನನೀ:**— ಎಲೋ ಮೂರ್ಖ, ಅಲ್ಲಿಯ ವರೆಗೆ ಇದು ಹುಲ್ಲಾಗಿಯೆ ಉಳಿಯುವದೆ? ಪ್ರೋಟೀನ ಸಿಂಥೆಸಿಸ್ ನಡೆದದೆ. ಹುಲ್ಲು ಹಾಯಡ್ರೋಲಾಯಿಜ ಆಗಿ ಕಾರ್ಬೋನ ಹಾಯಡ್ರೇಟ ಆಗಿಬಿಡುವದು. ಆದರಲ್ಲಿ ಎರಡು ಎಮಿನೋ ಗ್ರುಪ್ ಕೂಡಿಸಿದರೆ ಆಯಿತು, ಹೆಕ್ಸಾ–ಹಾಯಡ್ರಾಕ್ಸಿ ಡಾಯ್–ಎಮಿನೋ........



‘ಕೋಲಿನಿಂದ ತಿರುವುತ್ತಿದ್ದಾಳೆ’

**ನಿವಾರಣ:**— ಸಾಕು ಸಾಕು – ಒಳ್ಳೇದು ಹಾರ್ಮೋನಿಯಮ್ ಏಕೆ ಇಟ್ಟಿದೆ?

**ನನೀ:**— ತಿಳಿಯಲಿಲ್ಲವೆ? ಆಕ್ಸಿಡಾಯಿಜ ಮಾಡಲಿಕ್ಕೆ. ನಿರೂ, ಹಾರ್ಮೋನಿಯಂ ತುಸು ಬಾರಿಸು.

ನಿರುಪಮಾ ಹಾರ್ಮೋನಿಯಮ್ಮಿನ ಪೆಡಲ್ ನಡೆಸಿದಳು. ಧ್ವನಿ ಹೊರಡಲಿಲ್ಲ. ಹವೆಯು ರಬ್ಬರದ ನಳಿಕೆಯೊಳಗಿಂದ ಸರಳವಾಗಿ ಪಾತೇಲಿಯೊಳಗೆ ಹೋಗಿ ಪಳಕ್ ಪಳಕ್ ಮಾಡತೊಡಗಿತು.

**ನಿವಾರಣ:**— ಎಲ, ಇವಂತೂ ಬರೀ ಗುಳ್ಳಿಗಳೇ ಎದ್ದವಲ್ಲ! ನಾ ತಿಳಿದಿದ್ದೆ, ಸಂಗೀತ ರಸವು ಹಾರ್ಮೋನಿಯಮ್‌ದೊಳಗಿಂದ ಹೊರಟು ಪಾತೇಲಿಯೊಳಗೆ ಹೋಗಿ ಹಸಿರು ಅಮೃತದ ಸೃಷ್ಟಿಯನ್ನು ಮಾಡುವದೆಂದು! ಇರಲಿ, ಅತ್ತಿಗೀ ನಿಮ್ಮ ತಂದೆಯ ಸಮಾಚಾರವೇನು? ಈಚೆಗೆ ಅವರು ಏನು ಮಾಡುತ್ತಿದ್ದಾರೆ?

ನಿರುಪಮಾ ಮ್ಲಾನಮುಖದಿಂದ ಹೇಳಿದಳು. "ಕೇಳಿಲ್ಲವೆ ನೀವು? ಅವ್ವ ತೀರಿಕೊಂಡಂದಿನಿಂದ ಅವನ ಸ್ಥಿತಿಯು ವಿಚಿತ್ರವಾಗಿದೆ. ಗಣೇಶ ಮಾಮಾ ಎಲ್ಲಿಂದಲೊ ಒಬ್ಬ ಗುರುವನ್ನು ಹಿಡಿದುಕೊಂಡು ಬಂದಿದ್ದಾನೆ; ಇಪ್ಪತ್ತುನಾಲ್ಕು ತಾಸು ಆ ಗುರುವಿನ ಧ್ಯಾನದಲ್ಲಿ ತೊಡಗಿಕೊಂಡಿರುತ್ತಾನೆ. ಬಾಹ್ಯಜ್ಞಾನವು ಇಲ್ಲದಂತೆಯೆ ಆಗಿದೆ. ಸದಾ ಗುರು ಗುರು ಗುರು. ಅತ್ತೆ, ಕರೆದೆ; ಏನೂ ಉಪಯೋಗವಾಗಲಿಲ್ಲ. ಎಲ್ಲ ಆಸ್ತಿ-ಪಾಸ್ತಿಯನ್ನು ಗುರುವಿಗೆ ಅರ್ಪಿಸಿಬಿಡುವನಂತೆ. ನನಗೆ ಚಿಂತೆಯಿರುವದು ಬುಚಕಿಯದು. ಅಲ್ಲಿಯೆ ಹೋಗಿ ಇರಬೇಕೆಂದರೆ ಮನೆಯಲ್ಲಿ ಅತ್ತೆಯವರಿಗೆ ಜಡ್ಡಾಗಿದೆ; ಬಿಟ್ಟು ಹೋಗುವಂತಿಲ್ಲ."

**ಸತ್ಯವ್ರತ:**— ನನೀದಾದಾ, ನೀನಾದರೂ ಅವರಿಗೇಕೆ ತಿಳಿಹೇಳಬಾರದು? ನಿನ್ನ ಮಾತನ್ನು ಅವರು ನಡೆಸದೆ ಇರಲಿಕ್ಕಿಲ್ಲ.

**ನನಿ:**— ಅದು ಹೇಗೆ ಹೇಳಬೇಕು? ಅಳಿಯ ಆಸ್ತಿಯನ್ನು ಎತ್ತಿ ಹಾಕುವ ಉದ್ದೇಶದಿಂದ ತಮ್ಮ ಧರ್ಮವನ್ನು ಕೆಡಿಸಲಿಕ್ಕೆ ಬಂದಿರುವನೆಂದು ಮಾವನವರು ತಿಳಿದುಕೊಳ್ಳಬಹುದು.

**ಸತ್ಯವೃತ:**— ಹಾಗಾದರೆ ಅಪ್ಪಣೆ ಕೊಡು, 'ಪ್ರಹಾರೇಣ ಧನಂಜಯ' ಮಾಡಿಬಿಡುವೆನು.

**ನಿರುಪಮಾ:**— ಬೇಡ ಬೇಡ. ಬಲುವೆಯನ್ನು ಮಾಡಿದರೆ ಒಂದು ಬಗೆಯಿಂದ ಅಪ್ಪನನ್ನು ಪೀಡಿಸಿದಂತಾಗುವದು. ಅಪ್ಪನ ಮನಸ್ಸು

ನೋಯುದಂತೆ ಆ ಗುರು ಮಹಾರಾಜನನ್ನು ಹೊರಗೆ ಹಾಕಲಿಕ್ಕೆ ಬರು ವಂತಿದ್ದರೆ ನೋಡಿರಿ.

**ಸತ್ಯವ್ರತ:**— ಬಹಳ ಬಿಗಿಯಾದ ಕೆಲಸ. ಒಳ್ಳೇದು, ವಿರಿಂಚಿ ಮಹಾರಾಜರ ಪ್ರಕರಣವಾದರೂ ಏನದು ಹೇಳು.

**ನಿರುಪಮಾ:**— ಪ್ರಕರಣ ಒಂದು ತಿಂಗಳಿಂದ ನಡೆದಿದೆ. ದಮ್ ದಮುದ ತೋಟದಲ್ಲಿರುತ್ತಾರೆ. ಸಂಗಡ ಅವರ ಶಿಷ್ಯನಾದ ಕಿರಿಮಹಾರಾಜ ಕೇವಲಾನಂದನಿದ್ದಾನೆ. ಗಣೇಶಮಾಮಾ ಆದರಾತಿಥ್ಯ ಮಾಡುತ್ತಾನೆ. ಅಪ್ಪ ಹಗಲೂ ರಾತ್ರಿ ಅಲ್ಲಿಯೆ ಬಿದ್ದುಕೊಂಡಿರುತ್ತಾನೆ. ದಿನಾಲು ಇನ್ನೂರು ಮುನ್ನೂರು ಭಕ್ತರು ಬಾದು ಅಡ್ಡಬಿದ್ದು ಹೋಗುತ್ತಾರೆ. ವಿರಿಂಚಿ ಮಹಾ ರಾಜರ ಅದ್ಭುತ ಮಾತುಗಳನ್ನು ಕೇಳಿ ಆಶ್ಚರ್ಯಚಕಿತರಾಗುತ್ತಾರೆ. ಪ್ರತಿ ಆದಿತ್ಯವಾರ ಹೋಮವಾಗುತ್ತದೆ. ಅದರೊಳಗಿಂದ ಒಂದೊಂದು ದಿನ ಒಬ್ಬೊಬ್ಬ ದೇವರನ್ನು ಹೊರಡಿಸುತ್ತಾರೆ. ಒಂದು ದಿನ ರಾಮಚಂದ್ರ, ಇನ್ನೊಂದು ದಿನ ಬ್ರಹ್ಮ ಮತ್ತೊಂದು ದಿನ ಚೈತನ್ಯ; ಯೇಸೂಕ್ರಿಸ್ತ ಹೀಗೆಯೆ! ಸಿಕ್ಕ ಸಿಕ್ಕವರನ್ನು ಒಳಗೆ ಬಿಡುವದಿಲ್ಲ. ವಿಶಿಷ್ಟ ಭಕ್ತರಿಗಷ್ಟೆ ಪ್ರವೇಶವಿದೆ. ಬ್ರಹ್ಮ ಹೊರಟ ದಿನ ನಾನು ಅಲ್ಲಿದ್ದೆ.

**ಸತ್ಯವ್ರತ:**— ಹೀಗೋ! ಹಾಗಾದರೆ ಅಲ್ಲಿ ಏನು ನೋಡಿದಿ?

**ನಿರುಪಮಾ:**— ನನಗೇನು ಕಾಣಬೇಕು ಮಣ್ಣು? ಕತ್ತಲೆ ಕವಿದು ಕೋಣೆಯಲ್ಲಿ ಹೋಮಕುಂಡದ ಹಿಂದೆ ನೆರಳಿನಂತೆ ಕಾಣುತ್ತಿತ್ತು,-ನಾಲ್ಕು ಮುಖ, ಉದ್ದುದ್ದ ಗಡ್ಡ; ನೋಡಿ ಕೈಕಾಲು ತಣ್ಣಗಾದವು. ಎಚ್ಚರ ತಪ್ಪಿ ಬಿದ್ದೆ. ಗಣೇಶಮಾಮಾ ಹೊರಗೆ ಕರೆತಂದ. ಬುಚಕೀ ಧಿಟ್ಟಳು; ಯಾವಾ ಗಲೂ ನೋಡುತ್ತಿರುತ್ತಾಳೆ. ಇರಲಿ, ನಾಳೆ ಮಹಾದೇವ ಹೊರಡುವನಂತೆ!

**ನಿವಾರಣ:**— ನಡೆಯಿರಿ ನಾಳೆಯೆ ನಾವೆಲ್ಲರೂ ವಿರಿಂಚಿ ಮಹಾ ರಾಜರ ಚರಣದರ್ಶನಕ್ಕೆ ಹೋಗೋಣ. ಏನೋ ಮಹಾರಾಜರ ಕೃಪೆ ಯಾದರೆ ಮಹಾದೇವನ ದರ್ಶನವಾದರೂ ದೈವವಶಲ್ಲಿ ಘಟಿಸೀತು!

**ನಿರುಪಮಾ:**— ಮೊದಲು ಗಣೇಶಮಾಮಾನನ್ನು ವಶಪಡಿಸಿ ಕೊಳ್ಳಿರಿ. ಅವನ ಅಪ್ಪಣೆಯಿಲ್ಲದೆ ಒಳಗೆ ಹೋಗಗೊಡುವದಿಲ್ಲ.

**ನಿವಾರಣ:**— ಅದೆಲ್ಲವನ್ನೂ ನಾನು ನೋಡಿಕೊಳ್ಳುವೆನು. ಆದರೆ

ಸತ್ಯವ್ರತ.– ಸತ್ಯವ್ರತನನ್ನು ಸಂಗಡ ಕರೆದುಕೊಂಡು ಹೋಗಲು ಧೈರ್ಯ ಸಾಲುವದಿಲ್ಲ – ನೋಡು, ನೀನು ತೆರೆಬಾಯಿ ಮನುಷ್ಯ; ಪಿಸಕ್ಕನೆ ನಕ್ಕುಬಿಡುವಿ.

ಸತ್ಯವ್ರತನು ತನ್ನ ಇಡೀ ದೇಹವನ್ನು ನಡುಗಿಸಿ ನುಡಿದ. " ಇಲ್ಲ, ಎಂದೆಂದಿಗೂ ಇಲ್ಲ. ಬೇಕಾದರೆ ನೀನೇ ನೋಡು. ಯಾರಾದರೂ ನಕ್ಕು ಗಿಕ್ಕರೆ ಆ ಮ........ ಅಲಲಲಲ............

**ನಿವಾರಣ:**— ಸಾಕು, ಗೊತ್ತಿದೆ. ನಾಲಿಗೆ ಏಕೆ ತೆಗೆಯುವಿ ?

**ಸತ್ಯವ್ರತ:**–'ಬಿಗ್' ಯೂವರ ಪಾರ್ಡನ್, ಅತ್ತಿಗೀ ಒಳ್ಳೇ ಪಾರಾದೆ. ನಮ್ಮ ಮನೆಯವರ ಮುಂದೆ ಅಂಪುಬಿಟ್ಟಿದ್ದರೆ 'ಪಂಚಾಂತಿ' ಆಗುತ್ತಿತ್ತು.

**ನಿವಾರಣ:**— ಹಾಗಾದರೆ ನಾವಿನ್ನು ಹೊರಡುತ್ತೇವೆ. ಓಹೋ, ಒಂದು ಮಾತು ಕೇಳುವದು ಳಿಯಿತು. ಪ್ರೋಫೆಸರ, ಬಹಳ ಹೊಗೆಯನ್ನುಂಟುಮಾಡುವ ಯಾವುದಾದರೊಂದು ಪದಾರ್ಥವನ್ನು ಹೇಳುವಿಯಾ ?

**ನನೀ:**— ಎಂತಹ ಹೊಗೆ ಬೇಕು ? ಕೆಂಪು ಬೇಕಾದರೆ ನೈಟ್ರಿಕ್ ಆ್ಯಸಿಡ್ ಆ್ಯಂಡ ತಾಮ್ರ, ಬದನೆಯ ಬಣ್ಣ ಬೇಕಾದರೆ ಅಯೋಡಿನ್ ವ್ಹೇಪರ, ಹಸಿರು ಬೇಕಾದರೆ........

**ನಿವಾರಣ:**— ಅಲ್ಲ ಅಲ್ಲ. ಪ್ಲೇನ ಹೊಗೆ ಬೇಕು.

**ನನೀ:**— ಹಾಗಾದರೆ ಟ್ರಾಯ್ – ನೈಟ್ರೋ – ಡಾಯ್ ಮಿಥಾಯಿಲ್.......

ನಿವಾರಣ ಕಿವಿಯಲ್ಲಿ ಬೊಟ್ಟು ಇಟ್ಟುಕೊಂಡು ಅಂದ. " ಮತ್ತೆ ಆರಂಭ ಮಾಡಿದೆಯಾ ಮಹಾರಾಯಾ ! ಅತ್ತಿಗೀ ಇವನ ಕೂಡ ನಿನಗೆ ಹೇಗೆ ಬಗೆ ಹರಿಯುವದು ?"

ಸಿರುಪಮಾ ನಕ್ಕು ನುಡಿದಳು. " ಮಾವನ ಮನೆಯಲ್ಲಿ ನೋಡಿದ್ದೇನೆ, ದನದ ಮನೆಯಲ್ಲಿ ಹಸಿ ಹುಲ್ಲು ಹೊತ್ತಿಸಿದರೆ ಭಯಂಕರ ಹೊಗೆಯಾಗುತ್ತದೆ. "

**ನಿವಾರಣ:**— ಯುರೇಕಾ ! ಅತ್ತಿಗೀ. ಈ ಸಾರೆ ನೋಬೆಲ್ ಪ್ರಾಯಿಝು ನಿನಗೇ ಸಿಗುವದು. ನನೀದಾದಾ ಬರೀ ಗೈಲೆ ಕೂಡಬೇಕಾಗುವದು.

**ನಿರುಪಮಾ:—** ಹೊಗೆ ತೆಗೆದುಕೊಂಡು ಏನು ಮಾಡುವಿರಿ?

**ನಿವಾರಣ:—** ಮನೆಯಲ್ಲಿ ಚಿಟ್ಟೆಲಿಗಳ ಉಪದ್ರವವು ಬಹಳವಾಗಿದೆ. ಅವು ಓಡುವವೋ ಇಲ್ಲವೋ ನೋಡಬೇಕಾಗಿದೆ.

* * * * *

ಗುರುಪದಬಾಬುಗಳ ದಮ್‌ದಮುದಲ್ಲಿಯ ತೋಟದೊಳಗಿನ ಬಂಗಲೆಯು ಮೊದಲು ಬಹಳ ಸುಸಜ್ಜಿತವಾಗಿತ್ತು. ಆದರೆ ಅವರ ಹೆಂಡತಿಯು ತೀರಿದಂದಿನಿಂದ ಅದರ ಸೊಬಗು ಕುಂದಿದೆ. ಈಚೆಗೆ ವಿರಿಂಚಿ ಮಹಾರಾಜರ ಅಧಿಷ್ಠಾನದ ಮೂಲಕ ತೋಟದ ದುರಸ್ತಿ ಮಾಡಲಾಗಿದೆ. ಕಸಕಂಟಿಗಳನ್ನು ಕಿತ್ತಿ ತಕ್ಕಮಟ್ಟಿಗೆ ಸ್ವಚ್ಛ ಮಾಡಿದ್ದಾರೆ. ಆದರೆ ಪೂರ್ವದ ಗೌರವವು ತಿರುಗಿ ಬಂದಿಲ್ಲ. ಗುರುಪದಬಾಬುಗಳು ಸಾಂಸಾರಿಕ ವಿಷಯಗಳಲ್ಲಿ ತೀರಾ ಉದಾಸೀನರಾಗಿಬಿಟ್ಟಿದ್ದಾರೆ. ಅವರ ಬೀಗರಾದ ಗಣೇಶರೆ ಅಲ್ಲಿ ಸಪರಿವಾರ ಆಧಿಪತ್ಯ ನಡೆಸಿದ್ದಾರೆ.

ಸಂಜೆಯ ಐದರ ಸುಮಾರಕ್ಕೆ ನಿವಾರಣ, ಸತ್ಯವ್ರತ, ಪರಮಾರ್ಥ ಮತ್ತು ನಿತಾಯಿಬಾಬುಗಳು ಬಂದು ಮುಟ್ಟಿದರು. ಪಡಸಾಲೆಯಲ್ಲಿ ಗುಡಾರವನ್ನು ಹಾಸಿ ಭಕ್ತವೃಂದಕ್ಕೆ ಕೂಡುವ ವ್ಯವಸ್ಥೆಯನ್ನು ಮಾಡಿದ್ದಾರೆ. ಎದುರಿನಲ್ಲಿ ಒಂದು ಮಂಚ. ಅದರ ಮೇಲೆ ಗಾದೆ. ಗಾದೆಯ ಮೇಲೆ ವ್ಯಾಘ್ರಚಿತ್ರದ ಚಾದರ ಹಾಸಿದೆ. ಇದೇ ಮಹಾರಾಜರ ಆಸನ. ಪಕ್ಕದ ಕೋಣೆಯಲ್ಲಿ ಭಕ್ತಮಹಿಳೆಯರ ಸ್ಥಳ. ಮಹಾರಾಜರು ಅಟ್ಟದ ಮೇಲಿರುವ ಸಾಧನಕಕ್ಷದಿಂದ ಇನ್ನೂ ಕೆಳಗೆ ಇಳಿದು ಬಂದಿಲ್ಲ. ಭಕ್ತರು ಗೋಣು ಚಾಚಿ ಕುಳಿತುಕೊಂಡಿದ್ದಾರೆ, ಹಾಗು ಮೆಲುದನಿಯಲ್ಲಿ ಮಹಾರಾಜರ ಮಹಿಮೆಯನ್ನು ಬಣ್ಣಿಸುತ್ತಿದ್ದಾರೆ. ಸಾಹೇಬೀ ಪೋಷಾಕು ತೊಟ್ಟ ಒಬ್ಬ ಗೃಹಸ್ಥರು ವಿಪರೀತ ತೊಂದರೆ ಸಹಿಸುತ್ತ ಕಾಲು ಮಡಿಚಿಕೊಂಡು ಕುಳಿತಿದ್ದಾರೆ. ಹಾಗು ಅಧೀರರಾಗಿ ನಡುನಡುವೆ ತಮ್ಮ ಬೋಳು ಮಿಸೆಗಳನ್ನು ಹುರಿ ಮಾಡುತ್ತಿದ್ದಾರೆ. ಇವರು ಎಂ. ಓ. ಕೆ. ಸೇನ. ಬಾರ್‌–ಎಟ್‌–ಲಾ. ಮೊನ್ನೆ ಮೊನ್ನೆ ಕಲ್ಲಿದ್ದಲಿಯ ಗಣಿಗಳಲ್ಲಿ ಬಹಳ ಹಾನಿಯನ್ನು ಹೊಂದಿ ಈಚೆಗೆ ಧರ್ಮಕರ್ಮಗಳಲ್ಲಿ ಮನಸ್ಸು ಹಾಕಿದ್ದಾರೆ.

ಪರಮಾರ್ಥ ಮತ್ತು ಸಿತಾಯಿಬಾಬುಗಳನ್ನು ಒಳಗೆ ಕುಳ್ಳಿರಿಸಿ ನಿವಾರಣ ಸತ್ಯವ್ರತರು ಹೊರಗೆ ಬಂದರು. ಆಮೇಲೆ ತೋಟವನ್ನೆಲ್ಲ ಸುತ್ತಿಹಾಕಿ ಗೇಟಿನ ಕಡೆಗೆ ಬಂದರು. ಗೇಟಿನ ಹತ್ತಿರದಲ್ಲಿಯೆ ಸಾಲು ಸಾಲಾಗಿ ಕೋಚಮನ್, ದರವಾನ, ತೋಟಿಗ ಇವರ ಮನೆಗಳು. ಇವು ಗಳನ್ನು ದಾಟಿ ಗಾಡಿಯನ್ನಿಡುವ ಮನೆ, ಕುದುರೆಯ ಲಾಯ ಮುಂತಾ ದವುಗಳು.

ಲಾಯದ ಎದುರಿಗೆ ಮೌಲವೀ ಬಸಿರುದ್ದೀನರು ಒಂದು ಮುರುಕು ಬಾಕಿನ ಮೇಲೆ ಕುಳಿತುಕೊಂಡು ಕೋಚಮನ್ ಘೋಂಟಿಮಿಯಾ ಮತ್ತು ದರವಾನ ಫೇಂಕೂ ಪಾಂಡೆಯ ಕೂಡ ಹರಟೆ ಹೊಡೆಯುತ್ತಿದ್ದರು. ಮೌಲವೀ ಸಾಹೇಬರ ಊರು ಫರೀದಪುರ. ಇವರು ಗುರುಪದ ಬಾಬುಗಳ ಮುಖ್ಯ ಕಾರಕೂನರು. ಗುರುಪದಬಾಬುಗಳು ವಕೀಲಿಯನ್ನು ಬಿಟ್ಟಿದ್ದ ರಿಂದ ಇವರ ಉತ್ಪನ್ನಕ್ಕೆ ಕತ್ತರಿ ಬಂದಿದೆ. ಆದರೂ ನಿಯಮಿತವಾಗಿ ತಿಂಗಳಕ್ಕೆ ಸಂಬಳ ಸಿಗುತ್ತಿರುವ ಮೂಲಕ ಮೇಲಿಂದ ಮೇಲೆ ಯಜಮಾನ ರಿಗೆ ಸಲಾಮು ಸಲ್ಲಿಸುವದಕ್ಕೆ ಬರುತ್ತಿರುತ್ತಾರೆ.

ಮೌಲವೀ ಸಾಹೇಬರು ಫರೀದಪುರೀ ಉರ್ದುವಿನಲ್ಲಿ ಜಗತ್ತಿನ ಸಧ್ಯದ ದುರವಸ್ಥೆಯನ್ನು ವಿವರಿಸುತ್ತಿದ್ದರು. ಕೋಚಮನ್‌ನೂ ದರವಾನನೂ ಅದಕ್ಕೆ ತಲೆ ಹಾಕುತ್ತಿದ್ದರು. ಸಮೀಪದಲ್ಲಿ ಕುದುರೆಯಾಳು ಕುದುರೆಯ ಮೈ ತಿಕ್ಕುತ್ತಿದ್ದಾನೆ; ಮತ್ತು ನಡುನಡುವೆ ಸರಿದಾಡುವ ಕುದುರೆಯ ಹೊಟ್ಟೆಯ ಮೇಲೆ ಗುದ್ದುತ್ತ 'ಎಲಾ ಇದರ, ನಿಲ್ ನಿಲ್ಲು' ಎಂದು ಅನ್ನು ತ್ತಿದ್ದಾನೆ. ಎದುರಿನ ಬೈಲಲ್ಲಿ ಒಂದು ಹೆಬಗ ಬೆಕ್ಕು ಗೋಣು ಅಲ್ಲಾಡಿ ಸುತ್ತ ಹುಲ್ಲು ತಿನ್ನುತ್ತಿದೆ. ಪ್ರತಿದಿನ ವಿರಿಂಚಿಮಹಾರಾಜರ ಭುಕ್ತಾವಶಿಷ್ಟ ಮೀನಗಳನ್ನು ತಿಂದು ತಿಂದು ಆದಕ್ಕೆ ಅಜೀರ್ಣವಾಗಿದೆ.

ಸತ್ಯವ್ರತನೆಂದ. "ಸಲಾಮು ಮೌಲವೀ ಸಾಹೇಬ! ಮಿಜಾಜ ಶರೀಫ? ನಮಸ್ಕಾರ ಪಾಂಡೇಜಿ. ಕೋಚಮನ್‌ಜೀ ಅಚ್ಛಾ ಹೈ ತೋ? ಇವರಾರು ಗೊತ್ತಿರುವದೋ? ಇವರು ನಿವಾರಣಬಾಬುಗಳು. ಅಳಿಯಂದಿರ ಗೆಳೆಯರು. ಪೂಜಾ ಉತ್ಸವದ ಸಲುವಾಗಿ 'ಖುಷಿ' ಕೊಡಲಿಕ್ಕೆ ಬಂದಿ ದ್ದಾರೆ. ಮನಸ್ಸಿನಲ್ಲಿ ಏನೂ ತಿಳಕೊಳ್ಳಬೇಡಿರಿ, ಆಂ! ಮೌಲವೀಸಾಹೇಬ

ನಿಮಗಾಗಿ ಹತ್ತು ರೂಪಾಯಿ, ಪಾಂಡೇಜಿ ಮತ್ತು ಕೋಚಮನ್ನರಿಗಾಗಿ ಐದೈದು ರೂಪಾಯಿ, ತೋಟಿಗ ಆಳು ಮೊದಲಾದವರಿಗಾಗಿ ಈ ಐದು ರೂಪಾಯಿ ಮೇಲೆ.

ಈ ಸೌಜನ್ಯದಿಂದ ಮುಗ್ಧರಾಗಿ ಬಸಿರುದ್ದೀನ, ಫೇಂಕೂ ಹಾಗು ಝೋಂಟಿ, ಹಲ್ಲು ತೆಗೆದು ಮತ್ತೆ ಮತ್ತೆ ಸಲಾಮು ಮಾಡಿದರು. ಮತ್ತು ಖುದಾ ಹಾಗು ಕಾಲೀ ಮಾತೆಗೆ ರಾಯರ ಹೆಚ್ಚಳಕ್ಕಾಗಿ ಪ್ರಾರ್ಥನೆ ಮಾಡಿಕೊಂಡರು.

ಮೌಲವಿಯವರೆಂದರು. "ಅಜೀ ಬಾಬೂಜಿ ಸಾಹಬ, ಆ ದಿನ ಹೇಗೆ ಹೋದವೋ ಏನೋ ಅಲ್ಲಾಸೇ ಬಲ್ಲ. ಮಾ ಸಾಹೇಬರು ತೀರಿಕೊಂಡ ನಂತರ ನಮ್ಮ ಒಡೆಯರ ಜೀವದಲ್ಲಿ ಜೀವವಿಲ್ಲ. ಬಹಳ ಹೇಳಿದೆ, 'ಹುಜೂರ ಇಂತಹ ಚಲತೀ ನಕೀಲಿ ಬಿಡಬೇಡಿರಿ' ಎಂದು. ಕೇಳಲಿಲ್ಲ. ....ಖುದಾಕೀ ಮರ್ಜೀ!"

ನಿವಾರಣನೆಂದ. "ಇದೆಲ್ಲವೂ ಆ ಮಹಾರಾಜನ ತಂತ್ರ. ಎಲ್ಲದರ ಬೇರು ಅವ!"

ಫೇಂಕೂನಿಗೂ ತುಸು ಧೈರ್ಯ ಬಂದಂತಾಗಿ ಆರಂಭಿಸಿದ.

"ಆ ವಿರಿಂಚಿಮಹಾರಾಜನು ಎಂತಹ ಸಾಧು! ಅವನಿಗೇನು ಜುಟ್ಟವಿಲ್ಲ, ಜನಿವಾರವಿಲ್ಲ! ಮೀನ ಮಾಂಸ ಎಲ್ಲವನ್ನೂ ಹೊಡೆಯುತ್ತಾನೆ. ಎರಡೂ ಹೊತ್ತು ಚಹಾ ಬಿಸ್ಕೀಟು ಇಲ್ಲದಿದ್ದರೆ ನಡೆಯುವಂತಿಲ್ಲ. ಬಾಬೂಜಿ, ಈ ಎಲ್ಲ ಬಂಗಾಲೀ ಸಾಧುಗಳು ಮಹಾ ಲಫಂಗರು. ಮತ್ತೆ ಆ ಕಿರಿ ಮಹಾರಾಜನಂತೂ ಚೇಳಿನಂತಿದ್ದಾನೆ. ನೋಡಿರಲ್ಲ ಮಗಾ, ಫೇಂಕೂ ಪಾಂಡೇನ ಮೇಲೆ ಡಂಕಿಟ್ಟಿದ್ದಾನೆ!"

ಫೇಂಕೂನ ಮೈಯಲ್ಲಿ ಆವೇಶ ತುಂಬಿದಂತಾಯಿತು. ತನ್ನ ಕಾರ್ಯದ ಪ್ರಮಾಣವನ್ನು ಕೊಡುತ್ತ ಹೇಳತೊಡಗಿದ.

"....ಆ ಮಗನಿಗೆ ಇನ್ನೂ ಗೊತ್ತಿಲ್ಲ, ಈ ಫೇಂಕೂ ಪಾಂಡೆ ಮ್ಯುಟಿನಿಯ ಬಲವಾಯಿದಲ್ಲಿ ಕತ್ತೀ ತಿರುವಿದ್ದು. (ಆಗಿನ್ನೂ ಫೇಂಕೂ ಹುಟ್ಟಿದ್ದಿಲ್ಲ!) ಒಡೆಯರು ಅಪ್ಪಣೆ ಕೊಟ್ಟರೆ ಒಂದೇ ಏಟಿಗೆ ಆ ಮಹಾರಾಜ–ಗಿಹರಾಜರ ಎಲುವು ಚೂರುಚೂರು ಮಾಡಿಬಿಟ್ಟೇನು!"

ಪೆಹೌಲವೀಸಾಹೇಬರು ಹೇಳಿದರು. "ನಮಗಾದರೂ ಬಹಳ ಅಪಮಾನ ಸಹಿಸಬೇಕಾಗಿದೆ. ಗಣೇಶವನಾವನಾ ನಮ್ಮ ಮೇಲೆ ಅಧಿಕಾರ ನಡೆಸುವದು ನಮಗೆ ಸಹನವಾಗದು. ನಾವು 'ಖಾನದಾನೀ' ಮನುಷ್ಯರು. ನಮ್ಮ ಧಮನಿಗಳಲ್ಲಿ ಮೊಗಲರಕ್ತವು ಹರಿಯುತ್ತಿದೆ. ನಮಗೆ ಜನರು ಬಸಿರುದ್ದೀನ ಎಂದು ಕರೆಯುತ್ತಿದ್ದರೂ ನಮ್ಮ 'ಅಸಲೀ ನಾಮ' ಎಂದರೆ ಮುದರ್ಾಮಖಾ. ನಮ್ಮ ತಂದೆಯ ಹೆಸರು ಜಹಾಂಬಾಜಖಾ. ಮತ್ತು ನಮ್ಮ ಅಜ್ಜನ ಹೆಸರು ಅಬ್ದುಲ್‌ಜಬ್ಬರ್. ನಮ್ಮ ಮೂಲ ಊರು ಫರೀದಪುರ ಅಲ್ಲ. ನಮ್ಮ ದೇಶ ಅರಬಸ್ತಾನ-ತುರ್ಕ ಅಂತ ಅಂತಾರಲ್ಲ ಅದು. ಅಲ್ಲಿ ಎಲ್ಲರೂ ಲುಂಗಿ ಸುತ್ತುತ್ತಾರೆ, ಹಾಗು ಉರ್ದು ಫಾರ್ಸಿಯಲ್ಲಿ ಮಾತಾಡುತ್ತಾರೆ. ಹೊಟ್ಟೆಯ ಸಲುವಾಗಿ ನಾವು ಈ 'ಜಂಗಲೀ' ಬಂಗಾಲೀ ಭಾಷಾ ಕಲಿಯಬೇಕಾಗಿದೆ. ಆ ಅರಬದೇಶದ ನಟ್ಟನಡುವೆ ಇಸ್ತಂಬೂಲ ಇದೆ ಅದರ ಎಡಕ್ಕೆ ಬಗದಾದ ಶಹರ. ಈ ಕಲಕತ್ತಾ ಶಹರ ಅದರ ಮುಂದೆ ಹಳ್ಳಿ. ಬಗದಾದದ ದಕ್ಷಿಣ ಭಾಗದಲ್ಲಿ ಮಕ್ಕಾಶರೀಫ. ಅಲ್ಲಿಯ ಪವಿತ್ರ ಭಾವಿಯ ನೀರು ಆಬ್-ಎ-ಜಮ್‌ಜಮ್, ನಮ್ಮ ಹತ್ತರ ಒಂದು ಬಾಟಲಿಯಲ್ಲಿ ತುಂಬಿ ಇಟ್ಟಿದ್ದೇವೆ. ಮಾಲಕರು ಹುಕುಂ ಕೊಟ್ಟರೆ ಆ ನೀರು ಸಿಂಪಡಿಸಿ ಮಾವಾ, ಮಹಾರಾಜ ಎಲ್ಲರನ್ನೂ ಏಳು ಸಮುದ್ರದ ಆಚೆಗೆ ಜಹಾನ್ನುಮ (ನರಕ) ದೊಳಗೆ ಬೀಳುವಂತೆ ಹಾರಿಸಿ ಬಿಡುವೆನು."

ನಿವಾರಣನೆಂದ. "ಪೆಹೌಲವೀಸಾಹೇಬ, ನಾವು ಆ ಇಬ್ಬರೂ ಮಹಾರಾಜರನ್ನು ಓಡಿಸುವದಂತೂ ನಿಶ್ಚಯವೆ. ಅನುಕೂಲವಾದರೆ ಇವತ್ತೆ. ಆದರೆ ಒಬ್ಬರಿಂದಲೇ ಆಗುವದಿಲ್ಲ. ನೀವು ದರವಾನಜೀ ಸಂಗಡ ಬೇಕು."

**ಫೇಂಕೂ:—** ಹೊಡೆದಾಟವಾಗುವದೇನು?

**ನಿವಾರಣ:—** ಛೇ, ಇಲ್ಲ ಇಲ್ಲ. ನೀವೇನೂ ಹೆದರಬೇಡಿರಿ. ಒಂದಿಷ್ಟು ಗಲಾಟೆಯನ್ನೆಬ್ಬಿಸಿದರೆ ಸಾಕು. ಅದೀತಷ್ಟೆ?

**ಬಸಿರುದ್ದೀನ:—** ಅಲಬತ್; ಕಬೂಲ. ಆದರೆ ಒಡೆಯರು ಸಿಟ್ಟಾದರೆ ಹೇಗೆ?

**ನಿವಾರಣ:—** ಒಡೆಯರು ಸಿಟ್ಟಾಗುವ ಪ್ರಸಂಗವೇನೂ ಬರುವ

ದಿಲ್ಲ. ಇರಲಿ. ಇನ್ನು ತುಸುಹೊತ್ತು ನಿಂತು ನಾನು ಬಂದು ಏನೇನು ಮಾಡಬೇಕೆಂಬುದನ್ನು ಹೇಳುವೆನು.

ನಿವಾರಣ ಸತ್ಯವ್ರತರು ವಿರಿಂಚಿಮಹಾರಾಜರ ಓಲಗದ ಕಡೆಗೆ ಹೊರಟರು. ದಾರಿಯಲ್ಲಿ ಗಣೇಶಮಾಮಾ ಭೆಟ್ಟಿಯಾದರು, ಬಹಳ ಗಡಿಬಿಡಿ ಯಲ್ಲಿದ್ದರು; ಹೋಮದ ವ್ಯವಸ್ಥೆ ಮಾಡುವದಕ್ಕಾಗಿ ಹೊರಟಿದ್ದರು. ನಿವಾರಣಾ ಸತ್ಯವ್ರತರನ್ನು ನೋಡಿ ನುಡಿದರು. "ಓಹೋ, ನೀವು ಬಂದಿರಾ? ನೆಟ್ಟಗಾಯಿತು. ....ಹೇ: ಹೇ: ಮನೆಯಲ್ಲಿ ಎಲ್ಲರೂ ನೆಟ್ಟಗಿದ್ದಾರಷ್ಟೆ? ನಿವಾರಣ, ನಿಮ್ಮ ತಂದೆ ಚೆನ್ನಾಗಿ ಹೇ: ಹೇ:? ನಿಮ್ಮ ತಾಯಿಗೆ ಈಗ ತುಸು ಹೇ: ಹೇ: ನಿನ್ನ ತಂಗಿ ಹೇ: ಹೇ:? ಸತ್ಯವ್ರತ, ನಿಮ್ಮ ಮಾವ ಅತ್ತಿಗೆ ಯುವರೆಲ್ಲರೂ........"

ನಿವಾರಣನ ಮನೆಯುವರೆಲ್ಲರೂ ಹೇ: ಹೇ: ಸತ್ಯವ್ರತನ ಮನೆಯುವರೂ ಹಾಗೆಯೆ. ಎಲ್ಲವೂ ಗಣೇಶಮಾಮಾನ ಆಶೀರ್ವಾದದ ಫಲ. ಚಿಂತೆಯಿಂದ ಮಾಮಾನಿಗೆ ರಾತ್ರಿ ನಿದ್ದೆ ಹತ್ತುತ್ತಿದ್ದಿಲ್ಲ. ಈಗ ತುಸು ನಿಶ್ಚಿಂತರಾದರು.

ಸತ್ಯವ್ರತನೆಂದ. "ಮಾಮಾ, ನಿಮ್ಮ ಚಿಕ್ಕ ಅಳಿಯನಿಗೆ ಕೆಲಸ ದೊರೆತಿದೆಯೇನು? ಇಲ್ಲವಾದರೆ ರಜೆ ಮುಗಿದ ಕೂಡಲೆ ನಮ್ಮ ಆಫೀಸಿ ಗೊಮ್ಮೆ ಕಳಿಸಿರಿ ಒಂದು ವೆಕನ್ಸೀ ಇದೆ.

**ಗಣೇಶ:—** ಅಪಾ, ನೀವೆಲ್ಲರೂ ನಮ್ಮವರು. ನೀವು ಪ್ರಯತ್ನ ಮಾಡದೆ ಹೇಗಾಗಬೇಕು? ಆಫೀಸ ತೆರೆದ ಕೂಡಲೆ ಆತನು ನಿಮ್ಮನ್ನು ಕಾಣುವನು.

**ನಿವಾರಣ:—** ಮಾಮಾ, ಒಂದು ಮಾತು ಕೇಳಬೇಕಾಗಿದೆ – ದೇವ ದರ್ಶನ ಮಾಡಿಸಬೇಕು.

**ಗಣೇಶ:—** ಇಷ್ಟೆಯೋ? ಹಾಗಾದರೆ ಹೋಗಿರಲ್ಲ, ಮಹಾರಾಜರ ಕಡೆಗೆ. ಎಲ್ಲರೂ ಹೋಗಿದ್ದಾರೆ.

**ನಿವಾರಣ:—** ಆ ದೇವರನ್ನಂತೂ ನೋಡಿಯೆ ನೋಡುತ್ತೇವೆ. ನಾವು ಅಚ್ಚ ದೇವರನ್ನು ನೋಡಬೇಕೆನ್ನುತ್ತೇವೆ, ಹೋಮಗೃಹದಲ್ಲಿ.

ಗಣೇಶಮಾಮಾ ಭಯದಿಂದ ನಾಲಿಗೆ ಕಚ್ಚಿ ಅಂದರು.– "ಮಹಾ ರಾಯಾ, ಅದು ಹೇಗೆ ಆಗಬೇಕು? ಎಷ್ಟೋ ಸಾಧ್ಯ-ಸಾಧನೆಗಳನ್ನು ಮಾಡಿದ

ನಂತರ ಅಧಿಕಾರ ದೊರೆಯುತ್ತಿದೆ! ಮೇಲಾಗಿ ಈ ನಿಮ್ಮ ಸತ್ಯವ್ರತ ನಂತೂ ಆ– ಏನಾ ಹೆಸರು ? – ಅದೇನೋ ಅಂತಾರಲ್ಲಾ ಅದಕ್ಕೆ ? ''

**ನಿವಾರಣ:**— ಬ್ರಹ್ಮಜ್ಞಾನೀ–ಸಮಾಜೀ. ಆದರೆ ಅವನಿಗಿನ್ನೂ ಬ್ರಹ್ಮಜ್ಞಾನವಾಗಿಲ್ಲ. ಸತ್ಯವ್ರತನೆಂದರೆ ದೈತ್ಯಕುಲದಲ್ಲಿಯ ಪ್ರಹ್ಲಾದ. ಸನಾತನತ್ವವನ್ನು ಚೆನ್ನಾಗಿ ಕಾಯ್ದುಕೊಂಡಿದ್ದಾನೆ. ಆತನು ಗೀತಾ ಪಾರಾ ಯಣ ಮಾಡುತ್ತಾನೆ. ಕೃಷ್ಣಲೀಲಾ ನಾಟಕ ನೋಡುತ್ತಾನೆ; ಸತ್ಯ ನಾರಾಯಣನ ಪ್ರಸಾದ, ಮದನಮೋಹನನ ಭೋಗ, ಕಾಲೀಘಾಟದ ಕಾಲಿಯಾ ಎಲ್ಲವನ್ನೂ ತಿನ್ನುತ್ತಾನೆ. ಮಾವಾ, ನಿಮ್ಮ ಮುಂದೆ ಹೇಳ ಬಾರದು. ನೀವು ಹಿರಿಯರು – ಇಲ್ಲವಾದರೆ ಅವನ ನಾಲ್ಕಾರು ಮಾತು ಕೇಳಿ ದರೆ ತಿಳಿಯುತ್ತಿತ್ತು; ಅವನ ಮುಂದೆ ದೊಡ್ಡ ದೊಡ್ಡ ಸನಾತನಿಗಳು ಮೂಗು ತಿಕ್ಕಬೇಕು !

**ಗಣೇಶ:**— ಅದೇನೇ ಇರಲಿ. ಒಮ್ಮೆ ಜಾತಿ ಹೋಯಿತೆಂದರೆ ತಿರುಗಿ ಬಾರದು. ನೀನಾದರೂ ಅಭಕ್ಷ್ಯಭಕ್ಷಣ ಮಾಡುತ್ತೀಯೆಂದು ಕೇಳಿದ್ದೇನೆ.

**ನಿವಾರಣ:**— ಅದೇನು, ಎಲ್ಲರೂ ಮಾಡುತ್ತಾರೆ. ಗುರುಪದ ಬಾಬುಗಳೇನಾದರೂ ಕಡಿಮೆ ಮಾಡಿರುವರೇನು ? ಹಾಗಾದರೆ ದೇವದರ್ಶನ ಮಾಡಿಸುವದಿಲ್ಲವೆ ? ನಮ್ಮನ್ನು ನಿರಾಶಗೊಳಿಸುವಿರಾ ? ಒಳ್ಳೇದು ಹೊರಟೆ ವಿನ್ನು.

**ಸತ್ಯವ್ರತ:**— ನಮಸ್ಕಾರ ಮಾವಾ,........ ಹಾಂ, ಇನ್ನೊಂದು ಹೇಳುವದಿದೆ. ನನ್ನ ಅಭಿಪ್ರಾಯದಂತೆ ನಿಮ್ಮ ಅಳಿಯನು ನಾಲ್ಕಾರು ತಿಂಗಳ ಟಾಯಿಪ ರಾಯಿಟಿಂಗ ಕಲಿಯಲಿ. ಆತನಿನ್ನೂ ಹಸಿಬಿಸಿ. ಈಗಲೇ ಆಫೀಸಿನಲ್ಲಿ ಸೇರಿದರೆ ನಾಳೆ ನಾನು ಸಾಹೇಬರ ಮುಂದೆ ತಲೆ ಕೆಳಗೆ ಹಾಕ ಬೇಕಾಗುವದು. ನೆಕ್ಸ್ಟ ವ್ಹೆಕನ್ಸಿಯಲ್ಲಿ ಟ್ರಾಯಿ್ ಮಾಡುವೆನು.

**ಗಣೇಶ:**— ಎಲ, ಹಾಗೆಲ್ಲೋ. ಕೆಲಸ ಒಮ್ಮೆ ಕೈ ಬಿಟ್ಟಿತೆಂದರೆ ತಿರುಗಿ ಸಿಕ್ಕೀತೇನೋ ? ಇಲ್ಲ. ಸತ್ಯವ್ರತ ಈ ಸಂಧಿಯನ್ನು ತಪ್ಪಿಸಬೇಡ. ಹಾಂ........ನೀನೇನು ಅನ್ನುತ್ತಿದ್ದಿ ? ಈಗ ನೀನು ಗೀತಾ–ಪಾಠಾ ಓದುತ್ತಿ ದ್ದೀಯಾ ? ಬಹಳ ಚಲೋ. ಹಾಗಾದರೆ, ಹೋಮಗೃಹದಲ್ಲಿ ಹೋದರೆ ಅಂಥ ದೋಷವೇನೂ ಇಲ್ಲ. ನಾಲ್ಕು ಹನಿ ಗಂಗಾಜಲವನ್ನು ತಲೆಯ

ಮೇಲೆ ಸಿಂಪಡಿಸಿಕೊಂಡು ಹೋಗು. ನೀವಿಬ್ಬರೂ. ಒಳ್ಳೇದು,—ಹಾಗಾದರೆ ಕೆಲಸದ ವಿಷಯ ಮರೆಯಬೇಡ ಅಂ!

ಗಣೇಶಮಾಮಾ ದೂರ ಹೋದನಂತರ ನಿವಾರಣನೆಂದ. "ಇಲ್ಲಿಯವರೆಗಂತೂ ಕೆಲಸ ಯಶಸ್ವಿಯಾಗುತ್ತ ಸಾಗಿದೆ. ಇನ್ನು ಕೊನೆಯದಷ್ಟಾದರೆ ಆಯಿತು! ಅಮೋಲಾ ಹಾಬೆಲಾ ಮೊದಲಾದವರೆಲ್ಲರೂ ಬಂದಿರುವರೇ?"

**ಸತ್ಯವ್ರತ:**— ಅವರೆಲ್ಲರೂ ಓಲಗದಲ್ಲಿ ಕುಳಿತಿದ್ದಾರೆ. ನಿರ್ದಿಷ್ಟ ವೇಳೆಗೆ ಒದಗುವರು. ಇರಲಿ, ನಿವಾರಣದಾದಾ ಇದರಲ್ಲಿ ಮಾಮಾನ ಪಾಲೂ ಇರಬಹುದೇನು?

**ನಿವಾರಣ:**— ದೇವರಿಗೆ ಗೊತ್ತು. ಆದರೆ ಗುರುಪದಬಾಬುಗಳು ಸಂಸಾರದಿಂದ ನಿರ್ಲಿಪ್ತವಾಗಿರುವವರೆಗೆ ಮಾಮಾನ ಚಲ್ಲಾಟವಿದೆ.

* * * * *

ವಿರಿಂಚಿ ಮಹಾರಾಜರು ಸಭೆಯನ್ನಲಂಕರಿಸಿ ಕುಳಿತುಕೊಂಡಿದ್ದಾರೆ. ನಿಡಿದಾದ ದೇಹ. ಗೌರವರ್ಣದ ಮುಂಡಿತ ಮುಖ. ಉಬ್ಬುಗಲ್ಲಗಳ ಮರೆಯೊಳಗಿಂದ ಎರಡು ಕಣ್ಣುಗಳು ಇಣಿಕೆ ಹಾಕುತ್ತಿವೆ. ಗಜ್ಜರಿಯಂತಹ ದೊಡ್ಡ ಮೂಗು. ಮೃದುಹಾಸ್ಯವನ್ನು ಸೂಸುವ ಪ್ರಶಸ್ತ ತುಟಿಗಳು. ಅವುಗಳ ಕೆಳಗೆ ಚೂಪಾದ ಗಡ್ಡ ಇಳಿದಿದೆ. ಮಹಾರಾಜತನಕ್ಕೆ ಒಪ್ಪುವ ಮೂರ್ತಿ. ಮೈಮೇಲೆ ಕಾವೀ ಬಣ್ಣದ ಕಫನಿ. ತಲೆಯ ಮೇಲೆ ಕಿವಿಟೊಪ್ಪಿಗೆ. ವಯಸ್ಸು ಐದುಸಾವಿರ ವರ್ಷವೆಂದೇನೂ ಕಾಣುವದಿಲ್ಲ. ಏನೋ ಐವತ್ತು ಐವತ್ತೈದು ಆಗಬಹುದು. ಮಹಾರಾಜರ ವೇದಿಯ ಎಡಬದಿಗೆ ಕಿರಿಮಹಾರಾಜ ಕೇವಲಾನಂದರು ವಿರಾಜಿಸುತ್ತಿದ್ದಾರೆ. ಇವರ ವಯಸ್ಸು ಎಷ್ಟು ಶತಾಬ್ದಿಗಳೆಂಬುದರ ನೆಲೆ ಭಕ್ತರಿಗಿನ್ನೂ ಹತ್ತಿಲ್ಲ. ಆದರೂ ನೋಡಲು ಹರೆಯದವರೆಂದು ಕಾಣುತ್ತಾರೆ. ಇವರಾದರೂ ಗುರುಗಳಿಗೆ ಅನುರೂಪವಾದ ವೇಷ ಹಾಕಿದ್ದಾರೆ. ಆದರೆ ಅರಿವೆ ಕಡಿಮೆ ದರದ್ದು. ವೇದಿಯ ಕೆಳಗೆ ಎಡಭಾಗದಲ್ಲಿ ಶೀರ್ಣಕಾಯರಾದ ಗುರುಪದಬಾಬುಗಳು ವೇದಿಗೆ ತಲೆಹಚ್ಚಿ ಅರ್ಧಶಾಯಿತ ಅವಸ್ಥೆಯಲ್ಲಿದ್ದಾರೆ. ಜಾಗ್ರತರೋ ನಿದ್ರಿತರೋ ತಿಳಿಯುವಂತಿಲ್ಲ. ಬದಿಯ ಕೋಣೆಯಲ್ಲಿ ಮಹಿಳೆಯರ ಮೊದಲನೆಯ ಸಾಲಿನಲ್ಲಿ ಹದಿನೇಳು ಹದಿನೆಂಟು ವರ್ಷದ ಹುಡುಗಿಯೊಬ್ಬಳು ಕೆಂಪು

ಸೀರೆಯನ್ನುಟ್ಟುಕೊಂಡು ಕೂದಲ ಹಾಗೆಯೇ ಬಿಟ್ಟುಕೊಂಡು ಕುಳಿತಿದ್ದಾಳೆ. ಮತ್ತು ಮೇಲಿಂದ ಮೇಲೆ ಗುರುಪದಬಾಬುಗಳ ಕಡೆಗೆ ಕರುಣಾನಯನಗಳಿಂದ ನೋಡುತ್ತಿದ್ದಾಳೆ. ಇವಳು ಬುಚಕೀ ಗುರುಪದ ಬಾಬುಗಳ ಕಿರಿಯ ಮಗಳು. ಭಕ್ತವೃಂದದಲ್ಲನೇಕರು ಕೈಗಳನ್ನು ಮುಂದಕ್ಕೆ ಚಾಚಿ ಉದ್ದಕ್ಕೆ ಬಿದ್ದುಕೊಂಡಿದ್ದಾರೆ, ಕೈಕಾಲು ಬಡಿಯದೆ ಈಸುತ್ತಿದ್ದಾರೆಂಬಂತೆ. ಉಳಿದವರು ಇದ್ದಲ್ಲಿಯೇ ಕೈ ಜೋಡಿಸಿ ಕಾಲು ಮುಚ್ಚಿಕೊಂಡು ಮಹಾರಾಜರ ವಚನಾಮೃತವನ್ನು ಸವಿಯಲು ಉದ್ಗ್ರೀವರಾಗಿ ಕುಳಿತಿದ್ದಾರೆ.

ಸತ್ಯವ್ರತನು ಸಾಷ್ಟಾಂಗ ನಮಸ್ಕಾರ ಹಾಕಿ ಭಕ್ತಮಂಡಲಿಯೊಳಗೆ ಕುಳಿತುಕೊಂಡ. ನಿವಾರಣನು ಕಿರಿಮಹಾರಾಜರ ತಡೆಯನ್ನು ಲೆಕ್ಕಿಸದೆ ನೆಟ್ಟಗೆ ಹೋಗಿ ವಿರಿಂಚಿ ಮಹಾರಾಜರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಮಹಾರಾಜರು ಪ್ರಸನ್ನಹಾಸ್ಯದಿಂದ ನುಡಿದರು. 'ನಿನ್ನನ್ನು ಎಲ್ಲಿಯೋ ನೋಡಿದಂತಿದೆಯಲ್ಲ ?'

**ನಿವಾರಣ:—** ಮಹಾರಾಜ, ಈ ಅಧಮನ ಹೆಸರು ನಿವಾರಣ ಚಂದ್ರ.

**ವಿರಿಂಚಿ:—** ನಿವಾರಣ ? ಓಹೋ, ಇದೋ ಈಗ ನಿನ್ನ ಹೆಸರು ? ನಿನ್ನನ್ನು ಎಲ್ಲಿ ನೋಡಿದ್ದೇನೆ?–ನೇಪಾಳದಲ್ಲಿಯೋ ?–ಅಲ್ಲ. ಮುರ್ಶಿದಾಬಾದದಲ್ಲಿ. ನಿನಗೆ ನೆನಪಿರುವ ಸಂಭವವಿಲ್ಲ. ಜಗತ್‌ಶೇಠನ ಮಹಲಿನಲ್ಲಿ; ಆತನ ತಾಯಿಯ ಶ್ರಾದ್ಧದ ದಿನ. ಅನೇಕ ದೊಡ್ಡ ಮನುಷ್ಯರು ನೆರೆದಿದ್ದರು. ರಾಜಾ ಕೃಷ್ಣಚಂದ್ರ, ರಾಯ ರಾಯನ್ ಜಾನಕೀ ಪ್ರಸಾದ, ನವಾಬನ ಸೇನಾಪತಿ ಖಾನ ಖಾನನ್ ಮಹಬ್ಬತ ಜಂಗ, ಸುತಾನುಟಿಯ ಅವಿನಾಶ ಚಂದ – ಹಿಸ್ಟ್ರೀಯಲ್ಲಿ ಓಮಿಚಂದನೆಂದು ಕರೆದಿದ್ದಾರಲ್ಲ, ಅವ. ನೀನು ಶೇಠನ ಕೋಶಾಧಿಕಾರಿಯಾಗಿದ್ದಿ. ನಿನ್ನ ಹೆಸರೂ ऽ ऽ ऽ, ಸರಿ, ಮೋತೀರಾಮ ಎಂದಿತ್ತು. ಓಃ ಶೇಟಜಿಯು ಹಾಲೂತುಪ್ಪದ ಕಾವಲಿಯನ್ನೇ ಹರಿಸಿದ. ಉಂತಿ ಹಾರಾಡಿ ಹೋದವು. ಆದರೆ ಸುತಾನುಟಿಯ ಗೃಹಸ್ಥರ ಎಲೆಯಲ್ಲಿ ತುಸು 'ಮಂಡಾ' (ಪಕ್ವಾನ್ನ ವಿಶೇಷ) ಕಡಿಮೆ ಬಡಿಸಿದ್ದರಿಂದ ಅವರೆಲ್ಲರೂ ಅಷ್ಟಕ್ಕೇ ಸಿಟ್ಟಿಗೆದ್ದು ಏನೇನೋ ಒದರಾಡಿ ಹೊರಟುಹೋದರು.

ಹಾಗಾದರೆ ಮೋತೀರಾಮ, ಊಹೂಂ — ನಿವಾರಣಚಂದ್ರ, ನೀನು ಧೂರ್ಜಟಿ ಮಂತ್ರದ ಜಪ ಮಾಡು. ದಿನಾಲು ನಸುಕಿನಲ್ಲಿಯೆ ಎದ್ದು ನೂರಾ ಎಂಟುಸಾರೆ ಅನಬೇಕು, ಧೂರ್ಜಟಿ-ಧೂರ್ಜಟಿ-ಧೂರ್ಜಟಿ-ಎಂದು. ಬೇಗ ಬೇಗ. ಒಳ್ಳೇದು ನೀನಿನ್ನು ಹೋಗಿ ಕುಳಿತುಕೋ.

ನಿವಾರಣನು ಮತ್ತೆ ಪಾದಧೂಲಿಯನ್ನು ತೆಗೆದುಕೊಂಡು ಅದನ್ನು ನೆಕ್ಕುವ ಸೋಗುಮಾಡಿ ಭಕ್ತಮಂಡಲಿಯೊಳಗೆ ಹೋಗಿ ಕುಳಿತುಕೊಂಡ.

ನಿತಾಯಿಬಾಬುಗಳು ಮೆಲ್ಲನೆ ಪರಮಾರ್ಥನಿಗೆ ಅಂದರು. 'ನೋಡಿದೆಯಾ ಹೇಗಿದೆ? ನಿವಾರಣ ಬಂದ ಕೂಡಲೆ ಮಹಾರಾಜರ ದೃಷ್ಟಿಗೆ ಬಿದ್ದ. ನಾವು ಬಾಯಿಬಿಡುತ್ತ ಕುಳಿತುಕೊಂಡು ತಾಸು ಹೊತ್ತಾಯಿತು. ಇದಕ್ಕೇ ಅನ್ನುವದು ದೈವವೆಂದು. ಈ ಸಾರೆ ನಾನು ಎದ್ದು ಹೋಗಿ ಪಾದಕ್ಕೆರಗುವೆನು. ದೈವದಲ್ಲಿ ಇದ್ದಂತಾಗುವದು.

ಭಕ್ತಿಯ ಆವೇಶದಲ್ಲಿ ಭೂಮಿಸಾತ್ ಬಿದ್ದುಕೊಂಡಿರುವವರೊಳಗೆ ಸ್ಥೂಲಕಾಯರಾದ ವೃದ್ಧರೊಬ್ಬರು ಇದ್ದರು. ಜರದ ಅಂಚಿನ ಧೋತರವನ್ನುಟ್ಟಿದ್ದರು. ರೇಶ್ಮೆಯ 'ಪಂಜಾಬಿ'ಯನ್ನು ತೊಟ್ಟಿದ್ದರು; ಅದರೊಳಗಿಂದ ಬಂಗಾರದ ಗೋಪಿನಸರವು ಮಿಂಚುತ್ತಿತ್ತು. ಇವರು ವಿಖ್ಯಾತ ಮುತ್ಸದ್ದಿಗಳಾದ ಬಾಬೂ ಗೋವರ್ಧನ ಮಲ್ಲಿಕರು. ಮೊನ್ನೆ ಮೊನ್ನೆ ಮೂರನೆಯ ಮದುವೆಯಾಗಿ ನವವಧುವನ್ನು ಮನೆಗೆ ಕರೆತಂದಿದ್ದಾರೆ. ಗೋವರ್ಧನ ಬಾಬುಗಳು ಕೈಜೋಡಿಸಿ ಬಹು ವಿನಯದಿಂದ ಕೇಳಿದರು. "ಮಹಾರಾಜ ಪ್ರವೃತ್ತಿಮಾರ್ಗ ಹಾಗು ನಿವೃತ್ತಿಮಾರ್ಗ ಇವುಗಳಲ್ಲಿ ಯಾವುದು ನೆಟ್ಟಗೆ?"

ಮಹಾರಾಜರು ನಸುನಕ್ಕು ಹೇಳಿದರು.

'ಸರಿ, ಇದೇ ಮಾತನ್ನು ತುಲಸೀದಾಸನು ನನಗೆ ಕೇಳಿದ್ದನು. ನಾವು ಊಟಮಾಡುತ್ತೇವೆ; ಏಕೆ ಮಾಡುತ್ತೇವೆ? ಹಸಿವೆಯಾಗುತ್ತದೆಯೆಂದು. ಏನು ಊಟ ಮಾಡುತ್ತೇವೆ? ಅನ್ನ-ಸಾರು, ಕಾಯಿ-ಪಲ್ಲೆ ಹಣ್ಣು-ಹಂಪಲ, ಮೀನ-ಮಾಂಸ ಇತ್ಯಾದಿ. ಊಟದಿಂದ ಏನಾಗುವದು? ಹಸಿವೆಯ ನಿವೃತ್ತಿಯಾಗುವದು. ಹಸಿವೆಯೊಂದು ಪ್ರವೃತ್ತಿ, ಊಟ ಅದರ ನಿವೃತ್ತಿ. ಅತಏವ ಭೋಗದ ಮೂಲದಲ್ಲಿ ಪ್ರವೃತ್ತಿ. ಭೋಗದ ಫಲ ನಿವೃತ್ತಿ. ಭೋಗವಿಲ್ಲದೆ ಯೋಗವಿಲ್ಲ. ತುಲಸೀ, ಸನ್ಯಾಸಿಯಾಗಿದ್ದ. ನಾನಂದೆ: "ತಮ್ಮಾ ಭೋಗ

ಇಲ್ಲದೆ ನಿನಗೆ ನಿವೃತ್ತಿಯುಂಟಾಗಲಾರದು. ರಾಮಾಯಣ ಬರೆಯುವದಾದ ನಂತರ ಆತನನ್ನು ರಾಜಾಮಾನಸಿಂಹನನ್ನಾಗಿ ಮಾಡಿಬಿಟ್ಟೆ. ಹೇರಳವಾದ ಆಸ್ತಿಯನ್ನು ಗಳಿಸಿಟ್ಟಿದ್ದನು; ಆದರೆ ಏನೂ ಉಳಿಯಲಿಲ್ಲ. ಆತನ ಮಗನಾದ ಜಗತ್‌ಸಿಂಹನು ಬಂಗಾಲೀ ಹುಡಿಗೆಯನ್ನು ಮದುವೆಯಾಗಿ ಎಲ್ಲವನ್ನೂ ತೂರಿಬಿಟ್ಟನು. ಬಂಕಿಮನು ತನ್ನ ಪುಸ್ತಕದಲ್ಲಿ ಈ ಸಂಗತಿಯ ಉಲ್ಲೇಖ ಮಾಡಿಲ್ಲ.''

ಬಾರಿಸ್ಟರ ಓ. ಕೇ. ಸೇನರೆಂದರು. ''ವಂಡರಫುಲ್ !''

ನಿತಾಯಿಬಾಬುಗಳಿಗೆ ತಡೆಯಲಿಕ್ಕೆ ಆಗಲಿಲ್ಲ. ನೇರವಾಗಿ ಮಹಾರಾಜರ ಕಡೆಗೆ ನಡೆದುಬಿಟ್ಟರು. ಹೋಗಿ ಅತ್ಯಂತ ವಿನಯದಿಂದ ಬೇಡಿಕೊಂಡರು. ''ಮಹಾರಾಜ, ಅನುಗ್ರಹ ಮಾಡಬೇಕು.''

ಮಹಾರಾಜರು ಹುಬ್ಬುಗಂಟಿಕ್ಕಿ ನುಡಿದರು. ''ನಿನಗೇನು ಬೇಕು?''

ಪಾಪ, ನಿತಾಯಿಬಾಬುಗಳು ಕಕ್ಕವಿಕ್ಕಿಯಾಗಿ ಅಂದರು. ''ನಾಯಿಂಟೀನ ಫೋರ್ಟೀನ !''

ಸತ್ಯವ್ರತನಲ್ಲಿ ಒಂದು ದೊಡ್ಡ ದೋಷ; ಆತನಿಗೆ ನಗೆ ತಡೆಯಲಿಕ್ಕೆ ಆಗುವದಿಲ್ಲ. ತಾನು ಗಂಭೀರನಾಗಿದ್ದುಕೊಂಡು ಚೇಷ್ಟೆಮಾಡಬಲ್ಲ; ಆದರೆ ಎರಡನೆಯವರ ಬಾಯಿಂದ ಏನಾದರೂ ನಗೆ ಬರುವಂತಹ ಮಾತನ್ನು ಕೇಳಿದನೆಂದರೆ ತನ್ನ ಗಾಂಭೀರ್ಯವನ್ನುಳಿಸಿಕೊಳ್ಳುವದು ಅಸಾಧ್ಯವಾಗುತ್ತದೆ. ಹಾಸ್ಯದಮನಕ್ಕಾಗಿ ಸತ್ಯವ್ರತನೊಂದು ಮುಷ್ಟಿಯೋಗನನ್ನು ಸಾಧಿಸುತ್ತಾನೆ. ಹಿರಿಯರೆದುರಿಗೆ ನಗುವ ಪ್ರಸಂಗ ಬಂದಿತೆಂದರೆ ಅವನು ಯಾವುದಾದರೊಂದು ಭಯಾವಹ ಅವಸ್ಥೆಯ ಕಲ್ಪನೆಯನ್ನು ಮಾಡಿಕೊಳ್ಳುತ್ತಾನೆ. ಆದರೆ ಪ್ರತಿಯೊಂದು ಸಾರೆ ಅದು ಫಲಕಾರಿಯಾದೀತೆಂದಿಲ್ಲ.

**ವಿರಿಂಚಿ:—** ನಾಯಿಂಟೀನ ಫೋರ್ಟೀನ ! ಏನದು ?

ನಿವಾರಣ ಮೆಲ್ಲನೆ ಅಂದ. ''ಒನ್ ನಾಯಿನ, ಒನ್ ಫೋರ, ಕ್ಯಾಲಕಟಾ. ನೋ ರಿಪ್ಲಾಯ್ ?–ಟ್ರಾಯ್ ಅಗೇನ್ ಮಿಸ್ !''

ಸತ್ಯವ್ರತ ಧ್ಯಾನಿಸತೊಡಗಿದ – 'ಬಡಿಗಿಯು ಬೆನ್ನಮೇಲೆ ಉಚ್ಚ ಕೊರಡು ಹೊಡೆಯುತ್ತಿದ್ದಾನೆ ! ಬೆನ್ನತೊಗಲು ಸುರಳಿಸುರಳಿಯಾಗಿ ಕಿತ್ತಿ ಬೀಳುತ್ತಿದೆ ! ಅಬ್ಬಾ, ಎಂಥ ಭಯಂಕರ ವೇದನೆಯು !'

ನಿತಾಯಿಬಾಬುಗಳೆಂದರು. "ಏಳು ದಿನ ಮಾತ್ರ! ಮಹಾರಾಜ, ಏಳುದಿನ ಮಾತ್ರ ನನ್ನನ್ನು ಮಹಾಯುದ್ಧದ ಮೊದಲಿಗೆ ಮುಟ್ಟಿಸಿರಿ. ಆಗ್ಗದರದಿಂದ ಕಬ್ಬಿಣವನ್ನು ಕೊಳ್ಳುವೆ. ಅನುಗ್ರಹ ಮಾಡಬೇಕು, ಮಹಾಸ್ವಾಮಿ."

**ವಿರಿಂಚಿ:**— ನೀನೇನು ಕೆಲಸ ಮಾಡುತ್ತಿರುವಿ?

**ನಿತಾಯಿ:**— ಮಹಾರಾಜ, ನಾನು ವ್ಹಾಲ್ಟರ ಬ್ರದರ್ಸರ ಆಫೀಸಿನಲ್ಲಿ ಲೇಜರ ಕೀಪರನಾಗಿದ್ದೇನೆ. ತಿಂಗಳಿಗೆ ಒಟ್ಟು ನೂರಾಐವತ್ತು ಸಂಬಳ. ಪ್ರಪಂಚ ಸಾಗುವದು ಬಿಗಿ.

**ವಿರಿಂಚಿ:**—ಅಪಾ, ಷಡೈಶ್ವರ್ಯವು ಸುಲಭವಾಗಿ ದೊರೆಯುವದಲ್ಲ. ಕಠೋರಸಾಧನೆ ಬೇಕು. ಮೂಲಾಧಾರ ಚಕ್ರದಲ್ಲಿ ಆಘಾತ ಮಾಡಿ ಕುಲ ಕುಂಡಲಿನಿಯನ್ನು ಆಜ್ಞಾಚಕ್ರಕ್ಕೆ ಎಳೆಯಬೇಕು. ಆಮೇಲೆ ಅದನ್ನು ಸಹಸ್ರಾರಪದ್ಮದಲ್ಲಿ ಇರಿಸಬೇಕಾಗುವದು. ಸಹಸ್ರಾರವೆಂದರೇ ಸೂರ್ಯ. ಈ ಸೂರ್ಯನನ್ನು ಹಿಂದಕ್ಕೆ ಸರಿಸಬೇಕಾಗುವದು. ಸೂರ್ಯವಿಜ್ಞಾನವು ಆಯತ್ತವಾಗದೆ ಕಾಲ-ಸ್ತಂಭನ ಮಾಡಲಿಕ್ಕೆ ಬರುವದಿಲ್ಲ. ಅದಕ್ಕೆ ಬಹಳ ಖರ್ಚು ಹತ್ತುವದು;—ನಿನಗೆ ನೀಗುವದಲ್ಲ. ಬೇಕಾದರೆ ಏನೋ ಕೆಲವು ದಿನ ಮಾರ್ತಂಡ ಮಂತ್ರದ-ಜಪ ಮಾಡು. ನಡುಹಗಲಿನಲ್ಲಿ ಸೂರ್ಯನ ಕಡೆಗೆ ನೋಡುತ್ತ ನೂರಾ ಎಂಟು ಸಾರೆ—ಮಾರ್ತಂಡ—ಮಾರ್ತಂಡ—ಮಾರ್ತಂಡ—ಎಂದೆನ್ನಬೇಕು. ಬಹಳ ಲಗುಲಗು. ಆದರೆ ಎಚ್ಚರ, ಕಣ್ಣು ಪಿಳಕಿಸಬಾರದು; ಉಗುಳು ನುಂಗಬಾರದು; — ಇಲ್ಲವಾದರೆ ಸತ್ತಿಯೆಂದು ತಿಳಿ!

ನಿತಾಯಿಬಾಬುಗಳು ಮೋರೆ ಒಣಗಿಸಿಕೊಂಡು ಬಂದರು.

ವಿರಿಂಚಿ ಮಹಾರಾಜರು ನುಡಿದರು.

"ಐಶ್ವರ್ಯವನ್ನು ಎಲ್ಲರೂ ಬಯಸುತ್ತಾರೆ. ಆದರೆ ಅದಕ್ಕೆ ಯೋಗ್ಯ ಪಾತ್ರಬೇಕಲ್ಲವೆ? ಸರಿ, ಇದೇ ಮಾತಿಗಾಗಿ ಯೇಸೂಕ್ರಿಸ್ತನ ಕೂಡ ನನ್ನ ಜಗಳವಾಯಿತು. 'ಧನಿಕರಿಗೆ ಸ್ವರ್ಗರಾಜ್ಯವು ಎಂದಿಗೂ ದೊರೆಯದು' ಎಂದು ಯೇಸೂ ಅನ್ನುತ್ತಿದ್ದ. ನಾನನ್ನುತ್ತಿದ್ದೆ: 'ಅದು ಹೇಗೆ? ಧನದ

ಸದುಪಯೋಗ ಮಾಡಬೇಕು,–ಅವಶ್ಯವಾಗಿ ದೊರೆಯುವದು.' ಪಾಪ, ವ್ಯರ್ಥವಾಗಿ ಪ್ರಾಣ ಕಳಕೊಂಡ!"

ಮಿಸ್ಟರ ಸೇನರು ಬೆರಗಾಗಿ ಕೇಳಿದರು, "ಎಕ್ಸ್‌ಕ್ಯೂಜ ಮೀ ಪ್ರಭು, ತಾವು ಜೀಸಸ್ ಕ್ರಾಯಿಸ್ಟನನ್ನೂ ಅರಿತಿದ್ದಿರಾ?"

**ವಿರಿಂಚಿ:**— ಹಾ: ಹಾ:! ಯೇಸೂ ಇನ್ನೂ ನಿನ್ನೆ – ಮೊನ್ನಿನ ಹುಡುಗ!

**ಸೇನ:**— ಮಾಯಿ ಫಾಡ್!



ಮಾಯಿ ಫಾಡ್!

ಸತ್ಯವ್ರತನ ಕಿವಿಗಳಲ್ಲಿ ಗುಂಗೀ ಹುಳ, ಮೂಗಿನಲ್ಲಿ ಕಡಜೀರಿಗೆ ಹುಳ– ಕಟ್ ಕಟ್ ಕಡಿಯುತ್ತಿವೆ!

ಮಿಸ್ಟರ ಸೇನರು ನಿವಾರಣನಿಗೆ ಕೇಳಿದರು. 'ಹಾಗಾದರೆ ಇವರು ಗೌಟಾಮಾ ಬುಡ್ಧಾನನ್ನೂ ಅರಿತಿರಬಹುದು?'

**ನಿವಾರಣ:**— ನಿಶ್ಚಯ. ಗೌತಮ ಬುದ್ಧನದೇನು ಹೇಳತೀರಿ, ಪ್ರಭು, ಮನು, ಪರಾಶರರ ಕೂಡ ಒಂದೇ ಚಿಲಿಮೆಯಲ್ಲಿ ಗಾಂಜೇ ಸೇದಿದ್ದಾರೆ. ಎಲ್ಲರ ಕೂಡ ಅವರ ಸ್ನೇಹವಿತ್ತು. ಭಗೀರಥ, ಟೂಟೆನ್ ಖಾಮೆನ್, ನೆಬೂ–ಚಾಡ–ನಾಜಾರ, ಹಮೂರಬ್ಬೀ, ನಿಯೋಲಿಥಿಕ್ ಮ್ಯಾನ್, ಪಿಥೇ ಕಂಥ್ರೋಪಿಸ್, ಇರೆಕ್ಟಸ್, ಮಿಸಿಂಗ ಲಿಂಕ (Missing Link) ಸಹಿತ, ಎಲ್ಲರ ಕೂಡ ಇವರ ಪರಿಚಯವಿತ್ತು.

ಮಿಸ್ಟರ ಸೇನರು ಹುಬ್ಬು ಏರಿಸಿ ನುಡಿದರು. "ಮಾಯ್!"

ಏಳು ಪಟ್ಟೆಯ ಹುಲಿಗಳು ಸತ್ಯವ್ರತನ ಬೆನ್ನುಹತ್ತಿವೆ. ಎದುರಿಗೆ ಮೂರು ಕರಡಿಗಳು ಕಾಲೆತ್ತಿಕೊಂಡು ನಿಂತಿವೆ.!

ವಿರಿಂಚಿ ಮಹಾರಾಜರು ಹೇಳಿದರು.

"ಒಂದು ಸಾರೆ ಮಹಾಪ್ರಳಯದ ನಂತರ ವೈವಸ್ವತನು ನನಗೆ ಕೇಳಿದ–'ನೀಲಲೋಹಿತ ಕಲ್ಪದಲ್ಲಿ ಏನಿದೆ?' ಅಲ್ಲ ಶ್ವೇತವರಾಹ ಕಲ್ಪವು ಆದೇ ಆರಂಭವಾಗಿತ್ತು. ವೈವಸ್ವತನೆಂದ. 'ಮನುಷ್ಯಸೃಷ್ಟಿಯನ್ನೇನೋ ಮಾಡಿದೆ, ಆದರೆ ಮಕ್ಕಳು ಇರಬೇಕೆಲ್ಲಿ? ತಿನಬೇಕೇನು? ನಾಲ್ಕೂ ಕಡೆಗೆ ನೀರೇ ನೀರಾಗಿದೆ.' ನಾ ಹೇಳಿದೆ, 'ವಿಭೂ' ನೀನೇಕೆ ಹೆದರುವಿ? ನಾನಿದ್ದೇನೆ. ಸೂರ್ಯವಿಜ್ಞಾನವಂತೂ ನನ್ನ ಹಿಡಿಯಲ್ಲಿದೆ. ಸೂರ್ಯನ ತೇಜವನ್ನು ಹೆಚ್ಚಿಸಿದೆ. ನನ್ನನೆ ನೀರು ಆಟ್ಟಿಸಿಹೋಯಿತು. ವಸುಂಧರೆಯು ಧನಧಾನ್ಯದಿಂದ ತುಂಬಿತು. ಚಂದ್ರ–ಸೂರ್ಯರನ್ನು ನಡೆಸುವ ಭಾರವು ನನ್ನ ಮೇಲೆ ಇದೆಯಷ್ಟೆ!"

ವಿಸ್ಮರ ನೇಸರು ಬಾಯಿ ತೆರೆದುಕೊಂಡು ಹಾಗೆಯೆ ಕುಳಿತರು.

ಸತ್ಯವ್ರತನು ಸತ್ತುಹೋಗಿದ್ದಾನೆ. ಪಂಜಾಬ ಮೇಲಿನ ಕೂಡ ದಾರ್ಜಿಲಿಂಗ ಮೇಲಿನ ತಾಕಲಾಟ, ಎಲ್ಲೆಲ್ಲಿಯೂ ರಕ್ತದ ಚೆಲ್ಲಾಟ—ಆತ್ರಿಗೀ....

ಯಾವ ಉಪಾಯವೂ ಬಗೆಹರಿಯಲಿಲ್ಲ. ಒಳಗೆ ಹತ್ತಿಕ್ಕಿಟ್ಟ ನಗೆಯು ಸತ್ಯವ್ರತನ ಕಣ್–ಕಿವಿ–ಮೂಗುಗಳನ್ನು ಹರಿದು ಹೊರಗೆ ನುಗ್ಗುವ ಉಪಕ್ರಮವನ್ನು ಮಾಡಿತು. ಆಗ ಅವನು ನಿರುಪಾಯನಾಗಿ ಮಹತ್ಪ್ರಯಾಸದಿಂದ ಆ ನಗೆಯನ್ನು ಅಳುವಾಗಿ ಪರಿವರ್ತಿಸಿದ. ಹಾಗು ತನ್ನ ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದ.

ವಿರಿಂಚಿ ಮಹಾರಾಜರೆಂದರು. "ಏನಾಯಿತು ಏನಾಯಿತು? ಆಹಾ, ಬರಲಿ ಬಿಡಿರಿ. ನನ್ನ ಕಡೆಗೆ ಬರಲಿ, ಪಾಪ!"

ಸತ್ಯವ್ರತ ಹತ್ತರ ಹೋಗಿ ನುಡಿದ.

"ಉದ್ಧಾರ ಮಾಡಿರಿ, ಮಹಾರಾಜ! ಮನುಷ್ಯ ಜನ್ಮ ಬೇಸರಾಗಿದೆ. ಮಹಾರಾಜ, ನನ್ನನ್ನು ಹರಿಣವನ್ನಾಗಿ ಮಾಡಿ ಆ ತ್ರೇತಾಯುಗದಲ್ಲಿ ಕಣ್ವಮುನಿಯ ಆಶ್ರಮದಲ್ಲಿ ಬಿಟ್ಟುಬಿಡಿರಿ. ನನಗೆ ಹಣ ಬೇಡ; ಮಾನ ಮರ್ಯಾದೆ ಬೇಡ; ಸ್ವರ್ಗವೂ ಬೇಡ. ಒಂದಿಷ್ಟು ಎಳೆ ಹುಲ್ಲು, ಅದೂ ಸ್ವಯಂ ಶಕುಂತಲೆಯ ಕೈಯದು. ಮತ್ತೆ ಎರಡು ಕೋಡುಗಳನ್ನು ಕೊಡಬೇಕು ಮಹಾರಾಜ, ದುಷ್ಯಂತನಿಗೆ ಹಾಯಲಿಕ್ಕೆ."

ಕೆಲಸ ಕೆಡುವದನ್ನು ನೋಡಿ ನಿವಾರಣನೆಂದ. "ಹುಡುಗನ ತಲೆ ಕೆಟ್ಟುಹೋಗಿದೆ ಮಹಾರಾಜ. ಬಹಳ ಚಿಂತೆ ಮಾಡಬೇಕಾಗಿದೆ, ಅದಕ್ಕಾಗಿ...."

ಗಡಿಯಾಳದಲ್ಲಿ ಏಳು ಹೊಡೆಯಿತು. ದೈನಿಕ ಪದ್ಧತಿಯಂತೆ ಈ ಸಮಯದಲ್ಲಿ ವಿರಿಂಚಿ ಮಹಾರಾಜರು ಸಹಜಾ ತುರೀಯಾವಸ್ಥೆಯನ್ನು ಹೊಂದಿದರು. ಅವರು ಕಣ್ಣು ಮುಚ್ಚಿಕೊಂಡು ಕಟ್ಟಿಗೆಯಂತೆ ಕುಳಿತು ಕೊಂಡರು. ತುಟಿಗಳೆರಡು ತುಸು ವಿಸಂಕಾಶತೊಡಗಿದವು. ಗಣೇಶ ಮಾಮಾ, ಕಿರಿ ಮಹಾರಾಜ ಹಾಗು ಇನ್ನಿಬ್ಬರು ಮಹಾರಾಜರ ಶ್ರೀಪಪು ವನ್ನು ಕೈಯಿಂದೆತ್ತಿಕೊಂಡು ಸಾಧನಕಕ್ಷಕ್ಕೆ ಹೋದರು.

ನಿತಾಯಿಬಾಬುಗಳೆಂದರು. "ಅಂಗೈಯಗಲ ಹಣೆಯಿದೆ, ಏನದ ಹಸಿಯಿಲ್ಲ! ಮಂತ್ರದಕಿಂತ ಉಗುಳೆ ಹೆಚ್ಚಾಗಿದೆ. ಒಳಗೇನೂ ಹುರುಳಿಲ್ಲ ವೆಂಪು ಕಾಣುತ್ತದೆ. ಇಂಥ ಮಹಾರಾಜರ ಕಡೆಯಿಂದ ಕೆಲಸವಾಗುವ ದಿಲ್ಲ. ಅಂಥಾ ಶಕ್ತಿಯಿದ್ದದ್ದಾದರೆ ನಾಲ್ಕಾರು ಚಮತ್ಕಾರ ಮಾಡಿ ತೋರಿಸ ಬೇಕೋ ಇಲ್ಲವೋ? ಅದೆಲ್ಲ ಬಿಟ್ಟು ಸತ್ಯಯುಗದಲ್ಲಿ ಏನು ಮಾಡಿದೆವೆಂಬು ದರ ವ್ಯಾಖ್ಯಾನ ಹೇಳ ಹೊರಟಿದ್ದಾರೆ. ಭಲೆ! ನಡೆಯಪಾ ಪರಮಾರ್ಥ, ಏಳೂ ಇಪ್ಪತ್ತರ ಗಾಡಿಯಾದರೂ ಸಿಕ್ಕೀತು. ನಿವಾರಣ ಸತ್ಯವ್ರತರನ್ನು ಹುಡುಕುವ ಕಾರಣವಿಲ್ಲ. ಅವರು ತಮ್ಮ ಹಾದಿಯನ್ನು ತಾವು ನೋಡಿ ಕೊಳ್ಳುವರು. ಪರಮಾರ್ಥ, ನಾಳೆ ಸಾಧ್ಯವಾದರೆ ಮರೀಚ್ಯಾನಂದರ ಕಡೆಗೆ ಕರೆದುಕೊಂಡು ಹೋಗಬೇಕು ನೋಡು!"

* * * * *

ಸತ್ಯವ್ರತ ಅತ್ತಿತ್ತ ಹುಡುಕಾಡಿ ಬುಚಕಿಯ ಪತ್ತೆ ಮಾಡಿದ. ಅವಳಿ ಗೆಂದ. "ಸ್ವಲ್ಪ ಚಹ ಮಾಡಲಿಕ್ಕೆ ಆದೀತೇನು? ನಿವಾರಣದಾದಾ ಕೂಡ ಇಷ್ಟರಲ್ಲಿ ಬರಬಹುದು. ಉಶ್, ಗಂಟಲ ಒಣಗಿ ಹೋಗಿದೆ."

**ಬುಚಕೀ:—** ಒಣಗದೆ ಏನು ಮಾಡೀತು? ಒಂದೇ ಸಮನೆ ಚೀರು ತ್ತಿದ್ದಿರಲ್ಲ! ಎಸರಿಡುತ್ತೀನೆ, ಕೂಡಿರಿ ತುಸು. ಒಳ್ಳೇದು ತಂದೆಯವರೆದು ರಿಗೆ ಇದೇನು ಹುಚ್ಚುಚ್ಚಾರ ಮಾಡಿದಿರಿ, ಹೇಳಿರಿ. ಅವರ ಮನಸ್ಸಿನಲ್ಲಿ ಏನು ತಿಳಿದುಕೊಂಡಾರು?

ಸತ್ಯವ್ರತ ಮನಸ್ಸಿನಲ್ಲಿಯೆ ಅಂದುಕೊಂಡ. 'ನಿಮ್ಮ ತಂದೆಯ ಮೈ ಮೇಲೆ ಪ್ರಜ್ಞೆಯೆಲ್ಲಿತ್ತು? ....' ಬುಚಕಿಗೆ ಹೇಳಿದ. "ತುಸು ಅತಿರೇಕ ವಾಯಿತೇನು? ಬಹಳ ಪ್ರಮಾದವಾಯಿತು. ಇನ್ನೆಂದಿಗೂ ಹೀಗೆ ಮಾಡುವ ದಿಲ್ಲ. ನಿಮ್ಮ ತಂದೆಯ ಕ್ಷಮೆ ಕೇಳಿ ಅವರನ್ನು ಸಂತೋಷಪಡಿಸಿ ಆ ಮೇಲೆ ಮನೆಗೆ ಹೋಗುವೆನು."

**ಬುಚಕೀ:—** ತಂದೆಯವರಿಗೆ ಎಲ್ಲಿಯ ಸಂತೋಷ! ಎಲ್ಲಿಯ ವ್ಯಸನ! ಏನೋ ದಿನಗಳೆಯುತ್ತಿದ್ದಾರೆ, ಅಷ್ಟೆ. ಯಾರು ಏನು ಅನ್ನುತ್ತಾರೆ, ಏನು ಮಾಡುತ್ತಾರೆ ಯಾವುದೂ ತಿಳಿಯುವದಿಲ್ಲ ಅವರಿಗೆ.

**ಸತ್ಯವ್ರತ:—** ಇಲ್ಲ, ಇನ್ನು ಇದೇ ಸ್ಥಿತಿಯು ಕೊನೆಯವರೆಗೆ ಉಳಿ ಯುವದಿಲ್ಲ. ಸ್ವಲ್ಪ ತಡೆದರೆ ತಾನೇ ತಿಳಿಯುವದು. ಅದೋ ನಿವಾರಣದಾದಾ ಸಹ ಬಂದುಬಿಟ್ಟರು.

* * * * *

ರಾತ್ರಿ ಒಂಬತ್ತು ಗಂಟೆಯಾಗಿದೆ. ಹೋಮವು ಆರಂಭವಾಗಿದೆ. ಭಕ್ತರ ಹಿಂಡು ಮೊದಲೇ ಬಂದು ತಳವೂರಿದೆ. ಹೋಮಗೃಹದಲ್ಲಿ ವಿರಿಂಚಿ ಮಹಾರಾಜ, ಗುರುಪದಬಾಬು, ಬುಚಕೀ, ಗಣೇಶಮಾಮಾ, ನಿವಾರಣ, ಸತ್ಯವ್ರತ ಮತ್ತು ಗೋವರ್ಧನಬಾಬು ಇಷ್ಟು ಜನ ಮಾತ್ರ ಇದೆ. ಗೋವ-ರ್ಧನಬಾಬುಗಳೊಬ್ಬರು ವಿಶಿಷ್ಟ ಭಕ್ತರು. ಮಹಾರಾಜರಿಗಾಗಿ ಮೂರಂತ ಸ್ತಿನ ಆಶ್ರಮವನ್ನು ಕಟ್ಟಿಸಿಕೊಡುವ ವಚನಕೊಟ್ಟಿದ್ದಾರೆ. ಹೋಮ ಗೃಹವು ಚಿಕ್ಕದಾಗಿದೆ. ಕಿಡಿಕಿ ಬಾಗಿಲಗಳೆಲ್ಲವೂ ಮುಚ್ಚಿವೆ. ಪ್ರವೇಶದ್ವಾರ ದಲ್ಲಿ ಗಣೇಶಮಾಮಾ ನಿಂತಿದ್ದಾರೆ; ಯಾರನ್ನೂ ಒಳಗೆ ಬಿಡುವದಿಲ್ಲ. ಕಿರಿ ಮಹಾರಾಜ ಅಥವಾ ಕೇವಲಾನಂದರು ಮಹಾರಾಜರ ನೈಶ ಆಹಾರಕ್ಕಾಗಿ 'ಚರು' ಮಾಡುವದರಲ್ಲಿ ತೊಡಗಿದ್ದಾರೆ. ಮನೆಯಲ್ಲಿ ಒಂದು ತುಪ್ಪದ ದೀಪಿಗೆ ಮಾತ್ರ ಮಿಣಿ ಮಿಣಿ ಉರಿಯುತ್ತಿದೆ. ವಿರಿಂಚಿ ಮಹಾರಾಜರು ಯೋಗಾಸನದಲ್ಲಿ ಧ್ಯಾನಮಗ್ನರಾಗಿದ್ದಾರೆ. ಎದುರಿಗೆ ಹೋಮಕುಂಡ. ಹಿಂದೆ ಗುರುಪದಬಾಬುಗಳೂ ಅವರ ಮಗಳಾದ ಬುಚಕಿಯೂ ಕುಳಿತು ಕೊಂಡಿದ್ದಾರೆ. ಅವರ ಹತ್ತರದಲ್ಲಿಯೆ ಒಂದು ಬದಿಗೆ ನಿವಾರಣ ಸತ್ಯವ್ರತರು ಮತ್ತೊಂದು ಬದಿಗೆ ಗೋವರ್ಧನಬಾಬುಗಳೂ ಕುಳಿತಿದ್ದಾರೆ.

ಬಹಳ ಹೊತ್ತು ಧ್ಯಾನಸ್ಥರಾಗಿದ್ದ ಬಳಿಕ ವಿರಿಂಚಿ ಮಹಾರಾಜರು ಪಂಚಪಾತ್ರೆಯೊಳಗಿಂದ ನೀರು ತೆಗೆದುಕೊಂಡು ನಾಲ್ಕೂ ಕಡೆಗೆ ಸಿಂಪಡಿಸಿದರು. ಘೃತ ಪ್ರದೀಪವು ಆರಿಬಿಟ್ಟಿತು. ಹೋಮಾಗ್ನಿಯಲ್ಲಿ ಉರಿಯುರಲಿಲ್ಲ. ಕೆಲವು ಕೆಂಡ ಕೆಂಪಾಗಿ ಕಾಣುತ್ತಿದ್ದುವು. ಇಷ್ಟರಲ್ಲಿ ವಿರಿಂಚಿ ಮಹಾರಾಜರು ಮೋರೆಯ ಮೇಲೆ ಕೈ ಸಡುಗಿಸಿ ರಭಸದಿಂದ ಗಲ್ಲಗಳನ್ನು ಬಾರಿಸತೊಡಗಿದರು. ಆ ಗಂಭೀರ ಬು-ಬು-ಬು-ಬು-ನಾದದಿಂದ ಕ್ಷುದ್ರಗೃಹವು ಕಂಪಿಸ ತೊಡಗಿತು.

ಸತ್ಯವ್ರತ ಮೆಲ್ಲನೆ ಬುಚಕಿಯ ಕಿವಿಯಲ್ಲಿ ನುಡಿದ. "ಬುಚಕೀ ಹೆದರಿಕೆ ಬರುತ್ತದೆಯೇನು?"

"ಇಲ್ಲ" ಎಂದಳು, ಬುಚಕೀ.

ಸಹಸಾ ಹೋಮಕುಂಡದಲ್ಲಿ ನೀಲಾಭ ಅಗ್ನಿಶಿಖೆಯೆದ್ದಿತು. ಆ ಕ್ಷೀಣ, ಅಸ್ಪಷ್ಟ ಪ್ರಕಾಶದಲ್ಲಿ ಎಲ್ಲರೂ ನೋಡಿದರು-ಮಹಾದೇವನೇ ಅಹುದು! ಹೋಮಕುಂಡದ ಹಿಂದೆ ವ್ಯಾಘ್ರಚರ್ಮಧಾರೀ, ಅಸ್ಥಿಮಾಲಾ-ವಿಭೂಷಿತ, ಪಿನಾಕ-ಡಮರು-ಪಾಣೀ, ಧವಲಕಾಂತಿ ಸ್ವಯಂ ಮಹಾದೇವನೇ ನಿಂತಿದ್ದಾನೆ.

ಗುರುಪದಬಾಬುಗಳು ನಿರ್ವಾಕ್ ನಿಶ್ಚಲರಾಗಿ ಕುಳಿತುಬಿಟ್ಟಿದ್ದಾರೆ. ಗೋವರ್ಧನ ಮಲ್ಲಿಕರು ತಮ್ಮ ಉದ್ದಿಮೆ ಹಾಗು ಮೂರನೆಯ ಮದುವೆಯ ಹೆಂಡತಿಯ ವಿಷಯವಾಗಿ ಎಲ್ಲ ಅಭಾವ ಅಭಿಯೋಗಗಳನ್ನು ಕರುಣಸ್ವರದಿಂದ ದೇವಾಧಿದೇವನಿಗೆ ಅರಿಕೆ ಮಾಡತೊಡಗಿದರು. ಗಣೇಶಮಾಮಾ ಶಿವಸ್ತೋತ್ರವನ್ನು-ಅವರ ಚಿಕ್ಕ ಮಗಳು ಮಹಾಕಾಲೀ ಪಾಠಶಾಲೆಯಲ್ಲಿ ಕಲಿತದ್ದನ್ನು-ಪಠಿಸತೊಡಗಿದರು.

ನಿವಾರಣ ಮೆಲ್ಲನೆ ಸತ್ಯವ್ರತನಿಗೆಂದ. "ಹೂಂ, ಇನ್ನು!"

ಸತ್ಯವ್ರತ ಆರ್ಭಟೆಯಿಂದ ಕೂಗಿದ. "ಬಮ್! ಬಾಬಾ ಮಹಾದೇವ!"

ತುಸು ಹೊತ್ತಿನಲ್ಲಿಯೆ ಒಮ್ಮಿಂದೊಮ್ಮೆ ಕೋಲಾಹಲವೆದ್ದಿತು. ಆ ಮೇಲೆ ಯಾರೋ ಕೂಗಿದರು. "ಬೆಂಕಿ ಹತ್ತಿದೆ."

ವಿರಿಂಚಿ ಮಹಾರಾಜರ ಗಲ್ಲಬಾರಿಸುವಿಕೆಯು ನಿಂತಿತು. ಅವರು

ಚಂಚಲರಾಗಿ ಅತ್ತಿತ್ತ ನೋಡತೊಡಗಿದರು. ಗೋವರ್ಧನರಾದರೂ ಗಾಬರಿಯಾಗಿ ಹೊರಗೆ ಓಡಿದರು.

"ಬೆಂಕಿ-ಬೆಂಕಿ – ಬೆಂಕಿ ಹತ್ತಿದೆ. ಹೊರಗೆ ಬನ್ನಿ-ಓಡಿರಿ-ಬೇಗ-"

ದಟ್ಟವಾದ ಹೊಗೆಯು ಸುತ್ತಮುತ್ತಿ ಒಳಗೆ ನುಗ್ಗುತ್ತಿತ್ತು. ವಿರಿಂಚಿ ಮಹಾರಾಜರು ಒಂದೇ ಹಾರಿಕೆಗೆ ಮನೆಯೊಳಗಿಂದ ಹೊರಗೆ ಬಂದರು. ಗೋವರ್ಧನ ಬಾಬುಗಳೂ ಎದೆಯನ್ನು ಹಿಡಿದುಕೊಳ್ಳುತ್ತ ಮಹಾರಾಜರ ಬೆನ್ನ ಹಿಂದೆಯೆ ಬಂದರು. ಬುಚಕೀ ತಂದೆಯ ಕೈ ಹಿಡಿದುಕೊಂಡು, "ಅಪ್ಪಾ ಅಪ್ಪಾ, ಏಳು" ಎಂದು ಎಬ್ಬಿಸತೊಡಗಿದಳು.

ನಿವಾರಣನೆಂದ. "ಈಗಲೆ ಹೋಗಬೇಡಿರಿ; ಕೂಡಿರಿ; ಏನೂ ಹೆದರಿಕೆಯಿಲ್ಲ."

ಮಹಾದೇವರಿಗೆ ಎಚ್ಚರ ಬಂತು! ಪಾಪ ಬೆದರಿದರು! ಅತ್ತಿತ್ತ ಹಣಿಕೆ ಹಾಕತೊಡಗಿದರು. ನಿವಾರಣ ಮೋಂಬತ್ತಿಯನ್ನು ಹಚ್ಚಿದ. ಮಹಾದೇವರು ಹಿಂದಿನ ಬಾಗಿಲಿನಿಂದ ಗಟ್ಟಹೊಡಿಸುವ ಹವಣಿಕೆಯಲ್ಲಿದ್ದರು. ಅಷ್ಟರಲ್ಲಿ ಸತ್ಯವ್ರತ ಹೋಗಿ ಅವರನ್ನು ಗಟ್ಟಿಯಾಗಿ ಹಿಡಿದುಬಿಟ್ಟ.

ಮಹಾದೇವರೆಂದರು. "ಎಲ ಎಲ! ಬಿಡೋ-ಬಿಡು. ಹತ್ತಿದs! ಈ ಹುಡುಗಾಟಿಕೆ ಸೆಟ್ಟಗಲ್ಲ ನೋಡು. ನಾಲ್ಕೂ ಕಡೆಗೆ ಬೆಂಕಿ ಹತ್ತಿದೆ. ಸುಮ್ಮನೆ ಬಿಡು-ಹೇಳತೇನೆ ಬಿಡು...."

**ಸತ್ಯವ್ರತ:**— ಎಲ, ಇಷ್ಟೇಕೆ ಅವಸರ? ಅಷ್ಟು ಗುರುತಾಗಲಿ. ಮಾತುಕತೆ ಆಗಲಿ. ಹೇಳು ನೋಡುವ, ಎಷ್ಟು ದಿನಗಳಿಂದ ಈ ದೇವತನ ಮಾಡುತ್ತಿರುವಿ?

ಹೊರಗಿನಿಂದ ಮೂರುನಾಲ್ಕು ಜನರು ಹೋಮಗೃಹದೊಳಗೆ ಬಂದರು. ಕೇವಲಾನಂದನನ್ನು ಫೇಂಕೂ ಪಾಂಡೆಯ ಕೈಯಲ್ಲೊಪ್ಪಿಸಿ ನಿವಾರಣ ಸತ್ಯವ್ರತರು, ವಿಸ್ಮಯ ವಿಮೂಢ ಗುರುಪದಬಾಬುಗಳನ್ನೂ ಅವರ ಮಗಳನ್ನೂ ಹೊರಗೆ ಕರೆದುಕೊಂಡು ಬಂದರು.

ಮನೆಗೆ ಬೆಂಕಿ ಹತ್ತಿರಲಿಲ್ಲ. ಪಕ್ಕದ ಕೋಣೆಯಲ್ಲಿ ಯಾರೋ ಹಸಿ ಹುಲ್ಲನ್ನು ಹೊತ್ತಿಸಿದ್ದರು. ಅದರ ಹೊಗೆಯು ನಾಲ್ಕೂ ಕಡೆಗೆ ಹಬ್ಬಿತ್ತು.

ದರವಾನ, ಮೌಲವಿ ಸಾಹೇಬ ಕೋಚಮನ್ ಮತ್ತು ಅಮೀಲಾ, ತಾಬಲಾ ಮೊದಲಾದ ಸತ್ಯವ್ರತನ ಅನುಚರರು ಸುಳುಸುಳ್ಳೇ ಗಲಾಟೆಯನ್ನು ಎಬ್ಬಿಸಿದ್ದರು!



" ಎಲ ಎಲ ಬಿಡೋ ಬಿಡು ಹತ್ತ್ರದ"

ವಿರಿಂಚಿ ಮಹಾರಾಜರ ಸ್ವರೂಪನಾಶವಾಯಿತು. ಆದರೆ ಅವರ ಆಧ್ಯ-ಕ್ಷತೆ ಹೋಗಲಿಲ್ಲ. ಅವರೆಂದರು. '' ಏನಯ್ಯಾ ಗುರುಪದ, ನಿನ್ನ ಆಶೆ ಹಿಂಗಿತಲ್ಲವೆ? ನಾಸ್ತಿಕರಿಗೆ ದಿವ್ಯದೃಷ್ಟಿಯೆಲ್ಲಿಂದ ಬರಬೇಕು? ನಿನ್ನ ಸುದೈವದಿಂದ ದೇವರು ಬಂದು ದರ್ಶನವನ್ನು ಕೊಟ್ಟನು. ಆದರೆ ಕಂಡೂ ಕಾಣಲಿಲ್ಲ. ಕೊನೆಗೆ ಮನುಷ್ಯರೂಪವನ್ನು ಧರಿಸಿ ಪರಿಹಾಸ ಮಾಡಿ ಹೋಗಿಬಿಟ್ಟ.''

ಸತ್ಯವ್ರತನೆಂದ. "ಪರಿಹಾಸವಂತೆ ಪರಿಹಾಸ! ಮಹಾದೇವ ಕೊಳೆತು ಕೇವಲ್ಯಾ ಆದ. ವಿರಿಂಚಿ ಮಹಾರಾಜ ಹೋಗಿ ಕವ್‌ಕಳ್ಳರಾದರು."

ಗೋವರ್ಧನಬಾಬುಗಳೆಂದರು. "ಮಗನೇ ನಮ್ಮ ಕೂಡ ಈ ಮೋಸವೆ? ಐದ್ಯೆದು ಹೌಸಿನ ಮುತ್ಸದ್ದಿಗಳು ನಾವು; ದೊಡ್ಡ ದೊಡ್ಡ ಯುರೋಪಿಯನ್ನರನ್ನು ಕಿಸೆಯಲ್ಲಿ ಹಾಕಿದ್ದೇವೆ–ನಮ್ಮನ್ನು ಮೋಸಗೊಳಿಸಲು ಬಂದಿರುವಿಯಾ? ಥಳಿಸಿರಿ ಕಳ್ಳನ್ನ; ಕೊಡಿರಿ ನಾಲ್ಕೇಟು ಕೆನ್ನೆಯ ಮೇಲೆ."

ಗುರುಪದಬಾಬುಗಳಿಗೆ ಇಷ್ಟು ಹೊತ್ತಿಗೆ ಪ್ರಜ್ಞೆ ಬಂದಿತ್ತು. ಅವರೆಂದರು. "ಬೇಡ ಬೇಡ ಹೋಗಲಿ ಬಿಡಿರಿ, ಹೋಗಲಿ. ಸತ್ಯವ್ರತ, ಒಂದು ಎಕ್ಕಾ ಗೊತ್ತುಮಾಡಿ ಇವರನ್ನು ಸ್ಟೇಶನ್ನಿಗೆ ಮುಟ್ಟಿಸುವ ವ್ಯವಸ್ಥೆ ಮಾಡಿರಿ. ಯಾರೂ ಏನೂ ಅನ್ನುವದು ಅವಶ್ಯವಿಲ್ಲ."

ಹಾಸಿಗೆಸುರಳಿ ಕಟ್ಟಿ ಆದಮೇಲೆ ಸತ್ಯವ್ರತನು ತಾನೇ ಹೋಗಿ ವಿರಿಂಚಿ ಮಹಾರಾಜರನ್ನು ಶಿಷ್ಯ ಸಹಿತ ಗಾಡಿಯಲ್ಲಿ ಕೂಡಿಸಿದ. ಬೀಳ್ಕೊಡುವಾಗ ಹೇಳಿದ. "ಪ್ರಭೂ, ತಾವಂತೂ ಈಗ ಹೊರಟಿರಷ್ಟೆ? ಒಳ್ಳೇದು ಹೋಗಿರಿ. ಚಂದ್ರಸೂರ್ಯರಂತೂ ತಮ್ಮ ಕೈಯಲ್ಲಿ. ಅವರು ಸರಿಯಾಗಿ ನಡಿಯುತ್ತಾರೋ ಇಲ್ಲವೋ ನೋಡುತ್ತಿರಬೇಕು! ಕೀಲೀ ಕೊಡಲಿಕ್ಕೆ ಮರೆಯಬಾರದು. ಮೇಲಿಂದಮೇಲೆ ಎಣ್ಣೆ ಹಾಕುತ್ತಿರಬೇಕು ಮತ್ತೆ!"

ಗದ್ದಲವು ಕಡಿಮೆಯಾದ ಮೇಲೆ ಗುರುಪದಬಾಬುಗಳೆಂದರು. "ಅಪಾ ನಿವಾರಣ, ಅಪಾ ಸತ್ಯವ್ರತ, ನೀವಿಬ್ಬರೂ ನನ್ನನ್ನು ಪಾರುಮಾಡಿರುವಿರಿ, ಈ ಉಪಕಾರವನ್ನು ನಾನೆಂದಿಗೂ ಮರೆಯುವಂತಿಲ್ಲ. ಈ ದಿನ ನೀವು ಇಲ್ಲಿಯೆ ಊಟ ಮಾಡಿರಿ. ರಾತ್ರಿ ಬಹಳವಾಗಿದೆ. ಇಲ್ಲಿಯೆ ಮಲಗಿಕೊಂಡು ನಾಳೆ ಬೆಳಗಿನಲ್ಲಿ ಹೋಗಿರಿ. ಇದೇನು ಸತ್ಯವ್ರತ, ನಿನ್ನ ಕೈ ಮೇಲೆ ರಕ್ತವೆಲ್ಲಿಂದ ಬಂತು?"

ಸತ್ಯವ್ರತನೆಂದ. "ಅದೇನೂ ಇಲ್ಲ. ಧಕ್ಕಾಮುಕ್ಕಿಯ ಹೊತ್ತಿನಲ್ಲಿ ಮಹಾದೇವ ತುಸು ಕಚ್ಚಿದ್ದ. ನೀವೇನೂ ಚಿಂತೆ ಮಾಡಬೇಡಿರಿ. ಹೋಗಿ ಸ್ವಸ್ಥವಾಗಿ ಮಲಗಿಕೊಳ್ಳಿರಿ."

    

**ಗುರುಪದ:**— ಹಾಗಾದರೆ ನೀನು ನನ್ನ ಕೂಡ ಬಾ. ಟಿಂಕ್ಚರ ಆಯೊಡಿನ್ ಹಚ್ಚಿ ಬುಡಕೀ ಪಟ್ಟಿಯನ್ನು ಕಟ್ಟಿದಳು.

ಊಟವಾದ ಮೇಲೆ ಸತ್ಯವ್ರತನೆಂದ. "ಊಶ್! ಏನು ಪಿಚಾಟವಿದು!"

ನಿವಾರಣ ಕೇಳಿದ. "ಮತ್ತೇನಾಯಿತು ಮಹಾರಾಯಾ?"

**ಸತ್ಯವ್ರತ:**— "ನಿವಾರಣ ದಾದಾ...."

"ಹೇಳಿಯಾದರೂ ಹೇಳು!"

"ನಿವಾರಣ ದಾದಾ...."

"ಏನದು ಒಮ್ಮೆ ಹೇಳಿಯಾದರೂ ಹೇಳು."



ಹೇ ಅಂದರೆ ಹೂಂ!

" ನಾನು ಬುಚಕಿಯನ್ನು ಮದುವೆಯಾಗುವೆನು."

" ಅದು ನನಗೆ ಮೊದಲೇ ಗೊತ್ತಿದೆ. ಆದರೆ ಅವಳು ನಿನ್ನನ್ನು ಮದುವೆಯಾಗದಿದ್ದರೆ? "

" ಆಗಿಯೆ ಆಗುವಳು. ಬುಚಕಿಯ ಅಪ್ಪ ಆಗುವನು."

" ಒಳ್ಳೇದು ಒಪ್ಪಿದೆ. ತಂದೆಯೂ ಒಪ್ಪಿದ. ಆದರೆ ಹುಡಿಗೆ ಏನನ್ನುತ್ತಾಳೆ?"

" ಅವಳಂತೂ ವಿಚಿತ್ರ ಉತ್ತರ ಕೊಡುತ್ತಾಳೆ. "

" ಅವಳೇನನ್ನುತ್ತಾಳೆ?"

" ಅವಳನ್ನುತ್ತಾಳೆ. 'ಹೆ:' "

" ಎಲೋ ಕತ್ತೆ, 'ಹೆ:' ಅಂದರೇ ಹೂಂ!"

---

# ಚಿಕಿತ್ಸಾ ಸಂಕಟ

ಗುರುವಾರ ಮೂರರ ಸಂಜೆ. ನಂದದುಲಾಲರು ಹಾಗ್ ಸಾಹೇಬನ ಪೇಟೆಯಿಂದ ಟ್ರಾಮಿನಲ್ಲಿ ಕುಳಿತುಕೊಂಡು ಮನೆಗೆ ಹೊರಟಿದ್ದರು. ಬೀಡನ್ ಸ್ಟ್ರೀಟನ್ನು ದಾಟಿ ಗಾಡಿಯು ಸಾವಕಾಶವಾಗಿ ಹೋಗ ಹತ್ತಿತು; ಎದುರಿಗೊಂದು ಎತ್ತಿನ ಗಾಡಿಯಿದ್ದಿತು. ಇನ್ನು ತುಸು ಮುಂದೆ ಹೋದರೆ ನಂದದುಲಾಲರ ಮನೆಯ ಓಣಿಯು ಬರುತ್ತಿತ್ತು. ಇಷ್ಟರಲ್ಲಿ ನೋಡಿದರು, ಅವರ ಪರಮಮಿತ್ರರಾದ ಬಂಕೂ ಬದಿಯ ಓಣಿಯೊಳಗಿಂದ ಬರುತ್ತಿದ್ದಾರೆ. ನಂದದುಲಾಲರು ಒಳ್ಳೇ ಹಿಗ್ಗಿನಿಂದ ಕರೆಯಹತ್ತಿದರು. "ನಿಲ್ಲಿರೀ ಬಂಕೂ, ನಾನೂ ಬಂದು ಬಿಟ್ಟೆ." ನಂದದುಲಾಲರು ಎರಡೂ ಬಗಲುಗಳಲ್ಲಿ ಎರಡು ಬಂಡಲುಗಳನ್ನು ಹಿಡಿದುಕೊಂಡು ಗಡಿಬಿಡಿಯಿಂದ, ಓಡುತ್ತಿರುವ ಗಾಡಿಯಿಂದ ಇಳಿಯುವಷ್ಟರಲ್ಲಿಯೇ ಕಚ್ಚಿಯಲ್ಲಿ ಕಾಲು ತೊಡಕಿ ಕೆಳಗೆ ಬಿದ್ದುಬಿಟ್ಟರು.

ಗಾಡಿಯಲ್ಲಿ ಒಮ್ಮೆಲೆ ಕೋಲಾಹಲವೆದ್ದಿತು. ಗಾಡಿ ಗಕ್ಕನೆ ನಿಂತಿತು. ಕೆಲ ಯಾತ್ರಿಗಳು ಇಳಿದು ನಂದಬಾಬುಗಳನ್ನು ಎಬ್ಬಿಸಿದರು. ಗಾಡಿಯ ಒಳಗೆ ಇದ್ದವರು ಗೋಣು ಹೊರಗೆ ಹಾಕಿ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. "ಅಲಲಲ ಬಹಳ ಪೆಟ್ಟು ಹತ್ತಿದೆ; ತುಸು ಬಿಸಿ ಹಾಲನ್ನಾದರೂ ಕುಡಿಸಿರಿ–ಎರಡೂ ಕಾಲು ಮುರಿದವೇನು ? 'ಮಲರೋಗವಿರಲಿಕ್ಕೆ ಬೇಕು' ಎಂದು ಒಬ್ಬನೆಂದ. 'ತಲೆ ತಿರುಗಿರಬಹುದು' ಎಂದು ಇನ್ನೊಬ್ಬ. 'ಕುಡಿದಿರಬಹುದು' ಎಂದು ಬೇರೊಬ್ಬ. 'ಹಳ್ಳಿಯ ಕೆಂಚ' ಎಂದುಸುರಿದ ಯಾವನೋ ! ಮತ್ತೊಬ್ಬನೆಂದ, 'ದೆವ್ವ ಬಡಿದಿದೆ–ದೆವ್ವ !'

ನಿಜವಾಗಿ ನಂದದುಲಾಲರಿಗೆ ಎಲ್ಲಿಯೂ ಪೆಟ್ಟು ಹತ್ತಿರಲಿಲ್ಲ. ಆದರೆ ಅಲ್ಲಿ ಕೇಳುವವರಾರು!-'ಭಲೆ! ಹತ್ತಿಲ್ಲವೆಂದರೆ ಹೇಗೆ? ಚೆನ್ನಾಗಿಯೇ ಹತ್ತಿದೆ.

ಒಳಗಿನ ಪೆಟ್ಟು-ಎರಡು ತಿಂಗಳ ಹಾಸಿಗೆ ಹಿಡಿಯಬೇಕಾಗುವದು. ಮನೆಗೆ ಹೋದ ಮೇಲೆ ತಿಳಿದೀತು.' ನಂದದುಲಾಲರು ಪುನಃ ಪುನಃ ಕೈಜೋಡಿಸಿ ನಿಜವಾಗಿಯೂ ತಮಗೆ ಎಲ್ಲಿಯೂ ಪೆಟ್ಟು ಹತ್ತಿಲ್ಲವೆಂದು ಹೇಳಿಕೊಂಡರು. ಒಬ್ಬ ವೃದ್ಧ ಗೃಹಸ್ಥನೆಂದ. "ನೋಡಿದಿರಾ, ಒಳ್ಳೆಯವರ ಕಾಲವಲ್ಲ ಇದು! ಕಣ್ಣಿದುರಿಗೇ ನೋಡಿದ್ದೇವೆ; ಆದರೂ ಹತ್ತಿಲ್ಲವೆಂದು ಹೇಳುತ್ತಾನೆ!"

ಇಷ್ಟರಲ್ಲಿ ಬಾಕೂಬಾಬುಗಳು ಬಂದರು. ನಂದದುಲಾಲರು ಕುತ್ತಿಗೆಯೊಳಗಿಂದ ಪಾರಾದರು. ಶೇದಬಿನ್ನ ಯಾತ್ರಿಗಳನ್ನು ಕರೆದುಕೊಂಡು ಗಾಡಿಯೂ ಹೊರಟಿತು.

ಬಾಕೂ ಎಂದರು. "ಏನು! ನನಗಂತೂ ನಿಮಗೆ ಚಕ್ರ ಬಂದ ಹಾಗೆಯೆ ಅನಿಸಿತು. ಇರಲಿ, ಇನ್ನು ನೀವು ಮನೆಯವರೆಗೆ ನಡೆದು ಹೋಗಬೇಕಾಗಿಲ್ಲ. - ಏ ರಿಕ್ಷಾ-"

ರಿಕ್ಷಾದವ ನಂದದುಲಾಲರನ್ನು ಸಾವಕಾಶವಾಗಿ ಮನೆಯ ಕಡೆಗೆ ಕರೆದುಕೊಂಡು ಹೊರಟ. ಬಾಕೂ ಹಿಂದಿನಿಂದ ನಡೆಯುತ್ತ ಸಾಗಿದರು.

ನಂದದುಲಾಲರಿಗೆ ಈಗ ನಲವತ್ತು ವರ್ಷ. ಕಪ್ಪು ಬಣ್ಣ; ದುಂಡು ದುಂಡಾದ ಮುಖ. ಅವರ ತಂದೆ ಪಶ್ಚಿಮದಲ್ಲಿ ಕಮಿಸರಿಯೇಟಿನಲ್ಲಿ ಕೆಲಸ ಮಾಡಿ ಬಹಳಷ್ಟು ಹಣ ಗಳಿಸಿದ್ದರು. ಸಾಯುವ ಮುಂದೆ ಅವರು ತಮ್ಮ ಒಬ್ಬನೇ ಮಗನಾದ ನಂದದುಲಾಲರಿಗಾಗಿ ಕಲಕತ್ತೆಯಲ್ಲಿ ಒಂದು ದೊಡ್ಡ ಮನೆ, ರಾಶಿ ಸಾಮಾನು ಹಾಗು ಸರಕಾರೀ ಸಾಲದ ಬಾಂಡುಗಳ( Bonds ) ಒಂದು ದೊಡ್ಡ ಹೊರೆಯನ್ನು ಬಿಟ್ಟು ಹೋಗಿದ್ದರು. ನಂದದುಲಾಲರ ಮದುವೆಯು ಚಿಕ್ಕ ವಯಸ್ಸಿನಲ್ಲಿಯೆ ಆಗಿತ್ತು. ಆದರೆ ಅವರ ಹೆಂಡತಿ ಒಂದು ವರ್ಷದಲ್ಲಿಯೆ ತೀರಿಕೊಂಡಳು. ಆಮೇಲೆ ಅವರು ಮತ್ತೆ ಮದುವೆ ಮಾಡಿಕೊಳ್ಳಲಿಲ್ಲ. ತಾಯಿಯಂತೂ ಮೊದಲೇ ತೀರಿದ್ದಳು-ಮನೆಯಲ್ಲಿ ಇದ್ದ ಒಬ್ಬಳೇ ಹೆಂಗಸೆಂದರೆ ಅವರ ಮುದುಕಿ ಅತ್ತಿಗೆ. ಅವಳು ಯಾವಾಗಲೂ ಭಗವತ್ಸೇವೆಯಲ್ಲಿಯೆ ತೊಡಗಿರುತ್ತಾಳೆ. ಮನೆಯ ಕೆಲಸ-ಬೊಗಸೆಯನ್ನು ಆಳು ಹೋಳುಗಳೇ ನೋಡಿಕೋತಾರೆ. ಎರಡನೆಯ ಮದುವೆಯನ್ನು ಮಾಡಿಕೊಳ್ಳಲು ನಂದದುಲಾಲರ ಆಕ್ಷೇಪವೇನೂ ಇಲ. ಆದರೆ ಇದುವರೆಗೆ

ಆಗಲೇ ಇಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ-ಆಲಸ್ಯ. ನಾಟಕ, ಸಿನೇಮಾ, ಫುಟಬಾಲ್ ಮ್ಯಾಚ್, ರೇಸ ಹಾಗು ಬಂಧುಬಾಂಧವರ ಸಂಸರ್ಗ-ಇವೆಲ್ಲ ವಿಷಯುಗಳಲ್ಲಿ ಸಹಜವಾಗಿ ದಿನ ಕಳೆದು ಹೋಗುತ್ತಿವೆ, ಮದುವೆಗೆ ಅವಕಾಶವೆಲ್ಲಿ? ಮೇಲಾಗಿ ದಿನದಿನಕ್ಕೆ ವಯಸ್ಸು ಹೆಚ್ಚಾಗುತ್ತಿದೆ. ಇನ್ನು ಮದುವೆ ಮಾಡಿಕೊಳ್ಳದಿರುವದೆ 'ಒಳ್ಳೆಯದು. ಸಾಧಾರಣವಾಗಿ ಹೇಳಬೇಕೆಂದರೆ, ನಂದದುಲಾಲರು ಸರಳ-ಸ್ವಭಾವದ, ಅಲ್ಪಭಾಷಿಯಾದ, ನಿರುದ್ಯೋಗಿಯಾದ, ಆರಾಮಪ್ರಿಯ ವ್ಯಕ್ತಿ.

ಸಂಜೆಯ ಮುಂದೆ ನಂದಬಾಬುಗಳ ಮನೆಯ ಪಡಸಾಲೆಯಲ್ಲಿ ಮಿತ್ರ ಸಮಾಜವು ವಿಶೇಷವಾಗಿ ನೆರೆದಿದೆ. ದಿಕ್ಕೆಟ್ಟ ಹರಟೆ ನಡೆದಿದೆ. ನಂದ ದುಲಾಲರು ಇಂದು ಸ್ವಲ್ಪ ಅಸ್ವಸ್ಥರಾಗಿದ್ದಾರೆ; ಆದ್ದರಿಂದ ಶಾಲು ಹೊದ್ದುಕೊಂಡು ಉಸ್ಸಕ್ಕೆ ಒರಗಿಕೊಂಡಿದ್ದಾರೆ. ಗೆಳೆಯರು ಚಹ ಹಾಗು ಹಪ್ಪಳಗಳ ಸಮಾಚಾರವನ್ನು ತೆಗೆದುಕೊಂಡಿದ್ದಾರೆ. ಇನ್ನು ಎಲೆ ಸಿಗರೇಟುಗಳ ಬಾರಿ. ಹರಟೆ ಯಥಾಪ್ರಕಾರ ನಾಗಿದೆ.

ಗೋಪೀಬಾಬೂ ಅನ್ನುತ್ತಿದ್ದರು. "ಛೀ ಛೀ! ಶರೀರದ ವಿಷಯವಾಗಿ ಇಷ್ಟು ಉದಾಸೀನರಾಗಬೇಡಿರಿ, ನಂದಬಾಬೂ! ಇಂಥ ಚಳಿಗಾಲದಲ್ಲಿ ತಲೆ ತಿರುಗಿ ಬೀಳುವದುಽಽ-ಲಕ್ಷಣ ನೆಟ್ಟಗಲ್ಲ."

**ನಂದ:—** ತಲೆ ತಿರುಗಿದಂತೇನೂ ಆಗಲಿಲ್ಲ. ಬರೀ ಕಚ್ಚೆಯಲ್ಲಿ ಕಾಲುತೊಡಕಿ....

**ಗೋಪಿ:—** ಅಲ್ಲ ಅಲ್ಲ! ತಲೆ ತಿರುಗಿರಲೇ ಬೇಕು. ಮೆದುಳು ಜಡವಾಗಿದೆ. ಬಳಿಯಲ್ಲಿಯೆ ಡಾಕ್ಟರ ತಫಾದಾರರು ಇದ್ದಾರೆ. ಇಂಥ ದೊಡ್ಡ ಫಿಜೀಶಿಯನ್ ಊರಲ್ಲಿ ಮತ್ತೆ ಸಿಗಬೇಕೆಲ್ಲಿ? ಹೋಗಿರಲ್ಲ ನಾಳೆ ಮುಂಜಾನೆ, ನಿಮ್ಮ ಪ್ರಕೃತಿಯನ್ನು ತೋರಿಸಲಿಕ್ಕೆ.

ಬಂಕೂ ಎಂದರು. "ನನ್ನ ಅಭಿಪ್ರಾಯದಂತೆ ನೀವು ಒಮ್ಮೆ ನೀಲಾಲ ಬಾಬುಗಳಿಗೆ ತೋರಿಸುವದು ನೆಟ್ಟಗೆ. ಇಂಥ ಚತುರ ಹೋಮಿಯೋಪ್ಯಾಥ್ ಸಿಗುವದು ಅಸಾಧ್ಯ. ಸಿಡುಕಿನ ಸ್ವಭಾವದವನಾದರೂ ಮುದುಕ ಮಹಾ ವಿದ್ವಾಂಸ."

ಷಷ್ಟ್ರೀ ಬಾಬುಗಳು ಮೈತುಂಬ ಹೊದೆದುಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದರು. ತಲೆಯ ಮೇಲೊಂದು ಉಣ್ಣೆಯ ಟೊಪ್ಪಿಗೆಯನ್ನು ಏರಿಸಿದ್ದಾರೆ. ತುಂಬಾ ಗಡ್ಡವನ್ನು ಬಿಟ್ಟಿದ್ದಾರೆ. ಕೊರಳಪಟ್ಟಿ (Comfortor) ಯೊಂದನ್ನು ಬಿಗಿದಿದ್ದಾರೆ. ಅವರೆಂದರು–" ಅಬ್ಬಬ್ಬಾ! ಇಂಥ ಚಳಿಗಾಲದಲ್ಲಿ–ಅದೂ ಅಂಥ ಕೆಟ್ಟ ಹೊತ್ತಿನಲ್ಲಿ–ಯಾರಾದರೂ ಟ್ರ್ಯಾಮ್ ಹತ್ತುತ್ತಾರೆಯೆ? ಚಳಿಯಿಂದ ಮೈ ಒರಟು ಹಿಡಿಯಿತೆಂದರೆ ಸೆಟೆದು ಬೀಳುವದೆ ಸರಿ. ರಾಯರೆ, ಇನ್ನು ನೀವು ಮೈ ಬೆಚ್ಚಗೆ ಇಟ್ಟುಕೊಳ್ಳಿರಿ!"

ನಿಧಿರಾಮನೆಂದ. " ರಾಯರೆ, ನಿಮ್ಮ ಈ ಹಳೆಯ ತರಹವನ್ನು ಬಿಟ್ಟುಬಿಡಿರಿ. ಯಾವ ರಾಯನ ಕಾಲವೋ ಏನೋ ಈ ತಕ್ಕೆ! ಈ ಗಾಡಿ! ಗಾಳಿಗಿಂತ ಮೇಲಾದ ಈ ಕುದುರೆ! ಎಲ, ಇದರಿಂದ ಮೈ ಚಳಿ ಬಿಡುವದೆ? ನಿಮಗೇನು ರೊಕ್ಕ ಕಡಿಮೆಯಾಗಿದೆ? ಅಷ್ಟು ಸೊಗಸಿನಿಂದ ಇರಿ–ಮೋಜು ಮಾಡಲಿಕ್ಕೆ ಕಲಿಯಿರಿ."

ಕೊನೆಗೆ ನಾಳೆ ಮುಂಜಾನೆ ನಂದದುಲಾಲರು ಡಾಕ್ಟರ ತಫಾದಾರರ ಮನೆಗೆ ಹೋಗಬೇಕೆಂದು ನಿರ್ಣಯವಾಯಿತು.

* * * * *

ಡಾಕ್ಟರ ತಫಾದಾರ M. D., M. R. A. S. ಗ್ರೇ ಸ್ಟ್ರೀಟಿನಲ್ಲಿರುತ್ತಾರೆ. ವಿಶಾಲವಾದ ಮನೆ; ಎರಡು ಮೋಟರುಗಳು; ಒಂದು ಲ್ಯಾಂಡೋ ಗಾಡಿ. ಹೆಸರಾದ ಡಾಕ್ಟರರು; ಬೇಕಾದಷ್ಟು 'ಪ್ರ್ಯಾಕ್ಟೀಸು.' ಜನರು ಕರೆದರೂ ದರ್ಶನವಾಗುವದು ಕಷ್ಟ. ಒಂದು ಒಂದುವರೆ ತಾಸು ಪಕ್ಕದ ಕೋಣೆಯಲ್ಲಿ ದಾರಿಕಾಯ್ದನಂತರ ನಂದದುಲಾಲರಿಗೆ ಕರೆಬಂದಿತು. ಡಾಕ್ಟರ ಸಾಹೇಬರ ಕೋಣೆಗೆ ಹೋಗಿ ನೋಡಲಾಗಿ ಇನ್ನೂ ಒಬ್ಬ ರೋಗಿಯ ಪರೀಕ್ಷೆ ನಡೆದಿತ್ತು. ಮಹಾಕಾಯನಾದ ಮಾರವಾಡೀ ಗೃಹಸ್ಥನೊಬ್ಬನು ಬರಿಮೈಯಿಂದ ನಿಂತಿದ್ದಾನೆ. ಡಾಕ್ಟರರು ಪಟ್ಟಿಯಿಂದ ಆತನ ಹೊಟ್ಟೆಯ ಪರಿಧಿಯನ್ನು ಅಳೆದು–" ಸರಿ, ಒಂದೂಕಾಲು ಇಂಚು ಅಂತೂ ಬೆಳೆದಿದೆ" ಎಂದರು. ರೋಗಿಯು ಸಂತೋಷದಿಂದ " ಹಾಗಾದರೆ ನಾಡೀ ನೋಡಿರಿ"

ಎಂದ. ಡಾಕ್ಟರರು ರೋಗಿಯ ಮುಂಗೈಯ ನಾಡಿಯ ಮೇಲೆ ಮೋಟರ ಕಾರಿನ ಸ್ಪಾರ್ಕಿಂಗ ಪ್ಲಗ್ ಇಟ್ಟು "ಬಹಳ ಚೆನ್ನಾಗಿ ನಡೆದಿದೆ" ಎಂದರು. ರೋಗಿ "ನಾಲಿಗೆಯನ್ನಷ್ಟು ನೋಡಿ ಬಿಡಿರಿ" ಎಂದ; ಹಾಗೂ ಬಾಯಿ ತೆರೆದ. ಡಾಕ್ಟರರು ಆತನನ್ನು ಬೆಳಕಿನಲ್ಲಿ ಕರೆದುಕೊಂಡು ಹೋಗಿ ಆಪೆರಾ ಗ್ಲಾಸ್ ತೆಗೆದುಕೊಂಡು ನಾಲಿಗೆಯನ್ನು ಪರೀಕ್ಷಿಸಿದರು. ಆಮೇಲೆ "ಇನ್ನು ತುಸು ಉಳಿದಿದೆ. ನಾಳೆ ಮತ್ತೆ ಬನ್ನಿರಿ" ಎಂದು ಹೇಳಿದರು.

ಮಾರವಾಡೀ ರೋಗಿಯು ಹೊರಟು ಹೋದ ಮೇಲೆ ಡಾಕ್ಟರರು ನಂದದುಲಾಲರ ಕಡೆಗೆ ನೋಡಿ ಎಂದರು-"ವೆಲ್?"

ನಂದದುಲಾಲರು ಹೇಳಿದರು. "ಬಹಳ ಸಂಕಟದಲ್ಲಿ ಬಿದ್ದಿರುವೆನು. ಆದಕ್ಕಾಗಿ ತಮ್ಮ ಕಡೆಗೆ ಬಂದಿದ್ದೇನೆ. ನಿನ್ನೆ ಒಮ್ಮಿಂದೊಮ್ಮೆ ಟ್ರಾಮಿನಿಂದ...."

**ತಫಾದಾರ:**—'ಕಂಪಾವುಂಡ್ ಫ್ರ್ಯಾಕ್ಚರ? ಎಲವು ಮುರಿದಿರುವದೋ?

ನಂದಬಾಬು ಮೊದಲಿನಿಂದ ಕೊನೆಯವರೆಗೆ ತಮ್ಮ ಅವಸ್ಥೆಯನ್ನು ತಿಳಿಸಿದರು—ನೋವಿಲ್ಲ; ಜ್ವರ ಬರುವದಿಲ್ಲ. ಹೊಟ್ಟೆ ಕಡಿತ, ಕೆಮ್ಮು, ನೆಗಡಿ ಯಾವುದೂ ಇಲ್ಲ. ನಿನ್ನಿನಿಂದ ಹಸಿವೆ ತುಸು ಕಡಿಮೆಯಾಗಿದೆ. ರಾತ್ರಿ ಕೆಟ್ಟ ಕನಸುಗಳು ಬೀಳುತ್ತವೆ. ಮನಸ್ಸಿನಲ್ಲಿ ಧಸಿಕೆ ಕುಳಿತಿದೆ.

ಡಾಕ್ಟರರು ಅವರ ಎದೆ, ಹೊಟ್ಟೆ, ತಲೆ, ಕೈಕಾಲು ನಾಡಿಗಳನ್ನು ಪರೀಕ್ಷಿಸಿ ಆಮೇಲೆ 'ನಾಲಿಗೆ ನೋಡೋಣ' ಎಂದರು.

ನಂದಬಾಬೂ ನಾಲಿಗೆಯನ್ನು ತೆಗೆದರು.

ಡಾಕ್ಟರರು ತುಸುಹೊತ್ತು ಮೋರೆಯನ್ನು ಕೊಂಕಿಸಿ ಲೇಖನಿಯನ್ನೆತ್ತಿದರು. ಪ್ರಿಸ್ಕ್ರಿಪ್ಶನ್ ಬರೆಯುವದಾದ ಮೇಲೆ ನಂದದುಲಾಲರನ್ನು ನೋಡಿ "ಇನ್ನು ತಾವು ನಾಲಿಗೆಯನ್ನು ಒಳಗೆ ತೆಗೆದುಕೊಳ್ಳಬಹುದು. ಈ ಔಷಧವನ್ನು ದಿನಾಲು ಮೂರು ಸಾರೆ ಕುಡಿಯಿರಿ" ಎಂದು ಹೇಳಿದರು.

**ನಂದ:**— ನನ್ನ ಪ್ರಕೃತಿಯ ಬಗ್ಗೆ ತಮ್ಮದೇನಿದೆ ಅಭಿಪ್ರಾಯ?

**ಡಾಕ್ಟರ:**— ವ್ಹೇರೀ ಬ್ಯಾಡ್.

ನಂದದುಲಾಲರು ಹೆದರುತ್ತ ಕೇಳಿದರು. "ಏನಾಗಿದೆ?"

**ತಫಾದಾರ:—** ಇನ್ನೂ ಕೆಲವು ದಿನ 'ವಾಚ್' ಮಾಡದೇ ಏನೂ ಹೇಳಲಿಕ್ಕೆ ಬರುವಂತಿಲ್ಲ. ಆದರೆ Carabral tumour with strangulated ganglia ಆಗಿದೆಯೆಂಬ ಸಂಶಯು ಬರುತ್ತದೆ. ಟ್ರಿಫಾಯಿನ್ ಮಾಡಿ ತಲೆ ಬುರಡಿಯನ್ನು ಕೊಯ್ದು ಆಪರೇಶನ್ ಮಾಡಬೇಕಾಗುವದು. ಮತ್ತೆ ಕುತ್ತಿಗೆಯನ್ನು ಕೊಯ್ದು ನರಗಳ ತೊಡಕನ್ನು ಬಿಡಿಸಬೇಕು. 'ಶಾರ್ಟ ಸರ್ಕಿಟ' ಆಗಿದೆ.

**ನಂದ:—** ಜೀವ ಹೋಗುವದಿಲ್ಲವಷ್ಟೆ ?



ಇನ್ನು ತಾವು ನಾಲಿಗೆಯನ್ನು ಒಳಗೆ ತೆಗೆದುಕೊಳ್ಳಬಹುದು.

**ತಫಾದಾರ:—** ಬಹಳ ಆಯಾಸ ಪಡಬೇಡಿರಿ. ಇಲ್ಲವಾದರೆ ಗುಣ ಮಾಡುವದು ಸಾಧ್ಯವಿಲ್ಲ. ಏಳು ದಿನಗಳ ಮೇಲೆ ಮತ್ತೆ ಬನ್ನಿರಿ. ಮಯ್ ಫ್ರೆಂಡ್ ಮೇಜರ ಗೋಸಾಯಿಯವರ ಕೂಡ ಕನ್‌ಸಲ್ಟೇಶನ್‌ದ ವ್ಯವಸ್ಥೆ ಮಾಡುವೆನು. ಅನ್ನ ಸಾರು ವಿಶೇಷ ಉಣಬೇಡಿರಿ. ಎಗ್‌ಫ್ಲಿಪ್, ಬೋನ ಮ್ಯಾರೋ ಸೂಪ, ಚಿಕನ್ ಸ್ಟ್ಯೂಗ್ನೂ ಮೇ ಮೊದಲಾದವುಗಳನ್ನು ತಿನ್ನಿರಿ. ಸಂಜೆಯ ಮುಂದೆ ತುಸು ಬರ್ಗಂಡಿಯನ್ನು ತಿನಬಹುದು. ಬರ್ಫದ ನೀರು ಯಥೇಷ್ಟ ಕುಡಿಯಿರಿ. ಹೂಂ,ನೂರುವತ್ತೆರಡು ರೂಪಾಯಿ. ಥ್ಯಾಂಕ ಯೂ.

ನಂದಬಾಬೂ ತತ್ತರಿಸುತ್ತ ಅಲ್ಲಿಂದ ಹೊರಟರು.

ಸಂಜೆಯ ಮುಂದೆ ಬಾಕೂಬಾಬೂ ಎಂದರು. "ಎಲ, ನಾನು ಆಗಲೇ ಹೇಳಿದ್ದಿಲ್ಲವೆ ಅವನ ಕಡೆಗೆ ಹೋಗಬೇಡಿರೆಂದು ? ಮಗಾ, ಮಾರ್‌-ವಾಡಿಗಳ ಹೊಟ್ಟೆಯ ಮೇಲೆ ಕೈ ಆಡಿಸಿ ರೊಕ್ಕಾ ಎಳೆಯುತ್ತಿದ್ದಾನೆ. ಭಲೆ, ತಲೆಯ ಮೇಲೆ ಆಪರೇಶನ್ ಮಾಡುತ್ತಾನಂತೆ ! "

**ಷಷ್ಟೀ:**— ನಮ್ಮ ಓಣಿಯೊಳಗಿನ ತಾರಿಣಿ ಕವಿರಾಜ (ವೈದ್ಯ) ರಿಗೇಕೆ ತೋರಿಸಬಾರದು ?

**ಗೋಪೀ:**— ಇಲ್ಲ ಇಲ್ಲ ನಿಜವಾಗಿಯೂ ನಂದದುಲಾಲರ ತಲೆಯಲ್ಲಿ ಏನಾದರೂ ವಿಕಾರವುಂಟಾಗಿದ್ದರೆ ಆ ಹುಂಬ ವೈದ್ಯರಿಗೆ ನೀಗುವ ಮಾತಲ್ಲ. ಹೋಮಿಯೋಪಥಿಯೇ ನೆಟ್ಟಗೆ.

**ನಿಧು:**— ನನ್ನ ಮಾತು ಕೇಳುವಿರೇನು ? ಡಾಕ್ಟರಿಕೆಯ ಮೇಲೆ ಅಷ್ಟು ನಂಬಿಕೆಯಿರದಿದ್ದರೆ ತುಸು ವೈದ್ಯಕಿಯನ್ನಾದರೂ ಕಲಿಯಿರಿ. ದರ ವಾನನು ಉತ್ತಮ ಪಾಸಕ ಮಾಡಿಕೊಂಡು ಬಂದಿದ್ದಾನೆ. ನಾಲ್ಕು ಪಾಟೀ ತರಲೇನು ?

ಕೊನೆಗೆ ಹೋಮಿಯೋಪಥಿಕ್ ಔಷಧ ತೆಗೆದುಕೊಳ್ಳುವದೇ ನಿಶ್ಚಯ ವಾಯಿತು.

⁂ ⁂ ⁂ ⁂ ⁂

ಮರುದಿನ ನಸುಕಿನಲ್ಲಿಯೆ ನಂದದುಲಾಲರು ನೇಪಾಲ ಡಾಕ್ಟರರ ಮನೆಗೆ ಹೋದರು. ರೋಗಿಗಳ ಗದ್ದಲವಿನ್ನೂ ಆರಂಭವಾಗಿರಲಿಲ್ಲ. ತುಸು ಹೊತ್ತಿನಲ್ಲಿಯೆ ಅವರ ಬಾರಿ ಬಂದಿತು. ವಿಸ್ತಾರವಾದ ಒಂದು ಕೋಣೆಯಲ್ಲಿ ಜಮಖಾನೆಯನ್ನು ಹಾಸಿದ್ದರು. ನಾಲ್ಕು ಕಡೆಗೆ ಪುಸ್ತಕಗಳ ರಾಶಿ ಯೊಟ್ಟಿತ್ತು. ಪುಸ್ತಕಗಳ ಗೋಡೆಯ ನಡುವೆ ಕಥೆಯೊಳಗಿನ ನರಿಯಂತೆ ವೃದ್ಧ ನೇಪಾಲಬಾಬುಗಳು ಕುಳಿತಿದ್ದಾರೆ. ಬಾಯಿಯಲ್ಲಿ ಹುಕ್ಕಾದ ನಲಿಕೆಯಿದೆ. ಮನೆಯೆಲ್ಲ ಹೊಗೆಯೇ ಹೊಗೆಯಾಗಿದೆ.

ನಂದದುಲಾಲರು ನಮಸ್ಕಾರ ಮಾಡಿ ನಿಂತುಕೊಂಡರು. ನೇಪಾಲ ಡಾಕ್ಟರನು ತೀಕ್ಷ್ಣ ದೃಷ್ಟಿಯಿಂದ ನೋಡಿ "ಕೂಡಲಿಕ್ಕೆ ಜಾಗವಿದೆಯಲ್ಲ" ಎಂದನು. ನಂದದುಲಾಲರು ಕುಳಿತರು.

**ನೇಪಾಲ**:— ಉಸಿರು ಆಡುತ್ತಿದೆಯೆ ?

**ನಂದ**:— ಏನಂದಿರಿ ?

**ನೇಪಾಲ**:— ಇದಕ್ಕಾಗಿ ಕೇಳುತ್ತಿದ್ದೇನೆ, ರೋಗಿಯ ಶ್ವಾಸಹಾರ ಹತ್ತಿತೆಂದರೆ ಜನರು ನನ್ನನ್ನು ಕರೆಯಲಿಕ್ಕೆ ಬರುತ್ತಾರೆ.

ನಂದದುಲಾಲರು ವಿನಯದಿಂದ '' ನಾನೇ ರೋಗಿ '' ಎಂದರು.

**ನೇಪಾಲ**:— ಕಳ್ಳರ ಕೈಯಿಂದ ಬೇಗ ಪಾರಾಗಿ ಬಂದಿರಿ! ಒಳ್ಳೇದು ನಿಮಗೆ ಏನಾಗಿದೆ, ಹೇಳಿರಷ್ಟು ?

ನಂದದುಲಾಲರು ತಮ್ಮ ಕತೆ ಹೇಳಿದರು.

**ನೇಪಾಲ**:— ತಫಾದಾರ ಏನೆಂದ ?

**ನಂದ**:— 'ನಿಮ್ಮ ತಲೆಯಲ್ಲಿ ಟ್ಯೂಮರ ಇದೆ' ಎಂದ.

**ನೇಪಾಲ**:— ತಫಾದಾರನ ತಲೆಯಲ್ಲಿ ಏನಿರುವದೆಂಬುದು ಗೊತ್ತಿರುವದೋ ? ಬಟಾಟಿ. ಆವನ ಟೊಪ್ಪಿಗೆಯೊಳಗೆ ಕೋಡು, ಬೂಟಿನೊಳಗೆ ಖುರ; ಚಣ್ಣದೊಳಗೆ ಬಾಲ–ತಿಳಿಯಿತೆ ?–ಹಸಿವೆಯಾಗುತ್ತದೆಯೋ ?

**ನಂದ**:— ಎರಡು ದಿನಗಳಿಂದ ಏನೂ ಹಸಿವೆಯಿಲ್ಲ.

**ನೇಪಾಲ**:— ನಿದ್ದೆ ಬರುತ್ತದೆಯೋ ?

'' ಇಲ್ಲವಲ್ಲ ''

'' ತಲೆಶೂಲಿ ಏಳುತ್ತದೆಯೋ ? ''

'' ನಿನ್ನೆ ಸಂಜೆಗೆ ಎದ್ದಿತ್ತು. ''

'' ಎಡಭಾಗದಲ್ಲಿಯೆ ? ''

'' ಅಹುದು ''

'' ಅಥವಾ ಬಲಬಾಗದಲ್ಲಿಯೊ ?''

'' ಅಹುದು ''

ನೇಪಾಲಬಾಬುಗಳು ಸಿಟ್ಟಿಗೆದ್ದು ಗದರಿಸಿದರು. '' ಸರಿಯಾಗಿ ಉತ್ತರ ಕೊಡಿರಿ. ''

**ನಂದ**:— ಸರಿಯಾಗಿ ಎರಡರ ಸಹನೆ, ನೋಡಿರಿ.

**ನೇಪಾಲ**:— ಹೊಟ್ಟೆ ಮುರಿಯುತ್ತಿದೆಯೇನು ?

**ನಂದ:—** ಆ ದಿನ ಮುರಿಯುತ್ತಿತ್ತು. ಕಡಲಿಯ ಉಸಳೀ ತಿಂದಿದ್ದೆ ಆದ್ದರಿಂದ....

**ನೇಪಾಲ:—** ಹೊಟ್ಟೆ ಮುರಿಯುವದೊ ಅಥವಾ ಕಡಿಯುವದೋ? ಸರಿಯಾಗಿ ಹೇಳಿರಿ.




" ಗುರ್–ಗುರ್–ಗುರ್–ಗುರ್–ಎನ್ನುತ್ತದೆ "

ನಂದದುಲಾಲರು ಗಾಬರಿಯಾದರು. "ಗುರ್–ಗುರ್–ಗುರ್–ಗುರ್–ಎನ್ನುತ್ತದೆ" ಎಂದರು.

ಡಾಕ್ಟರನು ಮೊದಲು ಎಷ್ಟೋ ದೊಡ್ಡ ದೊಡ್ಡ ಪುಸ್ತಕಗಳನ್ನು ತಿರುವಿ ಹಾಕಿದನು. ಆಮೇಲೆ ತುಸು ಹೊತ್ತು ಯೋಚಿಸಿ ಹೇಳಿದ. "ಹೂಂ! ಒಂದು ಔಷಧ ಕೊಡುತ್ತೇನೆ; ತೆಗೆದುಕೊಂಡು ಹೋಗಿರಿ. ಮೊದಲು ನಿಮ್ಮ ಮೈಯೊಳಗಿನ ಅ್ಯಲೋಪಥಿಕ್ ವಿಷವನ್ನು ತಳ್ಳಿಹಾಕ

ಬೇಕಾಗಿದೆ. ನಾನು ಐದು ವರ್ಷದವನಿದ್ದಾಗ ಮೂರ್ಖರು ನನ್ನ ರಕ್ತದಲ್ಲಿ ಎರಡು ಗ್ರೇನ್ ಕ್ವಿನಾಯಿನ್ ಸೇರಿಸಿದ್ದರು. ಇನ್ನೂ ವರೆಗೆ ಸಂಜೆಯು ಮುಂದೆ ತಲೆ ದಿವ್ ಎನ್ನುತ್ತದೆ. ಒಂದು ವಾರದ ನಂತರ ಮತ್ತೆ ಬರ್ರಿ. ಆಗ ನಿಜವಾದ ಚಿಕಿತ್ಸೆಗೆ ಆರಂಭವಾಗುವದು ''

**ನಂದ:**— ಬೇನೆ ಯಾವುದು ?

ಡಾಕ್ಟರ ಹುಬ್ಬು ಗಂಟಿಕ್ಕಿ ಎಂದ. '' ಬೇನೆ ತಿಳಿದುಕೊಂಡರೆ ನಿಮಗೇನು ಕೋಡು ಮೂಡುವದೇನು ? ನಾನೊಂದು ವೇಳೆ ನಿಮ್ಮ ಹೊಟ್ಟೆಯಲ್ಲಿ (differential calculus) ಆಗಿದೆಯೆಂದರೆ ನಿಮಗೆ ಏನು ತಿಳಿಯುವದು ? ಅನ್ನ ಉಣಬೇಡಿರಿ. ಎರಡೂ ಹೊತ್ತು ಚಪಾತಿ ತಿನ್ನಿರಿ. ವಿನಾ ಗೀನ ಏನೂ ತಿನ್ನಕೂಡದು. ಹೆಸರುಬೇಳೆಯ ಕಟ್ಟು ಸ್ವಲ್ಪ ತೆಗೆದುಕೊಳ್ಳಬಹುದು. ಸ್ನಾನ ಮಾಡಬಾರದು. ಬೇಕಾದರೆ ಬಿಸಿನೀರು ತುಸು ತುಸು ಕುಡಿಯಬಹುದು. ತಂಬಾಕ ಸೇದಬಾರದು. ಇಲ್ಲವಾದರೆ ಔಷಧದ ಸತ್ತ್ವ ಕಡಿಮೆಯಾಗಿ ಅದರ ಪ್ರಭಾವವಾಗದು—ಏನು ಯೋಚಿಸುತ್ತಿರುವಿರಿ ? ನಮ್ಮ ಕಪಾಟಿನೊಳಗಿನ ಔಷಧಗಳೆಲ್ಲ ನಿಸ್ಸತ್ತ್ವವಾಗಿರಬಹುದೆಂದೋ ! ಇಲ್ಲ—ಇಲ್ಲ. ನಮ್ಮ ತಂಬಾಕದಲ್ಲಿ 'ಸಲ್ಫರ ಥರ್ಟೀ' ಕೂಡಿರುತ್ತದೆ. ಫೀ ಎಷ್ಟು ಎಂಬುದನ್ನಾದರೂ ಹೇಳಬೇಕೆ ! ನೋಡುವದಿಲ್ಲವೆ ಗೋಡೆಯ ಮೇಲೆ ನೋಟೀಸ ಹಚ್ಚಿದೆ,— ಮೂವತ್ತೆರಡು ರೂಪಾಯಿ ! ಮತ್ತು ಔಷಧದ ಬೆಲೆ ನಾಲ್ಕು ರೂಪಾಯಿ.''

ನಂದದುಲಾಲರು ರೂಪಾಯಿ ಎಣಿಸಿ ಹೊರಟುಹೋದರು.

* * * * *

ಸಿಧಿರಾಮನೆಂದ. '' ರಾಯರೆ, ವ್ಯರ್ಥವಾಗಿ ಹಣವನ್ನೇಕೆ ಹಾಳು ಮಾಡುವಿರಿ ? ಇದಕ್ಕಿಂತ ಬಾಕ್ಸಿನಲ್ಲಿ ಕುಳಿತು ಐದುಸಾರೆ ನಾಟಕ ನೋಡಿದ್ದರೆ ಚೆನ್ನಾಗುತ್ತಿತ್ತು. ಎಲಾ, ಆ ನೇಪಾಲಗೆ ! ಮುದುಕ ಮಹಾ ಠಕ್ಕ. ಪಾಪ, ಭೋಳೆ ಮನುಷ್ಯರೆಂದು ನಮ್ಮ ನಂದಬಾಬುಗಳನ್ನು ಪೆಚ್ಚು ಮಾಡಿದ. ನನ್ನ ಕೈಯ್ಯಲ್ಲಿ ಸಿಕ್ಕಿದ್ದರೆ ನೋಡುತ್ತಿದ್ದೆ, ಅವ ಎಂಥ ಹೋಮಿಯೋ ಪಿತ್ತ ಎಂಬುದನ್ನು. ಒಂದೇ ಗುಟುಕಿಗೆ ಅವನ ಕಪಾಟು

ಸಹಿತ ಎಲ್ಲ ಔಷಧಗಳನ್ನು ನುಂಗಿ ನೀರು ಕುಡಿಯುತ್ತಿದ್ದೆ. ಏನು ಹೇಳಲಿ!"

**ಗೋಪೀ:—** ಈ ದಿನ ನಮ್ಮ ಆಫೀಸಿನಲ್ಲಿ ಮಾತು ಹೊರಟಿತ್ತು, ಫರೂಖಾಬಾದದಿಂದ ಒಬ್ಬ ದೊಡ್ಡ ಹಕೀಮನು ಬಂದಿದ್ದಾನಂತೆ. ಅವನ ಖ್ಯಾತಿ ಬಹಳ.ರಾಜರು ಮಹಾರಾಜರು ಆತನ ಕಡೆಯಿಂದ ಔಷಧ ತೆಗೆದು ಕೊಳ್ಳುತ್ತಾರಂತೆ. ಅವನಿಗೊಂದು ಸಾರೆ ತೋರಿಸಿದರೆ ನೆಟ್ಟಗೆಂದು ಕಾಣುತ್ತದೆ.

**ಷಷ್ಠೀ:—** ಇಂತಹ ಚಳಿಗಾಲದಲ್ಲಿ ಹಕೀಮನ ಔಷಧವೇ? ಆಯಿತು, ಸರಬತ್ ಕುಡಿಸಿ ಕುಡಿಸಿ ಕೊಂದು ಹಾಕುವನು. ಅವನಿಗಿಂತ ನಮ್ಮ ತಾರಿಣೀ ಕವಿರಾಜರೇ ನೆಟ್ಟಗೆ.

ಕಡೆಗೆ ಕವಿರಾಜ (ವೈದ್ಯರ) ಕಡೆಗೆ ಹೋಗಬೇಕೆಂದು ನಿರ್ಣಯ ವಾಯಿತು.

ಮರುದಿನ ಬೆಳಗಿನಲ್ಲಿಯೇ ನಂದಬಾಬು ತಾರಿಣೀ ಕವಿರಾಜರ ಮನೆಗೆ ಹೋದರು. ಕವಿರಾಜರಿಗೆ ಸುಮಾರು ಅರವತ್ತು ವರ್ಷ ವಯ ಸ್ಸಾಗಿರಬಹುದು. ಬಡಕಾದ ದೇಹ. ಗಡ್ಡಮಿಸೆಗಳನ್ನು ಬೋಳಿಸಿದ್ದಾರೆ. ಮೈತುಂಬ ಎಣ್ಣೆ ಹಚ್ಚಿಕೊಂಡು, ಎಂಟು ಮೊಳದ ಧೋತರ ಉಟ್ಟು ಕೊಂಡು, ಮೊಣಕಾಲು ಮುಡಿಚಿಕೊಂಡು ಕುರ್ಚಿಯ ಮೇಲೆ ಕುಳಿತಿದ್ದಾರೆ. ಕೈಯಲ್ಲಿ ಹುಕ್ಕಾ ಇದೆ. ಬಹಳ ತೃಪ್ತಿಯಿಂದ ಅದನ್ನು ಸೇದುತ್ತಿದ್ದಾರೆ. ಈ ಸ್ಥಿತಿಯಲ್ಲಿಯೆ ಅವರು ದಿನಾಲು ರೋಗಿಗಳನ್ನು ನೋಡುತ್ತಿರುತ್ತಾರೆ. ಕೋಣೆಯಲ್ಲೊಂದು ಮಂಚವಿದೆ. ಅದರ ಮೇಲೆ ಒಂದು ಚಾಪೆಯನ್ನು ಹಾಸಿದೆ. ನಾಲ್ಕಾರು ಹೊಲಸು ದಿಂಬುಗಳು ಇಡಲಾಗಿವೆ. ಗೋಡೆಗೆ ಆತು ಔಷಧಗಳ ಕಪಾಟುಗಳೆರಡು ನಿಂತಿವೆ.

ನಂದಬಾಬೂ ನಮಸ್ಕಾರ ಮಾಡಿ ಮಂಚದ ಮೇಲೆ ಕುಳಿತು ಕೊಂಡರು. ಕವಿರಾಜರು 'ಏನು ಸ್ವಾಮಿ, ತಾವು ಎಲ್ಲಿಂದ ಬರೋ ಣಾಯಿತು?' ಎಂದು ಕೇಳಿದರು.

ನಂದದುಲಾಲರು ತಮ್ಮ ಹೆಸರುದಶೆಗಳನ್ನು ಹೇಳಿದರು.

**ತಾರಿಣೀ:—** "ರೋಗಿಯ ಬೇನೆ ಯಾವುದು?"

ನಂದದುಲಾಲರು ತಾವೇ ಸ್ವತಃ ರೋಗಿಗಳೆಂದು ತಿಳಿಸಿದರು. ಹಾಗು ತಮ್ಮ ಎಲ್ಲ ಸಮಾಚಾರವನ್ನೂ ಹೇಳಿದರು.

**ತಾರಿಣೀ:—** ತಲೆಯಲ್ಲಿ ಆಪರೇಶನ್ ಮಾಡಿರುವರೇನು ?

**ನಂದ:—** ಇಲ್ಲ. ನನಗೆ 'ಗುಲ್ಮ' ರೋಗವೆಂದು ನೇಪಾಲ ಬಾಬೂ ಹೇಳಿದ್ದರು. ಆದ್ದರಿಂದ ಕ್ಷೌರ ಮಾಡಿಸಿಲ್ಲ.

**ತಾರಿಣೀ:—** ನೇಪಾಲ ? ಅವ ಯಾವ ? ಏನು ಮಾಡುತ್ತಾನೆ ?

**ನಂದ:—** ತಮಗೆ ಗೊತ್ತಿಲ್ಲವೆ ಅವರು ? ಚೋರ ಬಗಾನದ ನೇಪಾಲ ಚಂದ್ರರಾಯ M. B. F. T. S – ಬಹಳ ದೊಡ್ಡ ಹೋಮಿಯೋಫಥಿಕ್ ಡಾಕ್ಟರರು.

**ತಾರಿಣೀ:—** ಓಹೋ ! ಆ ನೇಪಾಳಿಯೆ ಅಹುದಲ್ಲೋ ? ಹಾಗಾದರೆ ಸ್ಪಷ್ಟವಾಗಿ ಹೇಳಲೊಲ್ಲಿರೇಕೆ ? ಅವ ಡಾಕ್ಟರ ಎಂದು ಆದ ? ಎಲ, ಓಣಿಯಲ್ಲಿಯು ಇಂಥ ಅನುಭವಿಕ ಕವಿರಾಜರಿರಲಾಗಿ ನೀವು ಆ ಹುಡುಗನ ಕಡೆಗೆ ಏಕೆ ಹೋಗುವಿರಿ ?

**ನಂದ:—** ಇಲ್ಲ. ನನ್ನ ಸ್ನೇಹಿತರೆಲ್ಲ 'ಮೊದಲು ಡಾಕ್ಟರರಿಗೆ ತೋರಿಸಿ ಅವರ ಅಭಿಪ್ರಾಯ ತಕ್ಕೊಳ್ಳಿರಿ. ಆಪರೇಶನ್ ಮಾಡಿಸುವ ಅಗತ್ಯ ವಿದ್ದರೆ ಗೊತ್ತಾಗುವದು.' ಎಂದು ಅಂದಿದ್ದರು.

**ತಾರಿಣೀ:—** ಜಯಂತೀ ಬಾಬುಗಳು ಗೊತ್ತಿರುವದೆ ? ಖುಲನಾದ ವಕೀಲ ಜಯಂತೀಬಾಬು ?

ನಂದದುಲಾಲರು ಗೋಣು ಅಲ್ಲಾಡಿಸಿದರು.

**ತಾರಿಣೀ:—** ಅವರ ಸೋದರ ಮಾವನಿಗೆ ಉರುಸ್ತಂಭವಾಗಿತ್ತು. ಸಿವ್ಹಿಲ್ ಸರ್ಜನನು ಅವರ ಕಾಲು ಕತ್ತರಿಸಿಬಿಟ್ಟನು. ಮೂರು ದಿನ ಪ್ರೈ ಮೇಲೆ ಎಚ್ಚರವಿರಲಿಲ್ಲ. ಎಚ್ಚರ ಬಂದ ಕೂಡಲೆ ' ನನ್ನ ಕಾಲುಗಳೆಲ್ಲಿವೆ ? ಕರೆಯಿರಿ ತಾರಿಣೀ ಸೇನರನ್ನು ' ಎಂದರು. ಕೊಟ್ಟೆ ಒಂದು ತೊಲೆ ಚ್ಯವನ ಪ್ರಾಶ. ಮುಂದೆ ಏನಾಯಿತು ಹೇಳಿರಿ ?

**ನಂದ:—** ಮತ್ತೆ ಕಾಲು ಚಿಗಿತವೇನು ?

" ಏ, ಎಲಾ ಕೇವಲಾ, ಕತ್ತೇ, ನೋಡು ನೋಡಲ್ಲಿ, ಬೆಕ್ಕು ಎಲ್ಲ ಛಾಗಲಾದ್ಯ ಘೃತವನ್ನು ತಿನ್ನುತ್ತಿದೆ. " ಎಂದನ್ನುತ್ತ ಕವಿರಾಜರು ಒಳಗೆ

ಓಡಿದರು. ತುಸು ಹೊತ್ತಿನಲ್ಲಿಯೆ ತಿರುಗಿ ಬಂದು, ಮತ್ತೆ ಮೊದಲಿನಂತೆಯೆ ಕುರ್ಚಿಯ ಮೇಲೆ ಕುಳಿತುಕೊಂಡರು. ಆಮೇಲೆ 'ಒಳ್ಳೇದು, ನಿಮ್ಮ ನಾಡಿಯನ್ನಷ್ಟು ನೋಡೋಣ. ಸರಿ, ಅದೇ; ನಾನು ಮೊದಲು ಕಾಯಾಸ ಕಟ್ಟಿದ್ದು. ಎಂದಾದರೊಮ್ಮೆ ನೀವು ಬಹಳ ಬೇನೆ ಬಿದ್ದಿದ್ದಿರೇನು?' ಎಂದರು.

**ನಂದ:**—ಬಹಳ ದಿನಗಳಾದವು. ಟಾಯಿಫಾಯಿಡ್ ಆಗಿತ್ತು ಒಮ್ಮೆ.

**ತಾರಿಣೀ:**— ಸರಿಯಾಗಿ ಕಂಡುಹಿಡಿದೆ. ಐದು ವರ್ಷಗಳ ಹಿಂದೆ ಅಲ್ಲವೆ?

**ನಂದ:**— ಸುಮಾರು ಏಳುವರೆ ವರ್ಷಗಳಾಗಿರಬಹುದು.

**ತಾರಿಣೀ:**— ಎರಡೂ ಒಂದೇ. ಐದು ಮೀಡೆ ಏಳುವರೆ. ಮುಂಜಾನೆ ಕಾರಿಕೆ ಬರುತ್ತದೆಯೇನು?

**ನಂದ:**— ಇಲ್ಲ.



**ಬರುತ್ತದೆ ಆದರೆ ನಿಮಗೆ ತಿಳಿಯುತ್ತಿರಲಿಕ್ಕಿಲ್ಲ**

**ತಾರಿಣೀ:**— ಬರುತ್ತದೆ. ಆದರೆ ನಿಮಗೆ ತಿಳಿಯುತ್ತಿರಲಿಕ್ಕಿಲ್ಲ. ನಿದ್ದೆ ಚೆನ್ನಾಗಿ ಹತ್ತುತ್ತದೆಯೆ?

**ನಂದ:**— ಚೆನ್ನಾಗಿ ಹತ್ತುವದಿಲ್ಲ.

**ತಾರಿಣೀ:**— ಹತ್ತುವದು ಹೇಗೆ? ಊರ್ಧ್ವವಾಗಿದೆಯಲ್ಲ! ಹಲ್ಲು ನೋಯುತ್ತದೆಯಲ್ಲವೆ?

**ನಂದ:**— ಇಲ್ಲ.

**ತಾರಿಣೀ:**— ನೋಯುತ್ತದೆ, ಆದರೆ ನಿಮಗೆ ತಿಳಿಯುವದಿಲ್ಲ. ಆಗಲಿ,ನೀವೇನೂ ಚಿಂತಿಸಬೇಡಿರಿ. ಎಲ್ಲವೂ ಗುಣವಾಗುವದು. ನಾನು ಔಷಧ ಕೊಡುತ್ತೇನೆ

ಕವಿರಾಜರು ಕಪಾಟಿನೊಳಗಿಂದ ಒಂದು ಬಾಟಲಿಯನ್ನು ತೆಗೆದರು ಮತ್ತು ಅದರೊಳಗಿನ ಗುಳಿಗೆಗಳಿಗೆ ಅನ್ನಹತ್ತಿದರು— "–ಏ ಹಾರಬೇಡ, ನಿಲ್ಲು–ನಿಲ್ಲು!" – ನನ್ನವೆಲ್ಲವೂ ಜೀವಂತ ಔಷಧಿಗಳು. ಕರೆದ ಕೂಡಲೆ ಕೇಳುತ್ತವೆ. ಮೂರುದಿನಗಳ ಔಷಧ ಕೊಡುತ್ತೇನೆ. ಮುಂಜಾನೆ ಒಂದು, ಸಂಜೆಗೆ ಒಂದು ಗುಳಿಗೆ ನುಂಗಬೇಕು. ಮೂರುದಿನಗಳ ನಂತರ ಮತ್ತೆ ಬರಬೇಕು. ತಿಳಿಯಿತೆ?

**ನಂದ:**— ತಿಳಿಯಿತು.

**ತಾರಿಣೀ:**— ನಿಮ್ಮ ತಲೆ. ಇನ್ನು ಅನುಪಾನ ಹೇಳುವದುಳಿದಿದೆ. ನಿಂಬೆಹಣ್ಣಿನ ರಸ ಹಾಗು ಜೇನುತುಪ್ಪದ ಕೂಡ ತೆಗೆದುಕೊಳ್ಳಬೇಕು. ಅನ್ನ ವರ್ಜ್ಯ. ಶಾವೆಗಡ್ಡೆ ಸೂರಣಗಡ್ಡೆಗಳನ್ನು ಕುಚ್ಚಿ ತಿನಬಹುದು. ಉಪ್ಪು ಮುಟ್ಟಬಾರದು. ಮಾಂಗುರ ಮೀನದ 'ಝೋಲ' ಸಕ್ಕರೆಯ ಕೂಡ ತಿನಬಹುದು. ಬಿಸಿ ನೀರು ಆರಿಸಿ ಕುಡಿಯಬೇಕು.

**ನಂದ:**— ಬೇನೆಯ ಹೆಸರೇನು?

**ತಾರಿಣೀ:**– ಬೇನೆಯ ಹೆಸರೋ? – ಉದರೀ ಎನ್ನುತ್ತಾರೆ. ಊರ್ಧ್ವ ಶ್ಲೇಷ್ಮಾ ಎಂದೂ ಅನ್ನಬಹುದು.

ನಂದದುಲಾಲರು ಕವಿರಾಜರ ಫೀ ಕೊಟ್ಟು ಉದಾಸಚಿತ್ತರಾಗಿ ಮನೆಗೆ ಹೊರಟುಬಂದರು.

* * * * *

**ನಿಧಿರಾಮ:**— ಏನು ರಾಯರೆ, ಆಯುರ್ವೇದದ ಹುಚ್ಚು ಬಿಟ್ಟಿತೋ ಇಲ್ಲವೋ?

**ಗೋಪೀ:**— ಇಲ್ಲರೀ, ಈ ನಿರುಪಯೋಗೀ ಉಪಚಾರಗಳಿಂದ ಏನೂ ಆಗದ ಮಾತು. ಎಲ್ಲಿಯಾದರೂ ಹೋಗಿ ಹವೆ ಬದಲು ಮಾಡುವದು ನೆಟ್ಟಗೆ.

**ಬಂಕು:**—ನಾನಂತೂ ಹೇಳುತ್ತೇನೆ, ನಂದದುಲಾಲರು ಮದುವೆ ಮಾಡಿಕೊಂಡು ಮನೆಗೆ ಹೆಂಡತಿಯನ್ನು ಕರೆತರುವದೇ ಒಳ್ಳೆಯದು. ಆಮೇಲೆ ಈ ಎಲ್ಲ ಗೊಂದಲವೂ ಇಲ್ಲದಂತಾಗುವದು. ಹೀಗೆ ಒಂಟಿಯಾಗಿರುವದೇ ಬೇನೆಯ ಕಾರಣ.

ನಂದದುಲಾಲರು ಚೂ ಚೂ ಎನ್ನುತ್ತ "ಆಹಾ, ಹೆಂಡತಿ! ಇವತ್ತು ಇದ್ದೇನೆ. ನಾಳೆ ಇರುವೆನೆಂಬ ಭರವಸೆ ಯಾರಿಗೆ? ಇಷ್ಟು ವಯಸ್ಸಾದ ಮೇಲೆ ಒಂದು ಚಿಕ್ಕ ಹೆಂಡತಿಯನ್ನು ಮಾಡಿಕೊಂಡು ಕೆಸರಿನಲ್ಲಿ ಸಿಕ್ಕು ಯಾರು ಒದ್ದಾಡಬೇಕು!" ಎಂದರು.

**ನಿಧಿರಾಮ:**— ರಾಯರೆ, ಸುಮ್ಮನೆ ನೀವೊಂದು ಮೋಟರನ್ನು ಕೊಂಡುಬಿಡಿರಿ. ನಾಲ್ಕು ದಿನ ಬಯಲು ಹವೆಯಲ್ಲಿ ತಿರುಗಿರಿ. ಆಮೇಲೆ ಅದು ಹೇಗೆ ನೀವು ನೆಟ್ಟಗಾಗುವದಿಲ್ಲವೆಂಬುದನ್ನು ನೋಡುತ್ತೇನೆ. ಸೆವ್ಹನ್ ಸೀಟರ ಹಂಬರ. ದೇವರ ಕೃಪೆಯಿಂದ ನಾವಂತೂ ಏಳು ಜನರಿದ್ದೇವೆ.

**ಷಷ್ಠೀ:**— ನೀವು ಹೇಳುವದಾಯಿತೆ? – ನನ್ನ ಮಾತು ಕೇಳುವದಾದರೆ ಮೋಟಾರು ಕೊಳ್ಳುವದೂ ಮದುವೆ ಮಾಡಿಕೊಳ್ಳುವದೂ ಒಂದೇ. ಮನೆಗೆ ತರುವದು ಹಗುರು; ಆದರೆ ಯೋಗ್ಯ ವ್ಯವಸ್ಥೆಯನ್ನಿಡಬೇಕಾದರೆ ಸಾಕುಸಾಕಾಗಿ ಹೋಗುತ್ತದೆ. ಇಂದು ಟಾಯರ ಹರಿದರೆ ನಾಳೆ ಹೆಂಡತಿಗೆ ಹೊಟ್ಟೆನೋವು ಎದ್ದಿತು. ನಾಡದು ಬ್ಯಾಟರೀ ಕೆಟ್ಟರೆ ಆಚೆ ನಾಡದು ಮಗನಿಗೆ ಚಳಿಜ್ವರ ಬಂದವು, ಹೀಗೆಯೆ. ನಂದಬಾಬೂ, ಇಂಥ ಹುಚ್ಚು ಕೆಲಸಕ್ಕೆ ಹೋಗಬೇಡಿರಿ. ತೊಳಲಾಡಬೇಕಾದೀತು. ಈ ಚಳಿಯ ಅಬ್ಬರದಲ್ಲಿ ಎಲ್ಲಿಯಾದರೂ ಹಾಸಿಗೆಯ ಮೇಲೆ ಎರಡೆರಡು ಕಂಬಳಿ ಹೊದೆದುಕೊಂಡು ಬೆಚ್ಚಗೆ ಮಲಗಿಕೊಳ್ಳುವದೇ ನೆಟ್ಟಗೆ. ಇಲ್ಲವಾದರೆ ರಾತ್ರಿಯೆಲ್ಲ ಹಾ–ಹೂ–ಎನ್ನುವದೇ!

**ನಿಧಿರಾಮ:**— ನಮ್ಮ ಷಷ್ಠೀಬಾಬುಗಳಂಥ ಲೆಕ್ಕ ಹಾಕುವವರು, ಯಾವುದಾದರೊಂದು ತುಂಬುಗೂದಲಿನ ಕರಡೆಯ ಮಗಳನ್ನು ಮದುವೆ

ಯಾಗಿದ್ದರೆ ನೆಟ್ಟಗಾಗುತ್ತಿತ್ತು; ಹಾಸಿಗೆ ಹೊದಿಕೆಗಳ ವೆಚ್ಚವಾದರೂ ತಪ್ಪುತ್ತಿತ್ತು.

**ಗೋಪೀ:**— ಸೇರಿಗೆ ಸವ್ವಾಸೇರು ಇದ್ದೇ ಇದೆ. ನಾಳೆ ಮುಂಜಾನೆ ಹಕೀಮಸಾಹೇಬರ ಕಡೆಗೆ ಹೋಗಿ ಬನ್ನಿರಿ. ಮುಂದಿನ ಮಾತು ಮುಂದೆ.

ನಂದದುಲಾಲರು ಇದಕ್ಕೆ ಒಪ್ಪಿಕೊಂಡರು.

* * * * *

ಹಾಜಿಕ್ - ಉಲ್ - ಮುಲ್ಕ ಬಿಸ್ ಲುಕಸೂನ ನೂರ ಉಲ್ಲಾ ಗಜಸ ಫರುಲ್ಲಾ ಅಲ್ ಹಕೀಮ ಯೂನಾನೀ, ಇವರು ಲೋಅರ ಚಿತಪೂರ ರೋಡಿನಲ್ಲಿ ಇಳಿದುಕೊಂಡಿದ್ದಾರೆ. ನಂದದುಲಾಲರು ಮೂರನೆಯ ಅಂತಸ್ತನ್ನು ಮುಟ್ಟಿದ ಕೂಡಲೆ ಒಬ್ಬ ಮನುಷ್ಯ ಅವರ ಕಡೆಗೆ ಬಂದನು. ಆತನೊಂದು ಲುಂಗಿಯನ್ನು ಸುತ್ತಿದ್ದನು. ಜಾಕೀಟು ತೊಟ್ಟಿದ್ದನು. ಹೆಗಲ ಮೇಲೆ ಒಂದು ದೊಡ್ಡ ಬಣ್ಣದ ವಸ್ತ್ರವನ್ನು ಹಾಕಿಕೊಂಡಿದ್ದನು " ಬರ್ರಿ ಬಾಬೂ ಸಾಹೇಬ! ನಾನು ಹಕೀಮ ಸಾಹೇಬರ ಮೀರ ಮುನಶೀ. ಬೇನೆ ಯೇನೆಂಬುದನ್ನು ಬರೆದುಕೊಡಿರಿ. ನಾನು ಹುಜೂರರಿಗೆ ಅರಿಕೆ ಮಾಡಿಕೊಳ್ಳುವೆನು " ಎಂದು ಅವನೆಂದ.

**ನಂದ:**— ಬೇನೆ ಏನೆಂಬುದನ್ನೇ ವಿಚಾರಿಸಬೇಕಾಗಿದೆ.

**ಮುನ್ಶೀ:**— ಇರಲಿ, ಆದರೂ ಏನಾದರೊಂದು ಹೇಳಿರಿ. ಜ್ವರ, ಕೆಮ್ಮು, ನೆಗಡಿ, ವಾತ, ಅತಿಸಾರ, ಮೂಲವ್ಯಾಧಿ, ಶೂಲಿ. .... ....

**ನಂದ:**— ಛೇ, ಇದಾವುದೂ ಇಲ್ಲ! ನನ್ನ ಮನಸ್ಸು ಗಾಬರಿಯಾಗಿದೆ.

**ಮುನ್ಶೀ:** —ಸರಿ, ಎಲ್ಲವನ್ನೂ ಹೇಳಿದ ಮೇಲೆ ತಿಳಿಯಬೇಕಷ್ಟೆ, ಮನಸ್ಸು ಗಾಬರಿಯಾಗುವದು ? ಮೊಹರು ತಂದಿರುವಿರಾ ?

**ನಂದ:**— ಮೊಹರೆ ?

**ಮುನ್ಶೀ:**— ಅಹುದು. ಹಕೀಮಸಾಹೇಬರು ಬೆಳ್ಳಿಯನ್ನು ಮುಟ್ಟುವದಿಲ್ಲ. ನಜರಾಣೆ ಎರಡು ಮೋಹರು. ಇಲ್ಲದಿದ್ದರೆ ನಾನು ಕೊಡುತ್ತೇನೆ. ಮೂವತ್ತೈದು ರೂಪಾಯಿ ಹಾಗೂ ಎರಡು ರೂಪಾಯಿ ವಟಾವ. ರೇಶ್ಮೆ ವಸ್ತ್ರ ಎರಡು ರೂಪಾಯಿಗಳದು. ದರಬಾರದಲ್ಲಿ ಹೋಗಿ

ಮೊದಲು ಹುಜೂರರಿಗೆ 'ಬಂದಗೀ ಜನಾಬ' ಎಂದೆನ್ನಬೇಕು. ಆಮೇಲೆ ವಸ್ತ್ರದ ಮೇಲೆ ಮೊಹರುಗಳನ್ನಿಟ್ಟು ಅವರಿಗೆ ನಜರಾಣೆ (ಕಾಣಿಕೆ) ಯನ್ನೊಪ್ಪಿಸಬೇಕು.

ಮುನ್ಶಿಯು ಸಂದದುಲಾಲರಿಗೆ ತಾಲೀಮು ಕೊಟ್ಟು ದರಬಾರಕ್ಕೆ ಕರೆದುಕೊಂಡು ಹೋದನು. ಒಂದು ದೊಡ್ಡ ಕೋಣೆಯಲ್ಲಿ ಜಮಖಾನೆಯನ್ನು ಹಾಸಿದ್ದಾರೆ. ಒಂದು ಬದಿಯಲ್ಲಿ ದಿಂಬಿಗೆ ಆತುಕೊಂಡು ಹಕೀಮಸಾಹೇಬರು ಹುಕ್ಕದ ಉದ್ದವಾದ ಸಲಿಕೆಯನ್ನು ಬಾಯಲ್ಲಿ ಇಟ್ಟುಕೊಂಡು ಧೂಮ್ರಪಾನ ಮಾಡುತ್ತಿದ್ದಾರೆ. ವಯಸ್ಸು ಸುಮಾರು ಐವತ್ತೈದು ಆಗಬಹುದು. ಉಂಗುರಗೂದಲು. ಮೀಸೆಗಳನ್ನು ಸಣ್ಣಾಗಿ ಕತ್ತರಿಸಿದ್ದಾರೆ. ಎದೆಯವರೆಗೆ ಜೋತಾಡುವ ಉದ್ದ ಗಡ್ಡದ ಮೊದಲಿನ ಭಾಗ ಬೆಳ್ಳಗಾಗಿ, ನಡುವಿನದು ಕೆಂಪಗಾಗಿ ತುದಿಯದು ಬದನೆಯ ಬಣ್ಣಾದ್ದಾಗಿದೆ. ಸಾಟೀನದ ಪಾಯಜಮಾ ಏರಿಸಿದ್ದಾರೆ. ಕಿನಖಾಬಿನ ಕೋಟು ತೊಟ್ಟಿದ್ದಾರೆ. ತಲೆಯ ಮೇಲೆ ಜರದ ಎತ್ತರವಾದ ಟೊಪ್ಪಿಗೆ ಅಥವಾ ತಾಜ ಶೋಭಿಸುತ್ತಿದೆ. ಎದುರಿಗೆ ಧೂಪದಾನದಲ್ಲಿ ರೂಮೀ ಮುಸ್ತಗೀ (ಲೋಭಾನ) ಉರಿಯುತ್ತಿದೆ. ಪಕ್ಕದಲ್ಲಿ ಪೀಕದಾನ, ಪಾನದಾನ, ಅತ್ತರದಾನ, ಇಡಲ್ಪಟ್ಟಿವೆ. ನಾಲ್ಕೈದು ಪಾರಿಷದರು ಮೊಣಕಾಲೂರಿ ಕುಳಿತುಕೊಂಡಿದ್ದಾರೆ; ಹಾಗು ಹಕೀಮಸಾಹೇಬರ ಪ್ರತಿಯೊಂದು ಮಾತಿಗೆ 'ಕ್ಯಾಬಾತ್ ಹೈ,' 'ಕಮಾಲ ಹೈ,' 'ಕರಾಮತ್ ಹೈ,' ಎಂದು ಅನ್ನುತ್ತಿದ್ದಾರೆ. ಮತ್ತೊಂದು ಮೂಲೆಯಲ್ಲಿ ಕುಳಿತ ಗಡ್ಡದವನೊಬ್ಬನು ಸತಾರ ಕೈಯಲ್ಲಿ ಹಿಡಿದುಕೊಂಡು ಸೊಟ್ಟ ಮೋರೆಯನ್ನು ಮಾಡುತ್ತ ಟಿಂಗ್ ಟಿಂಗ್ ಎಂದು ಬಾರಿಸುತ್ತಿದ್ದಾನೆ.

ಸಂದದುಲಾಲರು ಬಹು ಆದರದಿಂದ ಸಲಾಮು ಮಾಡಿ ಮೊಹರಗಳನ್ನು 'ನಜರ' ಮಾಡಿದರು. ಹಕೀಮಸಾಹೇಬರು ಮುಗುಳುನಗೆ ನಕ್ಕು ಅತ್ತರದಾನದೊಳಗಿಂದ ತುಸು ಅರಳೆಯನ್ನು ತೆಗೆದುಕೊಂಡು ಸಂದದುಲಾಲರ ಕಿವಿಯಲ್ಲಿಟ್ಟರು.

"ತಮ್ಮ ಬೇನೆಯೇನೆಂಬುದನ್ನು ನಿಮ್ಮ ಭಾಷೆಯಲ್ಲಿಯೇ ಹುಜೂರರಿಗೆ ಹೇಳಿರಿ ನಾನು ತರ್ಜುಮೆ ಮಾಡಿ ಅವರಿಗೆ ಹೇಳುತ್ತೇನೆ. ಹುಜೂರರು

ಉರ್ದುವಿನ ಹೊರತಾಗಿ ಬೇರೆ ಭಾಷೆಯಲ್ಲಿ ಮಾತಾಡುವದಿಲ್ಲ " ಎಂದು ಮುನ್ಷಿಯು ಹೇಳಿದನು.

ನಂದದುಲಾಲರು ಹೇಳಿದ್ದನ್ನು ಮುನ್ಷಿಯು ಭಾಷಾಂತರಿಸಿ ಹಕೀಮ ಸಾಹೇಬರಿಗೆ ಹೇಳಿದ. ಹಕೀಮ ಸಾಹೇಬರು ಖುಷಭಸ್ವರದಲ್ಲಿ "ತುಮ್ಹಾರಾ ಶಿರ್ ದಿಖಾವೋ" (ನಿಮ್ಮ ತಲೆ ತೋರಿಸಿರಿ) ಎಂದರು.

ನಂದದುಲಾಲರ ಎದೆ ಹಾರಹತ್ತಿತು. ಗಾಬರಿಯಾದರು. ಆಗ ಮುನ್ಷಿಯು "ಗಾಬರಿಯಾಗುವಿರೇಕೆ ರಾಯರೆ? ಜನಾಬರಿಕೆ ನಿಮ್ಮ ತಲೆ ತೋರಿಸಿರಿ" ಎಂದು ಹೇಳಿದ.

ನಂದದುಲಾಲರ ತಲೆಯನ್ನು ತಿಕ್ಕಿನೋಡಿ ಹಕೀಮಸಾಹೇಬರು "ಹಡ್ಡೀ ಪಿಲ್ ಪಿಲಾಯಾ ಗಯಾ ಹೈ" ಎಂದರು.



" ಹಡ್ಡೀ ಪಿಲ್ ಪಿಲಾಯಾ ಗಯಾ ಹೈ "

**ಮುನ್ಷೀ:— ತಿಳಿಯಿತೆ ರಾಯರೆ? ತಲೆ ಎಲುವು ತೀರಾ ಅಳ್ಳಾ-ಗಿದೆಯಂತೆ.**

ಹಕೀಮಸಾಹೇಬರು ತಮ್ಮ ಮೂರು ಬಣ್ಣದ ಗಡ್ಡದ ಮೇಲೆ ಕೈ ಆಡಿಸುತ್ತ 'ಸುವರ್ಣ ಸಂಖರ್' ಎಂದು ಒದರಿದರು.

ಒಬ್ಬ ಮನುಷ್ಯನು ಕೆಂಪು ಬಣ್ಣದ ಪುಡಿಯಂತಹದೊಂದನ್ನು ತಂದು ನಂದದುಲಾಲರ ಕಣ್ಣುರೆಪ್ಪೆಗಳ ಮೇಲೆ ಹಚ್ಚಿದನು. ಮುನ್ನಿಯು "ಇದರಿಂದ ಕಣ್ಣಿಗೆ ತಂಪಾಗುವದು. ನಿದ್ದೆ ಬರುವದು." ಎಂದು ತಿಳಿಸಿದನು.

ಹಕೀಮಸಾಹೇಬರು ಮತ್ತೆ ಕೂಗಿದರು. 'ರೋಗನ್ ಬಬ್ಬರ'

ಮುನ್ನಿ ಕೂಗಿದ. "ಏ ಹಜಾಮ, ಕತ್ತರಿ ತಗೊಂಡು ಬಾ."

ನಂದದುಲಾಲರು "ಏ-ಏ! ಇದೇನು! ಏನ್-ಏನು ಮಾಡುತ್ತೀರಿ!" ಎಂದು ಅನ್ನು ಅನ್ನುವಷ್ಟರಲ್ಲಿಯೆ ಹಜಾಮನು ಅವರ ಬ್ರಹ್ಮತಾಲುವಿನ ಮೇಲೆ ಸರಿಯಾಗಿ ಎರಡು ಇಂಚಿನ ಚೌಕೋನದಷ್ಟು ಸ್ಥಳವನ್ನು ಕತ್ತರಿಬಿಟ್ಟನು! ಮತ್ತೊಬ್ಬನು ಒಂದು ನಾರುತ್ತಿರುವ ಒಂದು ಮಲಮನ್ನು ಹಚ್ಚಿದನು. ಮುನ್ನಿಯು "ಬಾಬೂಸಾಹೇಬ ಬೆದರಬೇಡಿರಿ, ಇದು ಪಟ್ಟೆ ಹುಲಿಯ ತಲೆಯ ತುಪ್ಪ. ಬಹಳ ಬೆಲೆಯುಳ್ಳದ್ದು. ತಲೆಯೊಳು ವು ಗಟ್ಟಿಯಾಗುವದು" ಎಂದು ಆಶ್ವಾಸನ ಕೊಟ್ಟ.

ನಂದದುಲಾಲರು ಎಷ್ಟೋ ಹೊತ್ತು ಹೌಹಾರಿ ಕುಳಿತುಕೊಂಡಿದ್ದರು. ಆಮೇಲೆ ಎಚ್ಚರ ಬಂದಂತಾಗಲು ಅಲ್ಲಿಂದ ಕೂಡಲೆ ಕಾಲ್ತೆಗೆದರು. ಮುನ್ನಿಯು ಅವರ ಬೆನ್ನುಹತ್ತಿ 'ನನ್ನ ಬಕ್ಷೀಸ' ಎಂದು ಕೂಗಹತ್ತಿದ. ನಂದದುಲಾಲರು ಒಂದು ರೂಪಾಯಿ ಚೆಲ್ಲಿ ತಟ್ಟನೆ ಕೆಳಗಿಳಿದರು. ಮತ್ತು ಎದುರಿಗೇ ಕಂಡ ಗಾಡಿಯಲ್ಲಿ ಜಿಗಿದು, ಮೋರೆ ಮುಚ್ಚಿಕೊಂಡು ಕುಳಿತು ಗಾಡಿಕಾರನಿಗೆ ನೆಟ್ಟಗೆ ಮನೆಗೆ ಹೊಡೆಯಲು ಹೇಳಿದರು.

ಸಂಜೆಯ ಮುಂದೆ ಮಿತ್ರರೆಲ್ಲ ಬಂದು ನೋಡಲಾಗಿ ಮನೆಯ ಬಾಗಿಲು ಮುಚ್ಚಿತ್ತು. ಆಳು "ಇವತ್ತು ರಾಯರ ಪ್ರಕೃತಿ ಬಹಳ ಕೆಟ್ಟಿದೆ. ಭೆಟ್ಟಿಯಾಗುವಂತಿಲ್ಲ," ಎಂದು ಹೇಳಿದ. ಎಲ್ಲರೂ ಅತ್ಯಂತ ಉದಾಸೀನರಾಗಿ ತಂತಮ್ಮ ಮನೆಗೆ ತಿರುಗಿದರು.

* * * * *

ರಾತ್ರಿಯೆಲ್ಲ ಹಾಸಿಗೆಯ ಮೇಲೆ ಬಿದ್ದುಕೊಂಡು ಹೊರಳಾಡುತ್ತಿದ್ದರು. ಇನ್ನೂ ಕತ್ತಲೆಯಿರುವಾಗ ನಾಲ್ಕು ಗಂಟೆಗೇ ಎದ್ದು ನಂದದುಲಾಲರು

ಭೀಷ್ಮಪ್ರತಿಜ್ಞೆಯನ್ನು ಮಾಡಿದರು; ಇನ್ನು ಗೆಳೆಯರ ಅಭಿಪ್ರಾಯವನ್ನು ಕೇಳತಕ್ಕದ್ದಲ್ಲ, ತಮ್ಮ ಬುದ್ಧಿಗೆ ತೋಚಿದಂತೆ ಚಿಕಿತ್ಸೆ ನಡೆಯಿಸಬೇಕು ಎಂದು.

ಮುಂಜಾನೆ ಎಂಟು ಗಂಟೆಗೆ ನಂದದುಲಾಲರು ಮನೆಯಿಂದ ಹೊರಟರು. ಹಾಗು ಟ್ಯಾಕ್ಸಿಯಲ್ಲಿ ‡ ಕುಳಿತುಕೊಂಡು ಡ್ರಾಯಿವ್ಹರನಿಗೆ ನೇರವಾಗಿ ಸಾಗಲು ಹೇಳಿದರು. ಇಂದು ಮನಸ್ಸಿನಲ್ಲಿ ನಿಶ್ಚಯಿಸಿ ಬಿಟ್ಟಿದ್ದರು-ಮೋಟರಿನಲ್ಲಿ ಒಂದು ರೂಪಾಯಿ ಏರಿದ ಕೂಡಲೆ ಟ್ಯಾಕ್ಸಿಯಿಂದ ಇಳಿಯತಕ್ಕದ್ದು. ಬದಿಯಲ್ಲಿ ಯಾವುದೇ ಡಾಕ್ಟರ ಅಥವಾ ವೈದ್ಯರು ಸಿಕ್ಕರೂ ಅವರ ಕಡೆಯಿಂದ ಔಷಧ ತೆಗೆದುಕೊಳ್ಳತಕ್ಕದ್ದು– ಆತನು ಅ್ಯಲೋಪಥ'ನೇ ಇರಲಿ ಅಥವಾ ಹೋಮಿಯೋಪ್ಯಾಥ್‌ನಿರಲಿ, ವೈದ್ಯರಾಜನಿರಲಿ ಅಥವಾ ಕವಿರಾಜನಿರಲಿ, ಮಾಂತ್ರಿಕನಿರಲಿ ಅಥವಾ ತಾಂತ್ರಿಕನಿರಲಿ, ಹಕೀಮನಿರಲಿ, ಮದ್ರಾಸೀ ಇರಲಿ ಅಥವಾ ಪಂಜಾಬೀ ಇರಲಿ,– ಬೇಕಾದವನಿರಲಿ !

ಬಊ ಬಾಜಾರದ * ವರೆಗೆ ಹೋಗಿ ಟ್ಯಾಕ್ಸಿಯು ನಿಂತಿತು. ಬೀದಿಯಲ್ಲಿ ಹೊಕ್ಕಕೂಡಲೆ ಸಾಯಿನ್‌ಬೋರ್ಡೊಂದು ಕಣ್ಣಿಗೆ ಬಿತ್ತು. ಅದರ ಮೇಲೆ ಬರೆದಿತ್ತು, " ಡಾಕ್ಟರ ಮಿಸ್, ಪಿ. ಮಲ್ಲಿಕ ". ನಂದದುಲಾಲರ ಲಕ್ಷ್ಯ ಹೋಗಲಿಲ್ಲ ಆ 'ಮಿಸ' ಶಬ್ದದ ಮೇಲೆ. ಇಲ್ಲವಾದರೆ ಹಿಂದೆಮುಂದೆ ನೋಡುತ್ತಿದ್ದರೇನೋ ! ನೆಟ್ಟಗೆ ಒಳಗೆ ಹೋದರು. ಮತ್ತು ಬಾಗಿಲಲ್ಲಿ ತೂಗಾಡುತ್ತಿರುವ ಪರದೆಯನ್ನು ಸರಿಸಿ ಕೋಣೆಯೊಳಗೆ ಹೋದರು.

ಮಿಸ್ ವಿಪುಲಾ ಮಲ್ಲಿಕಳು ಹೊರಗೆ ಹೋಗುವ ಸಿದ್ಧತೆಯಲ್ಲಿ ಹೆಗಲ ಮೇಲಿನ ಸೇಫ್ಟೀ ಪಿನ್ನನ್ನು ಸರಿಪಡಿಸುತ್ತಿದ್ದಳು. ನಂದದುಲಾಲರನ್ನು ನೋಡಿ ಅವಳು ಮೆಲುದನಿಯಲ್ಲಿ " ತಮಗೆ ಏನು ಬೇಕಾಗಿದೆ ? " ಎಂದು ಕೇಳಿದಳು.

ನಂದದುಲಾಲರು ಮೊದಲು ಬಹಳ ನಾಚಿದರು. ಆಮೇಲೆ ದೈವದ ಮೇಲೆ ಭಾರಹಾಕಿ ಮನಸ್ಸಿನಲ್ಲಿಯೇ ಯೋಚಿಸಿದರು. " ಆಗಲಿ, ಲೇಡೀ ಡಾಕ್ಟರರ ಅಭಿಪ್ರಾಯವನ್ನೇ ಕೇಳೋಣ " ಎಂದರು. " ಬಹಳ ಬೇಸತ್ತು ತಮ್ಮ ಕಡೆಗೆ ಬಂದಿರುವೆನು "

---

* ಬಊ ಇದರ ಶಬ್ದಾರ್ಥ ಹೆಂಡತಿ. ‡ ಬಾಡಿಗೆಯ ಮೋಟಾರಕಾರು

ಮಿಸ್ **ಮಲ್ಲಿಕ**:– ಬೇನೆ ಬರಹತ್ತಿರುವದ್ವೋ ?

**ನಂದ**:— ಬೇನೆಯೇನೂ ಕಾಣುವದಿಲ್ಲ.

**ಮಿಸ್**:— ಫರ್ಸ್ಟ್ ಕನ್‌ಫಾಯಿನ್‌ಮೆಂಟ ಏನು ?

**ನಂದ**:— ಏನಂದಿರಿ ?

**ಮಿಸ್**:— ಮೊದಲನೆಯ ಗರ್ಭವೇನು ?

ನಂದದುಲಾಲರು ಅಪ್ರತಿಭರಾಗಿ, " ನಾನೇ ನನ್ನ ಔಷಧೋಪಚಾರಕ್ಕಾಗಿ ಬಂದಿದ್ದೇನೆ " ಎಂದರು.

ಮಿಸ್ ಮಲ್ಲಿಕಳು ಆಶ್ಚರ್ಯದಿಂದ " ನಿಮಗಾಗಿಯೆ ? ನಿಮಗೇನು ಬೇನೆ ? " ಎಂದು ಕೇಳಿದಳು.

ಎಲ್ಲ ಇತಿಹಾಸವನ್ನು ಕೇಳಿದ ಬಳಿಕ ಮಿಸ್ ಮಲ್ಲಿಕಳು ಅವರ ಸ್ವಾಸ್ಥ್ಯದ ವಿಷಯವಾಗಿ ಮೂರುನಾಲ್ಕು ಪ್ರಶ್ನೆ ಮಾಡಿದಳು. ಆಮೇಲೆ " ನಾನು ತಮ್ಮ ಹೆಸರನ್ನು ಕೇಳಬಹುದೊ? " ಎಂದಳು.

**ನಂದ**:— ಶ್ರೀ ನಂದದುಲಾಲ ಮಿತ್ರ.

**ಮಿಸ್**:— ಮನೆಯಲ್ಲಿ ಮತ್ತೆ ಯಾರು ಯಾರು ಇದ್ದಾರೆ ?

" ನನ್ನ ಹೆಂಡತಿ ತೀರಿ ಬಹಳ ದಿನಗಳಾದವು. ಮನೆಯಲ್ಲಿ ಮುದಿಕೆ ಅತ್ತಿಗೆಯ ಹೊರತಾಗಿ ಬೇರೆ ಯಾರೂ ಇಲ್ಲ.

" ಕೆಲಸ ಏನು ಮಾಡುತ್ತೀರಿ ? "

" ಕೆಲಸವನ್ನೇನೂ ಮಾಡುವದಿಲ್ಲ; ಜಮೀನದಾರನಿದ್ದೇನೆ "

" ಮೋಟರಕಾರ್ ಇದೆಯೋ ? "

" ಇಲ್ಲ; ಆದರೆ ಕೊಳ್ಳುವ ವಿಚಾರವಿದೆ. "

ಮಿಸ್ ಮಲ್ಲಿಕಳು ಮತ್ತೆ ಏನೇನೋ ಪ್ರಶ್ನೆ ಕೇಳಿದಳು. ಆಮೇಲೆ ಗಲ್ಲದ ಮೇಲೆ ಕೈ ಇಟ್ಟುಕೊಂಡು ಬಹಳ ಹೊತ್ತು ಏನು ಯೋಚಿಸುತ್ತಿದ್ದಳೊ ಏನೋ ! ಆಮೇಲೆ ಸಾವಕಾಶವಾಗಿ ಎಡಕ್ಕೂ ಬಲಕ್ಕೂ ಗೋಣು ಅಲ್ಲಾಡಿಸಿದಳು.

ನಂದದುಲಾಲರು ವ್ಯಾಕುಲರಾಗಿ ಕೇಳಿದರು. " ದಯಮಾಡಿ ನನಗೆ ಹೇಳಿರಷ್ಟು; ನಿಜವಾಗಿ ನನಗೆ ಏನಾಗಿದೆ ? ಟ್ಯುಮರೋ ಅಥವಾ ಗುಲ್ಮವೋ? ಉದರಿಯೋ ಅಸ್ಥಿಜ್ವರವೋ ? ಏನು ಹಾಯಿಡ್ರೋಫೋಬಿಯಾನೋ ? "

ಮಿಸ್ ವಿಪುಲಾ ಮಲ್ಲಿಕಳು ನಕ್ಕು ಉತ್ತರಕೊಟ್ಟಳು. "ಅದೇಕೆ ನೀವು ಇಷ್ಟು ಗಾಬರಿಯಾಗುವಿರಿ? ನಿಮಗೆ ಯಾವ ರೋಗವೂ ಇಲ್ಲ. ನಿಮಗಾಗಿ ಒಬ್ಬ ಅಭಿಭಾವಿಕೆಯ ಅವಶ್ಯಕತೆ ಮಾತ್ರ ಇದೆ."

ನಂದದುಲಾಲರು ಇನ್ನಿಷ್ಟು ದೈನ್ಯದ ಸ್ವರದಲ್ಲಿ "ಹಾಗಾದರೆ ನನಗೆ ಹುಚ್ಚುಗಿಚ್ಚು ಹಿಡಿದಿದೆಯೇನು?" ಎಂದರು.

ಮಿಸ್ ಮಲ್ಲಿಕಳು ಬಾಯಮೇಲೆ ಕರವಸ್ತ್ರವನ್ನಿಟ್ಟುಕೊಂಡು ಕಿಲ ಕಿಲನೆ ನಗಹತ್ತಿದಳು. ಅವಳೆಂದಳು, "ಓ ಡೀಯರ ನೋ. ಹುಚ್ಚರಾಗುವಿರೇಕೆ? ನಾನಂದದ್ದೇನಂದರೆ–ನಿಮ್ಮ ಆದರಾತಿಥ್ಯಕ್ಕಾಗಿ ಮನೆಯಲ್ಲಿ ಒಬ್ಬ ಯೋಗ್ಯ ವ್ಯಕ್ತಿಯ ಆವಶ್ಯಕತೆಯಿದೆ."

**ನಂದ:**—ಅದೇಕೆ? ಮನೆಯಲ್ಲಿ ಅತ್ತಿಗೆಯಿದ್ದಾಳಲ್ಲ?



ದಿ ಆಯಿಡಿಯಾ

ಮಿಸ್ ವಿಪುಲಾ ಮತ್ತೆ ನಕ್ಕು ನುಡಿದಳು. "ದಿ ಆಯಿಡಿಯಾ! ಅತ್ತಿಗೆಯ ಕೆಲಸವಿಲ್ಲ. ಇರಲಿ. ನಿಮಗೊಂದು ಔಷಧ ಕೊಡುತ್ತೇನೆ. ಕುಡಿದು ನೋಡಿರಿ. ಬಹಳ ಸವಿಯಾಗಿದೆ. ಏಲಕ್ಕಿಯ ವಾಸನೆಯಿದೆ. ಇನ್ನೊಂದು ವಾರದ ನಂತರ ಮತ್ತೆ ಬರ್ರಿ."

ನಂದದುಲಾಲರು ಏಳು ದಿನಗಳ ನಂತರ ಮತ್ತೆ ವಿಪುಲಾ ಮಲ್ಲಿಕಳ ಕಡೆಗೆ ಹೋದರು. ಎರಡು ದಿನಗಳನಂತರ ಮತ್ತೆ ಹೋದರು. ಆಮೇಲೆ ಪ್ರತಿದಿವಸ.

ಅನಂತರ ಒಂದುದಿನ ನಂದದುಲಾಲರು ತಮ್ಮ ಅತ್ತಿಗೆಯನ್ನು ಕಾಶಿಗೆ ಕಳುಹಿಸಿಬಿಟ್ಟರು. ಪೇಟೆಯಿಂದ ಅನೇಕ ಸಾಮಾನುಗಳನ್ನು ತಂದರು. ಸಕ್ಕರೆ, ತುಪ್ಪ, ಸಜ್ಜಿಗೆ, ಮೊಸರು, ಸಂದೇಶ, ರಸಗುಲ್ಲಾ, ಮೀನ ಇ. ಇ. ಮಿತ್ರರಿಗೆ ಮನಸದಣಿ ತಿನಿಸಿದರು. ಆ ದಿನ ನಂದದುಲಾಲ ಬಾಬುಗಳು ಜರದ ಅಂಚಿನ ತೆಳುವಾದ ಧೋತರವನ್ನುಟ್ಟರು. ಅದರ ಮೇಲೆ ರೇಶ್ಮೆಯ ಅಂಗಿಯನ್ನು ತೊಟ್ಟರು. ಮತ್ತು ನಾಚುನಾಚುತ್ತ ಎಲ್ಲರನ್ನೂ ಸಂತುಷ್ಟ ಪಡಿಸಿದರು.



ವಿಪುಲಾ–ನಂದ

ಮಿಸೆಸ್ ವಿಪುಲಾ ಮಿತ್ರಳು ಈಗ ಪತಿಯ ಹೊರತಾಗಿ ಮತ್ತೆ ಯಾವ ರೋಗಿಯ ಚಿಕಿತ್ಸೆಯನ್ನೂ ಮಾಡುವದಿಲ್ಲ. ನಂದದುಲಾಲರೀಗ ಒಳ್ಳೇ ಹೃಷ್ಟಪುಷ್ಟರಾಗಿದ್ದಾರೆ. ಮೋಟರಕಾರ್ ಕೊಳ್ಳಲಾಗಿದೆ. ದುಃಖ ಏಷ್ಟು, ಸಂಜೆಯ ಮುಂದೆ ನೆರೆಯುತ್ತಿದ್ದ ಮಿತ್ರಸಮಾಜದ ಸಭೆಯು ಈಗ ಬಯಲಾಗಿದೆ. ✓

---



ಶಿವೂ ಭಟ್ಟಾಚಾರ್ಯನಿರುವದು ಪೆನಟಿ ಗ್ರಾಮದಲ್ಲಿ. ಒಬ್ಬ ಹೆಂಡತಿ, ಮೂರು ಆಕಳು. ಒಂದು ಹಂಚಿನಮನೆ, ಇಪ್ಪತ್ತಾರು ಯಜಮಾನರ ಮನೆ, ತುಸು 'ಇನಾಮು ಜಮೀನು,' ಬೇರೆ ಹೊಲದ 'ಲಾವಣಿ' ಅಷ್ಟು – ಆಯಿತು, ಇಷ್ಟರಿಂದ ಆತನ ಪ್ರಪಂಚವು ಸುಖರೂಪವಾಗಿ ಸಾಗುತ್ತದೆ. ಶಿವೂನಿಗೆ ಮೂವತ್ತೆರಡು ವರ್ಷ. ಸಣ್ಣವನಿದ್ದಾಗ ಶಾಲೆಯಲ್ಲಿ ಅಲ್ಪಸ್ವಲ್ಪ ಓದುಬರೆಹವನ್ನು ಕಲಿತಿದ್ದನು. ಆ ಮೇಲೆ ತಂದೆಯಿಂದ

ಒಂದಿಷ್ಟು ಸಂಸ್ಕೃತವನ್ನಾದರೂ ಕಲಿತಿದ್ದನು. ಇಷ್ಟು ವಿದ್ಯೆಯು ತನ್ನ ಮನೆತನ ಸಾಗಲಿಕ್ಕೆ ಹಾಗು ಯಜಮಾನರ ಪೌರೋಹಿತ್ಯ ನಡೆಸಲಿಕ್ಕೆ ಯಥೇಷ್ಟವಾಗಿದೆ. ಆದರೆ ಆತನ ಮನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ. ಆತನ ಹೆಂಡತಿಯಾದ ನೃತ್ಯಕಾಲಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿರ ಬಹುದು. ತುಂಬಿದ ಚೆಲುವಾದ ಮೊಗ. ಸಿಡುಕಿನ ಸ್ವಭಾವ. ಪತಿಯ ಸೇವಾ ಸತ್ಕಾರದಲ್ಲಿ ಅವಳು ಏನೂ ಉಳಿಯಗೊಡುವದಿಲ್ಲ. ಆದರೆ ಆ ಸೇವೆಯಲ್ಲಿ ಎಷ್ಟೂ ರಸವು ಶಿವೂನಿಗೆ ಸಿಗುತ್ತಿರಲಿಲ್ಲ. ಸಣ್ಣಪುಟ್ಟ ಮಾತಿಗಾಗಿ ಗಂಡ ಹೆಂಡಿರ ನಡುವೆ ಬಲು ಜಗಳವೇಳುತ್ತಿತ್ತು. ಐದು ಮಿನಿಟು ಕೂಗಾಡಿದ ನಂತರ ಶಿವೂ ತೇಲಗಣ್ಣು ಮೇಲಗಣ್ಣು ಹಾಕುತ್ತಿದ್ದ. ಆದರೆ ನೃತ್ಯ ಕಾಲಿಯ ನಾಲಿಗೆಯು ಒಮ್ಮೆ ಓಡಹತ್ತಿತೆಂದರೆ ಎಂದಾದರೂ ನಿಂತೀತೆ! ಪ್ರತಿ ಯೊಂದು ಸಾರೆ ಶಿವೂನೇ ಸೋಲುತ್ತಿದ್ದನು. ಹೆಂಡತಿಯನ್ನು ತನ್ನ ಅಳವಿ ನಲ್ಲಿಟ್ಟುಕೊಳ್ಳಲಾರದ್ದಕ್ಕೆ ಓಣಿಯ ಜನರೆಲ್ಲ ಶಿವೂನಿಗೆ ಪುಕ್ಕ, ಹೇಡಿ, ಪೆದ್ದ ಕ್ಕೈಲಾಗದವ ಎಂದು ಸಿಕ್ಕ ಸಿಕ್ಕ ಹಾಗೆ ಕರೆಯುತ್ತಿದ್ದರು. ಮನೆಯ ಒಳಗೂ ಹೊರಗೂ ಹೀಗೆ ಬಿಟ್ಟೂಬಿಡದೆ ಅಪಮಾನಿತನಾಗುತ್ತಿದ್ದ ಮೂಲಕ ಶಿವೂನ ಅಶಾಂತಿಗೆ ಅಳತೆಯಿರಲಿಲ್ಲ.

ಒಂದು ದಿನ, ತನ್ನ ಪತಿಯಲ್ಲಿ ಚರಿತ್ರದೋಷವು ಹೊಕ್ಕಿದೆಯೆಂಬ ಸುದ್ದಿಯು ನೃತ್ಯಕಾಲಿಯ ಕಿವಿಗೆ ಬಿತ್ತು. ಆ ದಿನದ ಕತೆ ಎಂದರೆ ಮುಗಿ ಯಿತು – ನೃತ್ಯಕಾಲಿಯು ಕಸಬರಿಗೆಯನ್ನು ತೆಗೆದುಕೊಂಡು ಶಿವೂನ ಬೆನ್ನನ್ನು ಝಾಡಿಸಿಬಿಟ್ಟಳು. ಪಾಪ ಶಿವೂ ಸಿಟ್ಟಿನಿಂದಲೂ ಕ್ಷೋಭದಿಂದಲೂ ಉಕ್ಕಿಬರುವ ಕಣ್ಣೀರನ್ನು ಹೇಗೆಯೊ ತಡೆದು, ಅಂದಿನ ಇರುಳನ್ನು ಕಳೆದ. ಮರುದಿನ ನಸುಕಿನಲ್ಲಿ ಎದ್ದವನೆ ಆರು ಗಂಟೆಯ ಗಾಡಿಯಿಂದ ಕಲಕತ್ತೆಗೆ ಹೊರಟುಬಿಟ್ಟ.

ಸ್ಯಾಲದಹ ಸ್ಟೇಶನ್ನಿನಿಂದ ನೆಟ್ಟಗೆ ಕಾಲೀಘಾಟಕ್ಕೆ ಹೋಗಿ ಕಾಲೀ ಮಾತೆಗೆ ಅನೇಕ ವಿಧ ಉಪಚಾರದಿಂದ ಐದು ರೂಪಾಯಿಗಳ ಪೂಜೆ ಮಾಡಿಸಿ ಬೇಡಿಕೊಂಡ. " ಹೇ ಕಾಲೀಮಾತೆಯೆ, ಆ ಖೋಡಿಗೆ ಏನಾದರೂ ಬೇನೆ ಗೀನೆ ತಂದು ಎಳೆಯಬಾರದೆ! ನಾನು ನಿನಗೆ ಎಂಟುಕಾಲಿನ ಬೇಟೆಯನ್ನು ಕೊಡುವೆನು. ನನಗೆ ತೀರ ತಡೆಯದಾಗಿದೆ. ನನ್ನ ಪ್ರಪಂಚವು ಸುಸೂತ್ರ

ವಾಗಿ ಸಾಗುವಂತೆ ಏನಾದರೂ ದಾರಿಯನ್ನು ತೋರಿಸವ್ವ. ಆಕೆಗೆ ಮಕ್ಕಳು ಮರಿ ಕೂಡ ಆಗಿಲ್ಲ. ಇದನ್ನಾದರೂ ನೀನು ನೋಡಬೇಕಲ್ಲವೆ! ತಾಯೆ, ಅನುಗ್ರಹಮಾಡು; ಪಾದಕ್ಕೆ ಬಿದ್ದಿರುವೆ.''

ಗುಡಿಯಿಂದ ಬಂದು ಶಿವೂ ಪೇಟೆಯಲ್ಲಿ ಮೊಸರೊಡೆ ಕೊಂಡು ಹೊಟ್ಟೆತುಂಬ ತಿಂದ. ಮೇಲೆ ಸೇರು ಜಿಲೇಬಿ ಕೆಚ್ಚಿದ. ಅನಂತರ ಇಡೀ ದಿನ ಪ್ರಾಣಿಸಂಗ್ರಹಾಲಯ, ಮ್ಯೂಝಿಯಮ್, ಹಾಗ್ ಸಾಹೇಬನ ಪೇಟೆ, ಹಾಯಕೋರ್ಟ ಮೊದಲಾದವುಗಳನ್ನು ನೋಡುವದರಲ್ಲಿ ಹೊತ್ತುಗಳೆದ. ಸಂಜೆಯ ಮುಂದೆ ಬೀಡನ್ ಸ್ಟ್ರೀಟಿನಲ್ಲಿರುವ ಹಾಟೆಲ್–ಡಿ–ಅಥೋರ್ ಡಾಕ್ಸಿಗೆ‡ ಹೋಗಿ ಒಂದು ಪ್ಲೇಟ 'ಕರೀ', ಎರಡು ಪ್ಲೇಟ 'ರೋಸ್ಟಫಾವ್ಲ' ಹಾಗು ಎಂಟು 'ಡೆವಿಲ್'* ತಿಂದು ಸೇರು ಕುಡಿದ. ಆಮೇಲೆ ರಾತ್ರಿಯೆಲ್ಲ ಸಿನೇಮಾ ನೋಡಿ ಮುಂಜಾನೆಯ ಗಾಡಿಯಿಂದ ಮರಳಿ ತನ್ನ ಊರಿಗೆ ಬಂದ.

ಆದರೆ ಕಾಲೀಮಾತೆಯು ಎಲ್ಲವನ್ನೂ ವಿಪರೀತವಾಗಿ ತಿಳಿದಳು. ಮನೆಗೆ ಬಂದ ಕೂಡಲೆ ಶಿವೂನಿಗೆ ಹೊಂಕಡೆಗೆ ಹತ್ತಿತು. ಡಾಕ್ಟರರು ಬಂದರು, ವೈದ್ಯರು ಬಂದರು, ಆದರೆ ಏನೂ ಫಲವಾಗಲಿಲ್ಲ. ಎಂಟು ತಾಸು ರೋಗಪೀಡೆಯನ್ನು ಸಹಿಸಿ, ಹೆಂಡತಿಯನ್ನು ಕಾಲು ಬೀಳಿಸಿ, ಅವಳ ಕಣ್ಣೀರು ಹರಿಸಿ ಶಿವೂ ಇಹಲೋಕದಿಂದ ಪ್ರಸ್ಥಾನ ಮಾಡಿದ.

* * * * *

ಊರಲ್ಲೀಗ ಶಿವೂನಿಗೆ ಮನವಿಲ್ಲದಾಯಿತು. ಅದೇ ರಾತ್ರಿ ಗಂಗೆಯನ್ನು ದಾಟಿದ. ಪೆನೆಟಿಯ ಆಚೆಗೆ ಕೋನ್ನಗರವಿದೆ. ಅಲ್ಲಿಂದ ಅವನು ಉತ್ತರದ ಕಡೆಗೆ ಕ್ರಮವಾಗಿ ರಿಸಡಾ, ಶ್ರೀರಾಮಪುರ, ವೈದ್ಯಬಾಟಿ, ಚಾಂಪದಾನಿಯ ಚಟಕಲ (ಜೂಟಮಿಲ್)ಗಳ ಮೇಲಿಂದ ಹಾಯ್ದು – ಇನ್ನೂ ಮುಂದೆ, ಎರಡುಮೂರು ಹರದಾರಿ ದಾಟಿ – ಒಂದು ಅಡವಿಗೆ ಬಂದು ಮುಟ್ಟಿದ. ಇಲ್ಲಿಯೆ ದೆವ್ವಗಳ ಬೀಡು ಇದೆ. ಅಡವಿಯು ಬಹಳ ದೂರದ ವರೆಗೆ ಹಬ್ಬಿದೆ. ಮನುಷ್ಯಸಂಚಾರವು ಇಲ್ಲವೇ ಇಲ್ಲ. ನೋಡಿದರೆ ಹೆದರಿಕೆ ಬರುವಂತಿದೆ. ಯಾವುದೋ ಕಾಲದಲ್ಲಿ ಇಲ್ಲಿ ಒಂದು ಇಟ್ಟಂಗಿಯ ಆವಿಗೆಯಿದ್ದಿತು. ಆದ್ದರಿಂದ ನೆಲವು ಸಮತಲವಾಗಿರಲಿಲ್ಲ.

‡ ಮಡಿವಂತರ ಖಾನಾವಳಿ. * ಒಂದು ಜಾತಿಯ ಮಾಂಸ.

ಅಲ್ಲಲ್ಲಿ ತೆಗ್ಗುಗಳು. ಅಲ್ಲಲ್ಲಿ ದಿನ್ನೆಗಳು. ನಡುನಡುವೆ ಏನೋ ಕೆಲವು ಜಾಲಿಯಗಿಡ, ಪಾದರಿಯಗಿಡ, ಆಡವಿಸೂರಣದಗಿಡ ಮೊದಲಾದವುಗಳು ನಿಂತಿದ್ದವು. ಶಿವೂನಿಗೆ ಈ ಸ್ಥಳವು ಬಹಳ ಮನಸ್ಸಿಗೆ ಬಂದಿತು. ಬಹಳ ದಿನಗಳ ಒಂದು ಹಳೆಯ ಇಟ್ಟಂಗಿಯ ಗೋಡೆಯ ಹತ್ತರ ಉದ್ದವಾದ ಒಂದು ತಾಳೆಯ ಮರವು ನೇರವಾಗಿ ನಿಂತಿತ್ತು. ಮತ್ತೊಂದು ಕಡೆ ಒಣಗಿದ ಒಂದು ಬಿಲಪತ್ರಿಯ ಗಿಡವು ಅಂಕಡೊಂಕಾಗಿ ಬೆಳೆದು ಅಡ್ಡ ಬಂದಿತ್ತು. ಶಿವೂ ಆ ಬಿಲ್ವವೃಕ್ಷದ ಮೇಲೆ ಬ್ರಹ್ಮರಾಕ್ಷಸನಾಗಿ ವಾಸಮಾಡಹತ್ತಿದ.

ಸ್ಪಿರಿಚುಅ್ಯಲಿಝಮ್ ಅಥವಾ ಪ್ರೇತತತ್ತ್ವವು ಗೊತ್ತಿಲ್ಲದವರಿಗೆ ಸಂಕ್ಷೇಪವಾಗಿ ವಿಷಯವನ್ನು ತಿಳಿಸಿ ಹೇಳಲಾಗಿದೆ: ಮನುಷ್ಯನು ಸತ್ತ ಮೇಲೆ ಭೂತನಾಗುತ್ತಾನೆಂಬುದನ್ನು ಎಲ್ಲರೂ ಕೇಳಿರಬಹುದು. ಆದರೆ ಈ ಥಿಯರಿ (ಸಿದ್ಧಾಂತ)ಯ ಕೂಡ ಸ್ವರ್ಗ, ನರಕ, ಪುನರ್ಜನ್ಮ ಮೊದಲಾದವುಗಳ ಮೇಳ ಕೂಡುವುದು ಹೇಗೆ? ವಾಸ್ತವಿಕ ವಿಷಯ ಹೀಗಿದೆ:— ನಾಸ್ತಿಕರಿಗೆ ಆತ್ಮವಿಲ್ಲ. ಅವರು ಸತ್ತಮೇಲೆ ಆಮ್ಲಜನ, (Oxygen) ಉದ್‌ಜನ (Hydrogen) ಯವಕ್ಷಾರಜನ (Nitrogen) ಮೊದಲಾದ ಗ್ಯಾಸುಗಳಲ್ಲಿ ಪರಿಣತರಾಗುತ್ತಾರೆ. ಆಸ್ತಿಕರಾದ ಸಾಹೇಬ ಜನರಿಗೆ ಆತ್ಮವೇನೋ ಇದೆ; ಆದರೆ ಅವರಿಗೆ ಪುನರ್ಜನ್ಮವಿಲ್ಲ. ಅವರು ಸತ್ತಮೇಲೆ ಒಂದು ದೊಡ್ಡ 'ವೇಟಿಂಗರೂಮು'ನಲ್ಲಿ ನೆರೆಯುತ್ತಾರೆ. ಕಲ್ಪಾಂತದ ವರೆಗೆ ಇದ್ದನಂತರ ಒಮ್ಮೆ ಅವರ ಕೊನೆಯ ನಿರ್ಣಯವಾಗುವುದು. ನಿರ್ಣಯವು ಸಾರಲ್ಪಟ್ಟ ನಂತರ ಕೆಲ ಭೂತಗಳು ಅನಂತ ಸ್ವರ್ಗಕ್ಕೆ ಕಳುಹಲ್ಪಡುವವು. ಉಳಿದವೆಲ್ಲವೂ ಅನಂತ ನರಕಕ್ಕೆ ಅಟ್ಟಲ್ಪಡುವವು. ಸಾಹೇಬ ಜನರು ಜೀವದ್ದಶೆಯಲ್ಲಿ ಉಪಭೋಗಿಸುವ ಸ್ವಾಧೀನತೆಯ ವಿಶೇಷಾಂಶವು ಭೂತಾವಸ್ಥೆಯಲ್ಲಿ ಕಸಿದುಕೊಳ್ಳಲ್ಪಡುವುದು. ವಿಲಾಯತಿಯ ಪ್ರೇತಾತ್ಮರು 'ಪಾಸ್' ಇಲ್ಲದೆ 'ವೇಟಿಂಗರೂಮು'ನ್ನು ಬಿಡಲಿಕ್ಕೆ ಬರುವಂತಿಲ್ಲ. ಸೆಯಾನ್ಸ (Seance) ನೋಡಿದವರಿಗೆ ವಿಲಾಯತಿಯ ದೆವ್ವವನ್ನು ಇಳಿಸುವುದು ಎಷ್ಟು ಕಠಿಣವೆಂಬುದು ಗೊತ್ತಿದೆ. ಹಿಂದುಗಳಿಗಾಗಿ ಬೇರೆ ವ್ಯವಸ್ಥೆಯಿದೆ. ಏಕೆಂದರೆ ನಾವು ಪುನರ್ಜನ್ಮ, ಸ್ವರ್ಗ, ನರಕ, ಕರ್ಮಫಲ, ತ್ವಯಾ ಹೃಷೀಕೇಶ, ನಿರ್ವಾಣ, ಮುಕ್ತಿ — ಎಲ್ಲವನ್ನೂ ಒಪ್ಪುತ್ತೇವೆ. ಹಿಂದುವು ಸತ್ತನೆಂದರೆ

ಮೊದಲು ಭೂತನಾಗುತ್ತಾನೆ; ಹಾಗೂ ಬೇಕು ಬೇಕಾದಲ್ಲಿ ಸ್ವತಂತ್ರನಾಗಿ ಇರತೊಡಗುತ್ತಾನೆ. ಅವಶ್ಯ ಬಿದ್ದಲ್ಲಿ ಇಹಲೋಕದ ಕೂಡ ಸಹ ಸಂಬಂಧ ವನ್ನು ಇಡಬಲ್ಲನು. ಇದೊಂದು ದೊಡ್ಡ ಅನುಕೂಲತೆಯೆನ್ನಬೇಕು. ಆದರೆ ಈ ಅವಸ್ಥೆಯು ಬಹಳ ದಿವಸ ಇರುವದಿಲ್ಲ. ಕೆಲಕೆಲವರು ಮೂರು-ನಾಲ್ಕು ದಿನಗಳಲ್ಲಿಯೆ ಪುನರ್ಜನ್ಮವನ್ನು ಹೊಂದುತ್ತಾರೆ. ಕೆಲಕೆಲವರಿಗೆ ಹತ್ತು-ಪ್ಪತ್ತು ವರ್ಷ ಹಿಡಿಯುತ್ತವೆ. ಕೆಲ 'ಬಹಾದ್ದರ'ರಂತೂ ಎರಡು ಮೂರು ಶತಮಾನ ಕಳೆಯುತ್ತಾರೆ. ಯಾವಾಗಲಾದರೊಮ್ಮೆ 'ಚೇಂಜ' ಅಥವಾ ಹವೆಯು ಬದಲಾವಣೆಗಾಗಿ ಭೂತಗಳನ್ನು ಸ್ವರ್ಗಕ್ಕೆ ಅಥವಾ ನರಕ ಕಳುಹಿ ಸುವುದೂ ಉಂಟು. ಇದು ಅವುಗಳ ಸ್ವಾಸ್ಥ್ಯಕ್ಕೆ ಒಳಿತೇ ಸರಿ. ಏಕೆಂದರೆ ಸ್ವರ್ಗದಲ್ಲಿ ಬಹಳ ಸುಖದಿಂದ ಇರುತ್ತಾರೆ; ಆಮೇಲೆ ನರಕಕ್ಕೆ ಹೋಗಿ-ಪಾಪಗಳ ಕ್ಷಯುವಾಗುವದರ ಮೂಲಕ ಸೂಕ್ಷ್ಮಶರೀರವು ಬಹಳ ಹಗು ರಾಗಿ ಬಿಡುತ್ತದೆ. ಇದಲ್ಲದೆ ಅಲ್ಲಿ ಅನೇಕ ದೊಡ್ಡಮನುಷ್ಯರ ಪರಿಚಯು ವಾಗುವ ಸೌಭಾಗ್ಯವೂ ಒದಗುತ್ತದೆ. ಆದರೆ ದೈವವಶಾತಾ 'ಕಾಶೀಲಾಭ' ವಾದವರಿಗೆ ಅಥವಾ ನೇಪಾಲದಲ್ಲಿ ಪಶುಪತಿನಾಥನ ಇಲ್ಲವೆ ಜಗನ್ನಾಥ ಪುರಿಯಲ್ಲಿ ರಥಾರೂಢ ವಾಮನನ ದರ್ಶನವಾದವರಿಗೆ,-ಅಥವಾ ತಮ್ಮ ಎಲ್ಲ ಪಾಪದ ಹೊರೆಯನ್ನು ಹೃಷೀಕೇಶನ ಮೇಲೆ ಹೊರಿಸಿ ನಿಶ್ಚಿಂತರಾದ ವರಿಗೆ, – " ಪುನರ್ಜನ್ಮ ನ ವಿದ್ಯತೇ, " ನೇರವಾಗಿ ಮುಕ್ತಿ.

ಎರಡು ಮೂರು ತಿಂಗಳಾದವು. ಶಿವೂ ಆದೇ ಬೆಲಪತ್ರಿಯು ಗಿಡದ ಮೇಲೆ ಇರುತ್ತಿದ್ದಾನೆ. ಮೊದಮೊದಲು ಕೆಲವು ದಿನ ಆ ಹೊಸ ಸ್ಥಳದಲ್ಲಿ, ಹೊಸ ಅವಸ್ಥೆಯಲ್ಲಿ ಬಹಳ ಸೊಗಸಿನಿಂದ ಇದ್ದ. ಆದರೆ ಈಚೆಗೆ ಅದೆಲ್ಲವೂ ತುಸು ಭಣಭಣ ಎನಿಸಹತ್ತಿತು. ನೃತ್ಯಕಾಲಿಯು ಸಿಡುಕಿನವಳಾದರೂ ತನ್ನನ್ನು ಪ್ರೀತಿಸುತ್ತಿದ್ದಳೆಂಬ ಮಾತು ಶಿವೂನಿಗೆ ಈಗ ಪ್ರತಿಕ್ಷಣಕ್ಕೆ ಅನುಭವ ಬರಹತ್ತಿತು. ಒಮ್ಮೆ ಯೋಚಿಸಿದ-" ಊಹೂಂ ಈ ಸ್ಥಳವನ್ನು ಬಿಡಲೇಬೇಕು. ಮತ್ತೆ ಪನೆಟಿಗೆ ಹೋಗಿ ಅಲ್ಲಿಯೇ ತಳವೂರಬೇಕು. " ಆದರೆ ಮತ್ತೊಂದು ವಿಚಾರವು ಆತನ ತಲೆಯಲ್ಲಿ ಬಂದಿತು-" ಜನರು ಅಂಗಗಿಂದಾದಲ್ಲ, ಸತ್ತರೂ ಕೂಡ ಹೆಂಡತಿಯು ಹುಚ್ಚು ಬಿಡಲೊಲ್ಲದಲ್ಲ

ಈ ಮಗನದು, ಎಂದು! ಇಲ್ಲ; ಇಲ್ಲಿಯೂ ಯಾವಳಾದರೊಬ್ಬ ಉಪದೇವಿಯನ್ನು ಗೊತ್ತು ಹಚ್ಚಬೇಕು.''

ಫಾಲ್ಗುಣಮಾಸದ ಕೊನೆಯ ದಿನ. ಗಂಗೆಯ ತೀರದ ಮೇಲೆ ದಕ್ಷಿಣದ ಗಾಳಿಯು ಭರದಿಂದ ಬೀಸುತ್ತಿದೆ. ಸೂರ್ಯದೇವನು ನೀರಿನಲ್ಲಿ ಗೋತ ಹೊಡೆಯುತ್ತ ಇದೇ ಮುಣುಗಿ ಬಿಟ್ಟಿದ್ದಾನೆ. ಮದುಗುಣಿಕೆಯ ಹೂಗಳ ಸುಗಂಧದಿಂದ ಅಡವಿಯೆಲ್ಲ ಕಂಪುವಡೆದಿದೆ. ಶಿವೂನ ಬೆಲಪತ್ರಿಯ ಗಿಡಕ್ಕೆ ಹೊಸ ಎಲೆಗಳು ಚಿಗುರಿವೆ. ತುಸು ದೂರದಲ್ಲಿರುವ ಬೂರಲಗಿಡದ ಝುಂಡುಪಿನಲ್ಲಿ ಕೆಲ ಮಾಗಿದ ಹಣ್ಣುಗಳು ಫಟಫಟನೆ ಒಡೆದು ಬಿಟ್ಟವು; ಹಾಗು ಅವುಗಳೊಳಗಿನ ಎಷ್ಟೋ ಅರಳೆಯು ಏಡಿಯ ಕಂಕಾಲದಂತೆ ಮಿಂಚುತ್ತ ಹವೆಯಲ್ಲಿ ಹಾರಿ ಶಿವೂನ ಮೈಮೇಲೆ ಬೀಳತೊಡಗಿತು. ಹಳದೀ ಬಣ್ಣದ ಪಾತರಗಿತ್ತಿಯು ಶಿವೂನ ಸೂಕ್ಷ್ಮ ಶರೀರವನ್ನು ಭೇದಿಸಿ ಹಾರಿಹೋಯಿತು. ಕರೀ ಗುಂಗೀಹುಳವೊಂದು ಭರ್‌ಭರ್ ಎನ್ನುತ್ತ ಶಿವೂನಿಗೆ ಪ್ರದಕ್ಷಿಣೆ ಹಾಕತೊಡಗಿತು. ಒಣಿಯ ಬಳಿಯ ಗಿಡದಮೇಲೆ ಕಾಗೆಗಳ ಜೋಡು ಒಂದು ಕುಳಿತಿದೆ. ಗಂಡು ಕಾಗೆಯು ಕುತ್ತಿಗೆಯನ್ನು ತುರಿಸುತ್ತಿದೆ. ಹೆಣ್ಣು ಕಾಗೆಯು ಕಣ್ಣು ಮುಚ್ಚಿಕೊಂಡು ಗದ್‌ಗದ ಸ್ವರದಿಂದ ನಡು ನಡುವೆ ಕ-ಅ-ಅ-ಕ ಎನ್ನುತ್ತಿದೆ. ಕಪ್ಪೆಯು ನಿದ್ರೆಯಿಂದ ಇದೇ ಎಚ್ಚತ್ತು ಸಾವಕಾಶವಾಗಿ ಕಾಲಿಡುತ್ತ ಬೆಲಪತ್ರಿಯ ಗಿಡದ ಹೊದರಿನೊಳಗಿಂದ ಹೊರಕ್ಕೆ ಬಂದಿತು; ಹಾಗು, ಶಿವೂನ ಕಡೆಗೆ ತನ್ನ ಗುಗ್ಗರಿಗಣ್ಣುಗಳನ್ನು ತೆರೆದು ನೋಡಹತ್ತಿತು, ಶಿವೂ ತನ್ನೆದುರಿಗೆ ಕಃಪದಾರ್ಥವೆಂಬಂತೆ! ಚಿಮ್ಮಂಡಿಗಳ ಹಿಂಡೊಂದು ಸಂಧ್ಯಾಗಾನವನ್ನು ಮಾಡುವದಕ್ಕಾಗಿ ತಂತಿಯ ಕೂಡ ತಮ್ಮ ಸ್ವರವನ್ನು ಕೂಡಿಸತೊಡಗಿದ್ದವು. ಸ್ವರ ಸರಿಯಾಗಿ ಕೂಡಿದ ಕೂಡಲೆ ಅವೆಲ್ಲವೂ ಸಮ ಸ್ವರದಿಂದ ಚಿಕ್-ಚಿಕ್-ಚಿಕ್-ಚಿಕ್ ಎಂದು ಹಾಡತೊಡಗಿದವು.

ಶಿವೂನಿಗೆ ರಕ್ತಮಾಂಸದ ಶರೀರವಿರಲಿಲ್ಲ; ಆದರೆ ಸತ್ತಮೇಲೆಯಾದರೂ ಸ್ವಭಾವವೆಲ್ಲಿ ಹೋಗಬೇಕು? ಶಿವೂನ ಮನವು ಹಾತೊರೆಯಹತ್ತಿತು. ಹೃತ್ಪಿಂಡವದ್ಧಭಾಗದಲ್ಲಿ ಹಾರಹತ್ತಿತು. ಆ ಹಳುವಿನ ಹತ್ತಿರ ಒಂದು ಸಣ್ಣ ಕಾಲುವೆಯ ದಂಡೆಯಲ್ಲಿರುವ ಗಿಡದ ಮೇಲೆ ಒಬ್ಬ ಪಿಶಾಚಿನಿಯು

ಇರುವದು ನೆನಪಾಯಿತು. ಸಂಜೆಯು ಮುಂದೆ ಕಾಲುವೆಯಲ್ಲಿ ಅವಳು ಮೀನಗಳನ್ನು ಹಿಡಿಯುತ್ತ ಕುಳಿತಿರುವದನ್ನು ಎಷ್ಟೋ ಸಾರೆ ಶಿವೂ ನೋಡಿದ್ದಾನೆ. ತುದಿಯಿಂದ ಮೇಲಿನವರೆಗೆ ಅವಳ ಶರೀರವು ಬಿಳಿ ಅರಿವೆಯಿಂದ ಮುಚ್ಚಿರುತ್ತದೆ. ಒಂದೇ ಸಾರೆ ಅವಳು ಶಿವೂನ ಕಡೆಗೆ ನೋಡಿದ್ದಳು; ಹಾಗು ನಾಚಿಕೆಯಿಂದ ನಾಲಿಗೆ ಕಚ್ಚಿದಳು. ಪಿಶಾಚಿನಿಗೆ ವಯಸ್ಸು ಬಹಳವಾಗಿರಬೇಕು. ಏಕೆಂದರೆ ಅವಳ ಗಲ್ಲಗಳು ಪಚ್ಚು ಬಿದ್ದಿವೆ; ಎದುರಿನ ಎರಡು ಹಲ್ಲುಗಳೂ ಕಾಣುವದಿಲ್ಲ. ಅವಳ ಕೂಡ ನಗೆ-ಚೇಷ್ಟೆ ನಡೆಯಬಹುದು. ಆದರೆ ಪ್ರೇಮ ಕೂಡುವದು ಮಾತ್ರ ಅಸಾಧ್ಯವೇ ಸರಿ.



ನಾಚಿಕೆಯಿಂದ ನಾಲಿಗೆ ಕಚ್ಚಿದಳು.

ಒಬ್ಬ ಭೂತಿನಿಯೂ ಶಿವೂನ ಕಣ್ಣೆದುರಿನಿಂದ ಕೆಲವು ಸಾರೆ ಹಾದು ಹೋಗಿದ್ದಾಳೆ. ಅವಳೊಂದು ಅಂಗವಸ್ತ್ರವನ್ನು ಉಡುತ್ತಾಳೆ. ಮತ್ತೊಂದನ್ನು ತಲೆಯಮೇಲೆ ಹೊದ್ದುಕೊಂಡು ಕೂದಲು ಹೊರಗೆ ಬಿಟ್ಟು,

ಒಕಪಕ್ಷಿಯಂತೆ ಉದ್ದುದ್ದ ಕಾಲುಹಾಕುತ್ತ ಕೈಯೊಳಗಿನ ತಂಬಿಗೆಯೊಳಗಿಂದ ಸೆಗಣಿಯ ನೀರನ್ನು ಸಿಂಪಡಿಸುತ್ತ ಹೋಗುತ್ತಾಳೆ. ಅವಳಿಗೆ ವಯಸ್ಸು ಬಹಳವಾದಂತೆ ಕಾಣುವದಿಲ್ಲ. ಶಿವೂ ಒಮ್ಮೆ ಅವಳ ಕೂಡ ಹುಡುಗಾಟಿಕೆ ಮಾಡಹೋದ; ಆದರೆ ಭೂತಿನಿಯು ಸಿಟ್ಟಿಗೆದ್ದ ಬೆಕ್ಕಿನಂತೆ ಗುರುಗುಡಲು, ಹೆದರಿ ಅಲ್ಲಿಂದ ಓಡಿಹೋಗಬೇಕಾದರೆ ಅವನಿಗೆ ಸಾಕು ಸಾಕಾಗಿ ಹೋಯಿತು.



ಸೆಗಣಿಯ ನೀರನ್ನು ಸಿಂಪಡಿಸುತ್ತ ಹೋಗುತ್ತಾಳೆ.

ಶಿವೂನ ಮನವನ್ನು ಹೆಚ್ಚಾಗಿ ಕದ್ದವಳು ಒಬ್ಬ ಡಾಕಿನಿಯು. ದೆವ್ವಗಳ ಜೋಡಿನ ಪೂರ್ವ-ಭಾಗದಲ್ಲಿ ಗಂಗಾತೀರದಲ್ಲಿರುವ ಖೀರೀ ಬ್ರಾಹ್ಮಣಿಯ ಹಾಳುಮನೆಯಲ್ಲಿ ಅವಳು ಕೆಲದಿನಗಳಿಂದ ತಳವೂರಿದ್ದಾಳೆ. ಶಿವೂ ಅವಳನ್ನು ಒಂದೇ ಸಾರೆ ನೋಡಿದ್ದಾನೆ; ನೋಡಿದ ಕೂಡಲೆ ಮೋಹಿತನಾಗಿದ್ದಾನೆ. ಡಾಕಿನಿಯು ಆಗ ಒಂದು ಈಚಲಗರಿಯಿಂದ ಕಟ್ಟಿಯನ್ನು ಉಡುಗುತ್ತಿದ್ದಳು. ಅವಳುಟ್ಟದ್ದು ಒಂದು ಬಿಳಿಯ ಧೋತರ ಮಾತ್ರ. ಶಿವೂನನ್ನು ನೋಡಿ ಕ್ಷಣಹೊತ್ತು ಸೆರಗು ಎಳೆದುಕೊಂಡು ಕಿಲಕಿಲನೆ ನಗುತ್ತಿದ್ದಳು. ಹಾಗು ಕೂಡಲೆ ಹವೆಯಲ್ಲಿ ಮರೆಯಾಗುತ್ತಿದ್ದಳು. ಎಂತಹ ಹಲ್ಲುಗಳು!

ಎಂತಹ ಮೋರೆಯು ! ಎಂತಹ ಬಣ್ಣವು ! ಸ್ವೃತ್ಯಕಾಲಿಯ ಬಣ್ಣವು ಗುಲಾಬಿಯ ಹೂವಿನಂತಿದ್ದರೆ ಈ ಡಾಕಿನಿಯ ಬಣ್ಣ ಕೇದಿಗೆಯಂತೆ !



**ಈಚಲ ಗರಿಯಿಂದ ಕಟ್ಟೆಯನ್ನು ಊಡುಗುತ್ತಿದ್ದಳು.**

ಶಿವೂ ಸಿಟ್ಟುಸಿರು ಬಿಟ್ಟು ಹಾಡತೊಡಗಿದ.

ಆಹಾ, ಶ್ರೀರಾಧಾ ಚಂದ್ರಾವಲಿ ।
ಮಿಗಿಲಾರು ತಿಳಿಯೆನು ಇವರಲಿ ॥

ಒಮ್ಮೆಂದೊಮ್ಮೆ ಬಳಿಯ ತಾಡವೃಕ್ಷದ ಮೇಲಿಂದ ಅಡವಿಯನ್ನೆಲ್ಲ ನಡುಗಿಸುವ ಸೀಳ್ದನಿಯೊಂದು ಕೇಳಬಂದಿತು....

ಚ ರ ರ ರ ರ ರ
ಭಜುಯಾನ ತಂಗಿ ಭಗಲೂನ ಮಗಳೋ ।
ಕೆಕರ್ರ್ಯಾನ ಸಂಗಡ ಮದುವ್ಯಾದಳೋ ॥
ಹೋ — ಓ — ಓ — ಓ — ಓ — —

ಶಿವೂ ಬೆಚ್ಚಿಬಿದ್ದು ಕೇಳಿದ. "ಗಿಡದ ಮೇಲೆ ಯಾರವರು ?"

ಉತ್ತರ ಬಂದಿತು. " ಕರಪ್ಪಾ ಪರೇತರೀ "

**ಶಿವ್ರೂ:**— ಕರೇ ಭೂತಸೋ ? ಬಾರಪ್ಪಾ ಇಳಿದು ಬಾ.

ತಲೆಯುಮೇಲೊಂದು ಪಾವಡ, ನಿರಿ ನಿರಿ ಕರೀಬಣ್ಣಾ. ಓತೀಕಾಟದಂತಹ ಜೀವಾತ್ಮನೊಬ್ಬನು ಸರಕ್ಕನೆ ಕೆಳಗೆ ಇಳಿದು ಬಂದನು. ಹಾಗು ನೆಲಕ್ಕೆ ತಲೆ ಹಚ್ಚಿ ನಮುಸ್ಕಾರ ಮಾಡಿ ಅಂದ. " ಶರ್ರೀ ಅಪಸೋರ ! "



ಸರಕ್ಕನೆ ಕೆಳಗೆ ಇಳಿದು ಬಂದನು.

**ಶಿವ್ರೂ:**— ಚಿರಂಜೀವಿಯಾಗು. ತಂಬಾಕವೇನಾದರೂ ಇದೆಯೋ ನಪ್ಪಾ ?

ಕರ್ರ್ಯಾ:– ಚಿಲಮಿ ಎತ್ತೇನ್ರಿ ?

**ಶಿವ್ರೂ:**— ತಂಬಾಕವೇ ಇಲ್ಲ. ಚಿಲಿಮೆಯೆಲ್ಲಿಂದ ಬರಬೇಕು ? ಎಲ್ಲಿಯಾದರೂ ಹುಡುಕಿಕೊಂಡು ಬಾ.

ಕರ್ರ್ಯಾ ಮೇಲೆ ಏರಿ ಹೋದ. ತುಸುಹೊತ್ತಿನಲ್ಲಿಯೆ ವೈದ್ಯಬಾಟಿಯ ಪೇಟಿಯಿಂದ ತಂಬಾಕ, ಕಾತಿ ಮತ್ತು ಚಿಲಿಮೆಯನ್ನು ತಂದು ಬೆಂಕಿ ಹೊತ್ತಿಸಿದ. ಆಮೇಲೆ ಚಿಲಿಮೆಯನ್ನು ತುಂಬಿ ಶಿವ್ರೂನ ಕೈಯಲ್ಲಿ ಕೊಟ್ಟ. ಶಿವ್ರೂ ಅದನ್ನೊಂದು ಔಡಲ ದೇಟಿನಲ್ಲಿ ಕೂಡಿಸಿ ಎರಡು ಝುರಿಕೆ ಹೊಡೆದು ಆಮೇಲೆ ಕೇಳಿದ. "ಒಳ್ಳೇದು, ನೀನು ಇಲ್ಲಿಗೆ ಎಂದು ಬಂದೆ ? ನಿನ್ನ ಕತೆಯನ್ನಾದರೂ ಹೇಳು !"

ಕರ್ರ್ಯಾ ಪರೇತನು ಹೇಳಿದ ಇತಿಹಾಸದ ಸಾರವಿದು:– ಆತನ ಊರು ಛಪರಾ ಜಿಲ್ಲೆಯಲ್ಲಿ. ಒಂದಾನೊಂದು ಕಾಲಕ್ಕೆ ಊರಲ್ಲಿ ಹೆಂಡತಿ, ಹೊಲ-ಮನೆ, ದನ-ಕರ, ಎಲ್ಲವೂ ಇದ್ದುವು. ಹೆಂಡತಿಯಾದ ಮುಂಗರಿಯು ಬಹಳ ಕರ್ಕಶೆಯೂ ಕೆಟ್ಟ ನಡತೆಯವಳೂ ಆಗಿದ್ದಳು; ಅವಳಕೂಡ ಆತನಿಗೆ ಬಗೆಹರಿಯುತ್ತಿದ್ದಿಲ್ಲ. ಒಂದು ದಿನ ನೆರೆಮನೆಯ ಭಜುಯಾನ ತಂಗಿಯ ವಿಷಯವಾಗಿ ಭಯಂಕರ ಜಗಳವಾಯಿತು, ಗಂಡಹೆಂಡಿರ ನಡುವೆ. ಕರ್ರ್ಯಾ ಹೆಂಡತಿಯ ಬೆನ್ನಮೇಲೆ ಒನಕೆಯಿಂದ ಥಳಿಸಿ ಊರು ಬಿಟ್ಟು ಕಲಕತ್ತೆಗೆ ಓಡಿಬಂದ. ಇದು ಮೂವತ್ತು ವರ್ಷದ ಹಿಂದಿನ ಮಾತು. ಕೆಲದಿನಗಳ ನಂತರ, ಸಿಡುಬು ಹಾಯ್ದು ಮುಂಗರಿಯು ಸತ್ತುಹೋದಳೆಂಬ ಸುದ್ದಿ ಬಂದಿತು. ಮುಂಗರಿಯ ಯಜಮಾನ ತಿರುಗಿ ಊರಿಗೆ ಹೋಗಲಿಲ್ಲ; ಎರಡನೆಯ ಮದುವೆಯನ್ನೂ ಮಾಡಿಕೊಳ್ಳಲಿಲ್ಲ. ಎಲ್ಲೆಲ್ಲಿಯೊ ಚಾಕರಿ ಮಾಡುತ್ತ ಕೊನೆಗೆ ಚಾಂಪದಾನಿಯ ಗಿರಣಿಯಲ್ಲಿ ಕೂಲಿಯ ಕೆಲಸಕ್ಕೆ ನಿಂತ. ಕೆಲವು ವರ್ಷಗಳಲ್ಲಿಯೆ ಅವರ 'ಸರದಾರ'ನಾದ. ಕೆಲವು ದಿನಗಳ ಹಿಂದೆ ಒಂದು ಕಬ್ಬಿಣದ ತೊಲೆಯನ್ನು ಕ್ರೇನಿನಿಂದ ಮೇಲೆ ಎತ್ತುತ್ತಿರುವಾಗ ಆತನ ತಲೆಗೆ ಬಹಳ ಪೆಟ್ಟು ತಾಕಿತು. ಆಮೇಲೆ ಒಂದು ತಿಂಗಳ ಆಸ್ಪತ್ರಿಯಲ್ಲಿ ಬಿದ್ದುಕೊಂಡಿದ್ದ. ಈಚೆಗೆ ಪಂಚತ್ವವನ್ನು ಹೊಂದಿ ಈ ತಾಳೆಯ ಮರದ ಮೇಲೆ ಮೆರೆಯುತ್ತಿದ್ದಾನೆ.

ಶಿವೂ ಇನ್ನೊಂದು ಚೆನ್ನಾದ ಝುರಿಕೆಯನ್ನು ಹೊಡೆದು ಕರನ್ನಾನ ಕೈಯಲ್ಲಿ ಚಿಲುಮೆ ಕೊಡುವವನಿದ್ದ. ಅಷ್ಟರಲ್ಲಿ ನೆಲದೊಳಗಿಂದ ಒಡೆದ ಕಂಚಿನಂತೆ ದನಿ ಹೊರಟಿತು. " ಏನಯ್ಯಾ ಚಿಲುಮೆಯಲ್ಲಿ ಏನಾದರೂ ಉಳಿದಿದೆಯೋ ?"

ಬೆಲಪತ್ರಿಯ ಗಿಡದ ಹತ್ತಿರ ಇರುವ ಇಟ್ಟಂಗಿಯ ಗೋಡೆಯೊಳಗಿಂದ ಕೆಲ ಇಟ್ಟಂಗಿಗಳು ಕಳಚಿಬಿದ್ದವು. ಬಿರುಕಿನೊಳಗಿಂದ ಮೊಣಕಾಲು ಎತ್ತರದ ಮೂರ್ತಿಯೊಂದು ಹೊರಗೆ ಬಂದಿತು. ಡುಮ್ಮುಕಾದ ಗಿಡ್ಡ ದೇಹ; ತೆಂಗಿನ



ಎಲ್ಲವೂ ಸಾಲದ ಕತಬಿರಿ !

ಕಾಯಿಗೆ ಎರಡೂ ಮಗ್ಗಲು ಮೀಸೆ ಹೊರಟಿದ್ದರೆ ಹೇಗೆ ಕಾಣಬಹುದೊ ಅಂತಹ ಮೋರೆ; ತಲೆಯ ಮೇಲೆ ಜಂಡಿಕೆ; ಕೊರಳಲ್ಲಿ ರುದ್ರಾಕ್ಷಿಯ ಮಾಲೆ; ತೊಟ್ಟಿರುವುದು ಬಗಲಗಸಿಯ ಅಂಗಿ; ಉಟ್ಟಿರುವುದು ರೇಶ್ಮೆಯ ಮಡಿ; ಮೆಟ್ಟಿರುವುದು 'ತಾಲತಲ್ಲಾ'ದ ಮೊಚ್ಚೆ. ಆಗಂತುಕನು ಶಿವೂನ ಕೈಯಿಂದ ಚಿಲುಮೆಯನ್ನಿಸಿದುಕೊಂಡು ನುಡಿದ.

" ಬ್ರಾಹ್ಮಣರೋ ? – ನಮಸ್ಕಾರ ಸ್ವಾಮೀ ! ಏನೊ ತುಸು ಹಣ ಇತ್ತು; ಇಲ್ಲಿಯೆ ಹುಗಿದಿದ್ದೇನೆ. ಅದಕ್ಕಾಗಿ ಯಕ್ಷನಾಗಿ ಕಾವಲು ಮಾಡುತ್ತಿದ್ದೇನೆ. ಹೆಚ್ಚೇನೂ ಇಲ್ಲ; ನಾಲ್ಕೈದುನೂರು, ಇಷ್ಟೆ. ಎಲ್ಲವೂ ನಾಲದ ಕತಬಿಲೀ ! ಇಷ್ಟಾಂಪಿನ ಕಾಗದದ ಮೇಲೆ ಬರೆದದ್ದವೂ – ರೋಖ ರೂಪಾಯಿ ಒಂದೂ ಇಲ್ಲ. ಹಾಂ, ಎಚ್ಚರ ! ಅದರ ಕಡೆಗೆ ಹಣಿಕೆ ಹಾಕೀರಿ ಮತ್ತೆ – ಕೈಯಲ್ಲಿ ಬೇಡಿ ಬಂದಾವು ! ಥೂಃ ಥೂಃ !! "

ಶಿವೂನಿಗೆ ಮೇಘದೂತವು ತುಸು ನೆನಪಿತ್ತು. ಆತನು ಒಳ್ಳೆ ಆದರದಿಂದ ಕೇಳಿದ. " ಏನು ಮಹಾಶಯರೆ, ತಾವು ಕಾಲಿದಾಸನ...."

**ಯಕ್ಷ**:— ಎಲ, ಆತ ನನ್ನ ಷಡ್ಡ. ಕಾಲಿದಾಸನು ನನ್ನ ಹೆಂಡತಿಯ ಸೋದರಮಾವನ ಮಗಳನ್ನು ಮದುವೆಯಾಗಿದ್ದನು. ಹುಡುಗ ಹಿಜಲಿಯ ಉಪ್ಪಿನ ವಖಾರದಲ್ಲಿ ಗುಮಾಸ್ತನಾಗಿದ್ದ. ಆತ ಸತ್ತಂತೂ ಬಹಳ ದಿನಗಳಾದವು. ನಿಮಗೆ ಆತನ ಹೆಸರು ಹೇಗೆ ಗೊತ್ತಾಯಿತು, ಸ್ವಾಮೀ ?

**ಶಿವೂ**:— ತಾವು ಇಲ್ಲಿಗೆ ಬಂದು ಎಷ್ಟು ದಿನವಾಯ್ತು ?

**ಯಕ್ಷ**:— ನಾನು ಬಂದೋ ? ಹೇ:–ಹೇ:–! ನಾನಿಲ್ಲಿ ಇರಹತ್ತಿ–ನೋಡಿರಿ–ಏಸಿಲ್ಲೆಂದರೂ ಮೂರುವರೆ–ಇಪ್ಪತ್ತು ವರ್ಷಗಳಾಗಿರಬಹುದು. ಎಷ್ಟೋ ಜನ ಬಂತು, ನೋಡಿದ್ದೇನೆ; ಎಷ್ಟೋ ಜನ ಹೋಯ್ತು, ಅದನ್ನಾದರೂ ನೋಡಿದ್ದೇನೆ. ಎಲ, ನೀವಂತೂ ಮೊನ್ನೆ ಮೊನ್ನೆ ಬಂದಿರುವಿರಿ; ಗೊದ್ದಗಳನ್ನು ಓಡಿಸಿ, ಮೂರುಸಾರೆ ಕಾಲುತಪ್ಪಿ ಬಿದ್ದು, ಗಿಡ ಏರಿದ್ದಿರಲ್ಲವೆ ? ನಾನೆಲ್ಲವನ್ನೂ ನೋಡಿದ್ದೇನೆ. ನಿಮಗೆ ಹಾಡುವ 'ನಾದ' ಇದ್ದಂತೆ ಕಾಣುತ್ತದೆ–ಸರಿ; ಅಡ್ಡಿಯಿಲ್ಲ. ನಿಮಗೆ ಗಾಯನ ಕಲೆಯನ್ನು ಕಲಿಯುವ ಇಚ್ಛೆಯಿದ್ದರೆ ನನ್ನ ಶಿಷ್ಯರಾಗಿರಿ, ತಿಳಿಯಿತೆ ! ಈಗೇನೋ ನನ್ನ ದನಿ ಕೂತಿದೆ; ಆದರೂ ಹೇಗೆ ಅದೆ ಅಂದ್ರೀ....!

**ಶಿವೂ**:— ರಾಯರ ಭೂತಪೂರ್ವ ಪರಿಚಯವನ್ನು ಕೇಳಬಹುದೋ ?

**ಯಕ್ಷ**:— ಓಹೋ, ಬೇಕಾದಹಾಗೆ ! ನನ್ನ ಹೆಸರು ನಾದೇರಚಂದ್ರ ಮಲ್ಲಿಕ; ಪದವಿ ಬಸು, ಜಾತಿ ಕಾಯಸ್ಥ, ಊರು ರಿಸಡಾ, ಈಗ ಇರುವದು ಈ ಇಟ್ಟಂಗಿಯ ಗೋಡೆಯಲ್ಲಿ, ಉದ್ಯೋಗ ಫೌಜದಾರಿಕೆ, ಇಲಾಖೆ ರಿಸಡಾದಿಂದ ಭದ್ರೇಶ್ವರದ ವರೆಗೆ. ಜಾರ್ಜ ಟೀ ಸಾಹೇಬರ ಹೆಸರು

ಕೇಳಿದ್ದೀರಾ? ಹುಗಳಿಯ ಕಲೆಕ್ಟರರಿದ್ದರು. ನನ್ನ ಮೇಲೆ ಅವರದು ಬಹಳ 'ಮರ್ಜಿ.' ಇಲಾಖೆಯೊಳಗಿನ ಎಲ್ಲ ಕಾರಭಾರವನ್ನು ನನಗೆ ಒಪ್ಪಿಸಿ ಬಿಟ್ಟಿದ್ದರು. ಜನರು ನಾದೇರ ಮಲ್ಲಿಕನ ಹೆಸರು ಕೇಳಿದರೆ ಗದ ಗದ ನಡುಗುತ್ತಿದ್ದರು.

**ಶಿವೂ:—** ರಾಯರ ಪರಿವಾರದಲ್ಲಿ ಯಾರು ಯಾರು ಇದ್ದರು?

ಯಕ್ಷ ಉಸುರ್ಗರೆದು ಅಂದ. "ಎಲ್ಲ ಸುಖವೂ ಹಣೆಬರಹದಲ್ಲಿರುತ್ತದೆಯೇನಯ್ಯಾ! ಹೊಲಮನೆ ಬೇಕಾದಷ್ಟಿತ್ತು; ಆದರೆ ನನ್ನ ಹೆಂಡತಿ ಬಹಳ ಗಯ್ಯಾಳಿಯಾಗಿದ್ದಳು. ಏನು ಹೇಳಲಿ ಸ್ವಾಮಿ, ನಾದೇರ ಮಲ್ಲಿಕನೆಂದರೆ ಸಾಮಾನ್ಯನೆ!—ಕಂಪನೀ ಸರಕಾರದ ದಿವಾಣಿ, ಫೌಜದಾರೀ ಕೋರ್ಟುಕಚೇರಿಗಳೆಲ್ಲ ನನ್ನ ಹಿಡಿಯಲ್ಲಿ—ನನ್ನ ಮೇಲೆಯೆ ಉರಿಯುವ ಕೊಳ್ಳಿಯಿಂದ ಹೊಡೆದುಬಿಟ್ಟಳು! ಅನಂತರ ತನ್ನ ತವರುಮನೆಗೆ ಓಡಿ ಹೋದಳು! ಇಂಥಳನ್ನೇ ಕಲಮಿನಲ್ಲಿ ಹಾಕಿಬಿಡುತ್ತಿದ್ದೆ; ಆದರೆ ಲೋಕನಿಂದೆಯ ಭಯದಿಂದ ವಾರಂಟ ಹೊರಡಿಸಲಿಲ್ಲ. ಆದರೆ ಹೋಗುವಳೆಲ್ಲಿ? ಧರ್ಮ—ಕರ್ಮ ಬಿಡುವದೆಲ್ಲಿ? ನನ್ ಳಿಗನೇ ಇಸವಿಯಲ್ಲಿ ಪಿಡುಗು ಹಬ್ಬಿತ್ತಲ್ಲ, ಅದರಲ್ಲಿ ಸತ್ತು ಹೋದಳು. ಆಮೇಲೆ ಪ್ರಪಂಚದಲ್ಲಿ ಮನವಿಲ್ಲದಾಯಿತು. ಜಾರ್ಜ ಟೀ ಸಾಹೇಬರು ಪೆನಶನ್ ತೆಗೆದುಕೊಂಡು ವಿಲಾಯತಿಗೆ ಹೋದ ನಂತರ ನಾನೂ ಪಿಂಚಣೀ ತೆಗೆದುಕೊಂಡೆ; ಹಾಗು ಭಾಗವತರಾಟದ ಒಂದು ಕಂಪನಿಯನ್ನು ತೆಗೆದೆ. ಇದಾದ ಮೇಲೆ ಪರಮಾಯುವು ತೀರಲಾಗಿ ಇಲ್ಲಿ ಬಂದು ಬೀಡು ಬಿಟ್ಟಿದ್ದೇನೆ. ಮಕ್ಕಳು ಮರಿಗಳಾಗಲಿಲ್ಲ; ಆದಕ್ಕಾಗಿ ಏನೂ ದುಃಖವಿಲ್ಲ. ನಾನು ಗಳಿಸಬೇಕು ಮತ್ತು ಯಾವುದಾದರೊಂದು ಭೂತವು ಮನುಷ್ಯನಾಗಿ ನನ್ನ ಮನೆಯಲ್ಲಿ ಹುಟ್ಟಿ ನನ್ನ ಆಸ್ತಿಯ ಒಡೆಯನಾಗಿ ಕೂಡುವದೆಂದರೆ ಏನು? ನನಗಂತೂ ತಡೆಯದು. ನಾನೀಗ ಬಳ್ಳಿ ಮೋಜಿನಿಂದ ಇದ್ದೇನೆ. ನನ್ನ ಆಸ್ತಿಯನ್ನು ನಾನೇ ಕಾಯುತ್ತಿದ್ದೇನೆ. ಗಂಗಾ ತೀರದ ಸೊಗಸಾದ ಹವೆಯಲ್ಲಿ ತಿರುಗಾಡುವದು ಮತ್ತು ಬಮ್—ಬಮ್ ಎನ್ನುವದು, ಇದೇ ಕೆಲಸ! ಸರಿ, ನಾನಂತೂ ಹೇಳುವದಾಯಿತು. ಇನ್ನು ತಮ್ಮ ಇತಿಹಾಸ ಹೇಳೋಣಾಗಲಿ?"

ಶಿವೂ ತನ್ನ ಇತಿಹಾಸವನ್ನೆಲ್ಲ ಹೇಳಿದ. ಅನಂತರ ಕರ‍್ಯಾ ಪರೇತನ ಪರಿಚಯವನ್ನೂ ಮಾಡಿಕೊಡಲಾಯಿತು.

ಯಕ್ಷನೆಂದ. "ನಮ್ಮೆಲ್ಲ ಸಂಗಡಿಗರ ಇತಿಹಾಸವು ಒಂದೇ ಬಗೆಯಾಗಿ ದೆಯೆನ್ನಬಹುದು. ಹಳೆಯ ನೆನಪು ತೆಗೆದು ಮನಸ್ಸನ್ನು ಖಿನ್ನಮಾಡಿ ಕೊಂಡು ಕೂಡುವದು ವ್ಯರ್ಥ. ಇನ್ನು ಅಷ್ಟು ಹಾಡೋಣ ಬಾರಿಸೋಣ ಆಗಲಿ. ತಂಬೂರಿ ಇದ್ದರೆ ನೆಟ್ಟಗಾಗುತ್ತಿತ್ತು. ತಬಲೆಯಾದರೂ ಇದ್ದರೆ ರಂಗು ಏರುತ್ತಿತ್ತು. ಇಲ್ಲ; ಉಪಾಯವಿಲ್ಲ. ಆಗಲಿ, ಹೊಟ್ಟೆಯ ಮೇಲೆಯೆ 'ಥಾಪು' ಹಾಕುವೆನು. ಊಹೂಂ – ಡಬಡಬ ಎನ್ನುತ್ತಿದೆ. ಅವಾ ಕರ‍್ಯಾ, ಎಲ್ಲಿಂದಾದರೂ ತುಸು ಜಿಗಟು ಮಣ್ಣನ್ನು ತೆಗೆದುಕೊಂಡು ಬಾ; – ಹಾಂ ಅದನ್ನು ಇಲ್ಲಿಯೆ ನಟ್ಟನಡುವೆ ಇಟ್ಟುಬಿಡು. ಸರಿ, ಚೆನ್ನಾಗಿದೆ. – ಚೌತಾಳ ಗೊತ್ತಿದೆಯೊ ? ಆರು ಮಾತ್ರೆ, ನಾಲ್ಕು ತಾಳ ಹಾಗು ಮೂರು ಹುಸಿ. ಕೇಳಿರಿ, 'ಬೋಲ' ಹೇಳುತ್ತೇನೆ:–

ಧಾ ಧಾ ಧಿನ ತಾ ಕತ್ ತಾಗೆ
ಧಿನ ತಾ ತೆರೆ ಕೆಟೆ ಗದಿ ಘೆನೆ ಧಾ —

'ಧಾದ' ಮೇಲೆ ಸಮ ಇದೆ. ಧಿನ ತಾ ತೆರೆ ಕೆಟೆ ಗದಿ ಘೆನೆ ಧಾ. 'ಧಾ' ಕಟ್ಟಿತೆಂದರೆ ತೀರಿತು, ಎಲ್ಲವೂ ಹೊಲಬಾಟವಾಗುವದು. ಗಂಟಲ ಆರಿತು. ಕರ‍್ಯಾ, ಇನ್ನೊಂದು ಚಿಲಿಮೆ ತುಂಬಿ ತಾರಪಾ.

* * * * *

ಉದ್ಯೋಗಿಯಾದ ಪುರುಷನಿಗೆ ಲಕ್ಷ್ಮಿಯು ಪ್ರಾಪ್ತಳಾಗುವದು ಅನಿವಾರ್ಯವಾಗಿದೆ. ಬಹಳ ಅನುನಯ – ವಿನಯದ ಅನಂತರ ಡಾಕಿನಿಯು ಶಿವೂನ ಕೂಡ ಇರಲು ಒಪ್ಪಿಕೊಂಡಳು. ಆದರೆ ಅವಳು ಇನ್ನೂ ಮಾತಾಡು ವದಿಲ್ಲ; ಸೆರಗೂ ತೆಗೆದಿಲ್ಲ; ಸನ್ನೆಯ ಮೇಲೆಯೆ ಕೆಲಸ ಸಾಗಿದೆ. ಇಂದು ಭೌತಿಕ ಪದ್ಧತಿಯ ಪ್ರಕಾರ ಶಿವೂನ ಮದುವೆಯಿದೆ. ಸೂರ್ಯಾಸ್ತವಾದ ಕೂಡಲೆ ಮೈಗೆಲ್ಲ ಗಂಗೆಯ ಮೃತ್ತಿಕೆಯನ್ನು ಬಳಿದುಕೊಂಡು ಸ್ನಾನ ಮಾಡಿದ. ತುಮರಿಯ ಅಂಟಿನಿಂದ ತಿಕ್ಕಿ ತಿಕ್ಕಿ ಜನಿವಾರ ಸ್ವಚ್ಛ ಮಾಡಿದ. ಮುಳ್ಳುಗಂಟಿಯ ಬ್ರಶ್ಶಿನಿಂದ ತಲೆ ಹಿಕ್ಕಿಕೊಂಡ. ಚಂಡಿಕೆಗೆ ಒಂದು ಬಿಂಬ ಫಲವನ್ನು ಕಟ್ಟಿದ. ಇಡೀ ಅಡವಿಯನ್ನೆಲ್ಲ ತಿರುಗಿ ಬಹಳ ತೊಂದರೆಪಟ್ಟು ಆದೆಷ್ಟೊ ಪಾದರಿ ಹೂ, ಜಾಲೆಯ ಹೂ, ಹಣ್ಣಾದ ಕಾಡು ಸೀತಾಫಲ

ಹಾಗು ಬೆಲಪತ್ರಿಯು ಹಣ್ಣುಗಳನ್ನು ಕೂಡಿ ಹಾಕಿದ. ಅದಾದನಂತರ ಸಂಜೆಯು ಮುಂದೆ ಸರಿಗಳ ವಾಲಗವು ಆರಂಭವಾದ ಕೂಡಲೆ ಖೀರೀ ಬ್ರಾಹ್ಮಣಿಯು ಮನೆಯು ಕಡೆಗೆ ಹೊರಟ.

ಅಂದು ಶುಕ್ಲಪಕ್ಷದ ಚತುರ್ದಶಿ. ಮನೆಯು ಪಡಸಾಲೆಯುಲ್ಲಿ ಸೂರಣದ ಎಲೆಯು ಹಸೆಯು ಮೇಲೆ, ಡಾಕಿನಿಯು ಎದುರಿಗೆ ಕುಳಿತುಕೊಂಡು ಶಿವೂ ಮಂತ್ರವನ್ನುವ ಸಿದ್ಧತೆ ಮಾಡುತ್ತ ಔತ್ಸುಕ್ಯದಿಂದ ಎಂದ " ಇನ್ನು ಮುಸುಕು ತೆರೆಯುವದು ಅಗತ್ಯವಿದೆ. "

ಡಾಕಿನಿಯು ಮುಸುಕು ಓರೆಗೆ ಮಾಡಿದಳು. ಶಿವೂ ಹಾರಿಬಿದ್ದ! ಹೆದರುತ್ತ ಬೆದರುತ್ತ ಅಂದ. " ಎಲ, ನೀನು ನೃತ್ಯಕಾಲಿಯೆ ? "

ನೃತ್ಯಕಾಲಿಯೆಂದಳು. " ಹೌದೋ, ಹೌದು. ಸತ್ತೆಯೆಂದು ನನ್ನ ಕೈಯಿಂದ ಪಾರಾದೆಯೆಂದು ತಿಳಿದಿದ್ದೆಯೇನು? ಭೂತಿನಿ ಪಿಶಾಚಿನಿಯರ ಬೆನ್ನು ಹತ್ತಿ ತಿರುಗುವದು ಬಲು ಮೋಜಾಗಿದೆಯಲ್ಲವೆ? "

**ಶಿವೂ:—** ನೀನು ಇಲ್ಲಿಗೆ ಹೇಗೆ ಬಂದೆ? ಮಾರಿಕಾ ಬಂದಿತ್ತೇನು?

**ನೃತ್ಯಕಾಲಿ:—** ಮಾರಿಕಾ ಬರೋದಾದರೆ ನನ್ನ ವೈರಿಗೆ ಬರಲಿ. ಏಕೆ ಮನೆಯುಲ್ಲಿ ಚಿಮಣಿ ಎಣ್ಣೆ ಇದ್ದಿಲ್ಲವೇನು ?

**ಶಿವೂ:—** ಅಂತೆಯೆ ನಿನ್ನ ಮೋರೆ ಬೆಳ್ಳಗಾಗಿ ಕಾಣುತ್ತದೆ; ಕಾಸುವದರಿಂದ ಬಂಗಾರದ ಹೊಳಪು ಹೆಚ್ಚಾಗುತ್ತದೆ. ಸ್ವಭಾವವೇನಾದರೂ ಮೆತ್ತಗೆ ಆಗಿರುವದೇನು ?

ಶುಭಕಾರ್ಯದಲ್ಲಿ ವಿಘ್ನ ಬಂದುಬಿಟ್ಟಿತು. ಹೊರಗೆ ಅದಾರ ಗಲಾಟೆಯು? ರಣಹದ್ದು ಹಾಳೆಹದ್ದುಗಳ ಹಿಂಡೊಂದು ಕೂಗಾಟ, ಜಗಳಾಟ, ಹಾರಾಟ ನಡೆಸಿದಂತೆ! ಒಮ್ಮೆಂದೊಮ್ಮೆ ಭೂತಿನಿಯೂ ಪಿಶಾಚಿನಿಯೂ ಧಾವಿಸಿ ಓಡಿ ಬಂದರು ಮತ್ತು ಜೋರಿನಿಂದ ಗಲಾಟೆಯೆಬ್ಬಿಸಿ ಬಾಗಿಲನ್ನು ದಬ್ಬಹತ್ತಿದರು.

(ಭೂತಗಳು ಮೂಗಿನ ದನಿಯಲ್ಲಿ ಮಾತಾಡುತ್ತವೆ. ಆ ಎಲ್ಲ ಮಾತುಗಳನ್ನು ಸರಿಯಾಗಿ ಬರೆಯಬೇಕೆಂದರೆ ಅನೇಕ ಅನುಸ್ವಾರ ಬೇಕಾಗುತ್ತವೆ. ಆದ್ದರಿಂದ ಮುದ್ರಣಾಲಯ ದೇವತೆಗಳ ಅನುಕೂಲತೆಗಾಗಿ ಅನುಸ್ವಾರ (ಂ) ಗಳನ್ನು ತೆಗೆದುಹಾಕಿರುವೆವು. ವಾಚಕರು ಮನಬಂದಂತೆ ಅವುಗಳನ್ನು ಜೋಡಿಸಬಹುದು)

**ಪಿಶಾಚಿನಿ:—** ನನ್ನ ಆಣಿ ಅಂದ್ರೂ ನಾನು ಕೊಟ್ಟಾಕಿ ಅಲ್ಲ.

**ಭೂತಿನಿ:—** ಏ ಮುದಿಹದ್ದs ಅವಾ ನಿನ್ನ ಮೊಮ್ಮಗನ್ಹಾಂಗ ಇದ್ದಾನ.

**ಪಿಶಾಚಿನಿ:—** ಆಹಾಹಾ ! ನೀ ಮಾತ್ರ ಮುದಮುಗಳ್ಹಾಂಗ ಇದ್ದೀ ಅಲ್ಲಾ !

**ಭೂತಿನಿ:—** ನಡಿನುs ನಡಿ. ನೀ ಎಲ್ಲಿ ಬೆಸ್ಸರಾಕಿ ಬಂದಿ. ನಾ ಎರಡ ಜಲ್ಮದ ಹಿಂದಿನ ಹೇಣ್ತಿ ಇದ್ದೇನಿ.

**ಪಿಶಾಚಿನಿ:—** ಹೋಗs ಹೋಗು, ನುಡಗಾಡು ಮಾರಿಯಾಕೆ. ನಾ ಆವನ ಮೂರ ಜಲ್ಮದ ಹಿಂದಿನ ಹೇಣ್ತಿ ಇದ್ದೇನಿ.

**ಭೂತಿನಿ:—** ಹೀಂಗs ನೀನು ಒದರಕೋತs ಸಾಯಿ. ಅತ್ಲಾಗ ಆ ಡಾಕಿನೀ ಓಡಿಸಿಗೊಂಡು ಹೋಗ್ತಾಳ ಅವನ್ನ.

ಆಗ ಪಿಶಾಚಿನಿಯು ಬಡಬಡ ಮಂತ್ರ ಅನ್ನಹತ್ತಿದಳು. ಹಾಗು ಬಾಗಿಲನ್ನು ಮುಚ್ಚಿ—" ಮೊದಲ ನಿನ್ನ ತಲಿ ಹಾರಸ್ತೇನಿ, ಆಮ್ಯಾಲ ಆ ಡಾಕಿನೀನ್ನ ನುಂಗತೇನಿ " ಎಂದಳು.

ಮುಂದೆ ಕೇಳುವದೇನು ? ಕೈಗೆ ಕೈಹತ್ತಿತು. ಚಿವಟುವುದೂ ಚಿವರುವುದೂ ನಡೆಯಿತು. ಒಬ್ಬ ನೃತ್ಯಕಾಲಿಯು ಕೈಯಿಂದ ಪಾರಾಗುವುದೇ ಬೇನಯಾಗಿತ್ತು. ಈಗ ಹಿಂದಿನ ಎರಡು ಜನ್ಮಗಳ ಹೆಂಡಂದಿರೂ ಗಂಟು ಬಿದ್ದರು. ಶಿವೂ ಕೈಯಲ್ಲಿ ಜನಿವಾರವನ್ನು ಹಿಡಿದುಕೊಂಡು ಇಷ್ಟಮಂತ್ರವನ್ನು ಜಪಿಸಹತ್ತಿದ. ನೃತ್ಯಕಾಲಿಯು ಸಿಟ್ಟಿನಿಂದ ಕಾದು ಕಿಡಿಯಾದಳು.

ಇಷ್ಟರಲ್ಲಿ ನೇಪಥ್ಯದಲ್ಲಿ ಯಕ್ಷನ ದನಿಯು ಕೇಳಬಂದಿತು:-

" ಏಮನೆಯಾಗಿ ನೀನೇನು ಕೇಳುತಿರುವಿ ವೇಳೆ ಸಖಿ,
ಯಮುನೆಯ ತೀರದಿ ಶ್ಯಾಮನು ಕರೆಯುತಿಹನೆ ಕೊಳಲೂದುತ ?
ಬರಿಯ ಭ್ರಾಂತಿ ಕೊಳಲದಲ್ಲ, ಕೂಗುತಿಹವು ನರಿ ವನದಲಿ;
ಇರುಳಲಿ ನೀ ತೆರಳಬೇಡ ಕುಲದ ಮಾನ ಕಳೆಯುತಲಿ. "

ಯಕ್ಷ ಬಾಗಿಲ ಬಳಿಗೆ ಬಂದು ಕೇಳಿದ. " ಏನು ಸ್ವಾಮಿ, ಒಳಗೆ ಏನು ನಡೆದಿದೆ ? ಈ ಗದ್ದಲ ಏತರದು ? "

ಕರ್ನ್ಯಾ ಪರೇತ ಕೂಗಿದ. "ಏ ಹಾರುವ ದೆವ್ವಾ, ಬಾಗಿಲಾ ತಗೀ ತೀಯೋ ಇಲ್ಲೋ?" ಶಿವ್ಯಾನ ಸದ್ದೇ ಇಲ್ಲ!

ಒಳ್ಳೇ ಬಲವಾಗಿ ಬಾಗಿಲನ್ನು ದಬ್ಬಿದ. ಆದರೆ ಮಂತ್ರದಿಂದ ಬಿಗಿದ ಅಗಳಿಯು ಸರಿಯಲಿಲ್ಲ. ಬಾಗಿಲೂ ಮುರಿಯಲಿಲ್ಲ. ಆಗ ಕರ್ನ್ಯಾ ಪರೇತನು ಉಚ್ಚಸ್ವರದಿಂದ ಉತ್ಪಾಟನ ಮಂತ್ರವನ್ನು ಅನ್ನತೊಡಗಿದನು:–

ಎತ್ತೋ ಸುತಗೀ ಪ್ಯಾಲಕ್ಕ
ಹಾಕ್ಕೋ ಹೊಡತಾ ಮುಂದಕ್ಕ
ದಾಟುತ ಗುಡ್ಡಾ ಭರಾಭರಾ
ಬಂತೋ ಇಂಜಿನ್ ಸರಾಸರಾ
ಒಡೆಯಿತು ಬಯಲರ್ ಸರಿಯೋ ಸರಿ ಸರಿ
ಮೂಡ್ತ್ಯಾವ್ ಪೈಮ್ಯಾಲ್ ಮಾರ್ ಮಾರ್ ಬರಿ
ಹುರ್ರಾವ್ ಕಿಡಿ ನೋಡ್ ಫಟ್ ಫಟ್
ಸರೀ ಇಲ್ಲಿಂದ್ ಝೂಟ್‌ಪಟ್

ಧಡಧಡ ಎಂದು ಮನೆಯ ಬಾಗಿಲ, ಚೌಕಟ್ಟು, ಮಾಳಿಗೆ, ಗೋಡೆ ಎಲ್ಲವೂ ಆಕಾಶದಲ್ಲಿ ಹಾರಿಹೋಗಿ ದೂರ ಬಿದ್ದವು.

ಡಾಕಿಣೀ ಅರ್ಥಾತ್ ನೃತ್ಯಕಾಲಿಯನ್ನು ಕಂಡು ಯಕ್ಷನೆಂದ. "ಓಹೋ, ಇವರಂತೂ ನಮ್ಮ ಕುಟುಂಬ! ಇಲ್ಲಿ ಹೇಗೆ? ಬ್ರಹ್ಮರಾಕ್ಷಸನ ಕೂಡ! ಛೀ ಛೀ ನಾಚಿಕೆ ಮರ್ಯಾದೆ ಎಲ್ಲವನ್ನೂ ಬಿಟ್ಟುಬಿಟ್ಟೆಯಾ?" ಡಾಕಿನಿಯು ಸೆರಗು ಎಳೆದುಕೊಂಡು ಮೂಲೆಯಲ್ಲಿ ಕಲ್ಲಿನಂತೆ ಕುಳಿತು ಬಿಟ್ಟಳು.

ಕರ್ನ್ಯಾ ಪರೇತ ಅರಚಿದ–"ಏನs ಮುಂಗ್ರೀ ನಿಂಗ ಈಟರ ನಾಚಿಕೀ ಐತೇನು?"

ಆಮೇಲೆ ಆರಂಭವಾದ ಭಯಂಕರ ಕೋಲಾಹಲವನ್ನು ನೆನಪಿಗೆ ತಂದ ಕೂಡಲೆ ನಮ್ಮ ಲೇಖನಿಯು ಮಸಿಯು ಒಣಗಿ ಹೋಗುತ್ತದೆ. ಶಿವ್ಯಾನ ಮೂರು ಜನ್ಮಗಳ ಮೂವರು ಹೆಂಡತಿಯರು ಮತ್ತು ನೃತ್ಯಕಾಲಿಯ ಮೂರು ಜನ್ಮಗಳ ಮೂವರು ಗಂಡಂದಿರು,–ಈ ಡಬಲ್ ತ್ರ್ಯಹಸ್ಪರ್ಶದ ಯೋಗದಿಂದ ದೆವ್ವಗಳ ಬೀಡಿನಲ್ಲಿ ಏಕಕಾಲಕ್ಕೆ ಜಲಸ್ತಂಭ, ದಾವಾನಲ ಹಾಗೂ ಭೂಕಂಪ ಪ್ರಾರಂಭವಾದವು. ಭೂತ, ಪ್ರೇತ, ದೈತ್ಯ, ಪಿಶಾಚಿ,

ತಾಲ, ಬೇತಾಲ ಮೊದಲಾದ ಇದ್ದುಬಿದ್ದ ದೇಶೀ ಉಪದೇವತೆಗಳೂ ಈ ತಮಾಷೆಯನ್ನು ನೋಡಲು ನೆರೆದವು. ಸ್ಪೂಕ, ಪಿಕ್ಸಿ, ನೋಮ, ಗಾಬ್ಲಿನ್ ಮೊದಲಾದ ಬೋಳುಮೀಸೆಯ ವಿಲಾಯತಿ ಭೂತಗಳು ಕೊಳಲ ನುಡಿಸುತ್ತ ಕುಣಿಯಹತ್ತಿದವು. ಜಿನ್, ಜಿಂದ, ಆಫ್ರಿದ, ಮಾರೀದ ಮೊದಲಾದ ಉದ್ದ ಗಡ್ಡದ ಕಾಬೂಲಿ ಭೂತಗಳು ಹಾರಹತ್ತಿದವು. ಚಿಜ, ಚಾಜ, ಫೌಚಾಜ ಮೊದಲಾದ ಬೋಳುಗಡ್ಡದ ಚೀನೀ ಭೂತಗಳು ಲಗಾಟ **ಹೊಡೆಯ ಹತ್ತಿದವು.**



ಭಯಂಕರ ಕೋಲಾಹಲ !

ರಾಮ ರಾಮ ರಾಮ! ಜಯ ಚಂಡೀ ಜಯ ಕಾಲೀ! ಈ ಉತ್ಕಟ ದಾಂಪತ್ಯ ಸಮಸ್ಯೆಯನ್ನು ಬಿಡಿಸುವವರು ಯಾರು? ನನಗಂತೂ ನೀಗದವಾತು. ಭೂತಜಾತಿಯು ಧೈರ್ಯಗೆಡುವ ಹೇಡಿ ಜಾತಿಯಲ್ಲ; ತನ್ನ ಹಕ್ಕುಗಳಿಗಾಗಿ ಕಡೆತನಕ ಬಡಿದಾಡುವುದು. ಪುರುಷನ ಪುರುಷತ್ವ, ಸ್ತ್ರೀಯ ಸ್ತ್ರೀತ್ವ, ಭೂತದ ಭೂತತ್ವ, ಪ್ರೇತದ ಪ್ರೇತತ್ವ ಇವೆಲ್ಲವುಗಳನ್ನೂ ಅವು ಚೆನ್ನಾಗಿ ಬಲ್ಲವು. ಆದ್ದರಿಂದ ಶ್ರೀಯುಕ್ತ ಶರತ್ ಚಟರ್ಜಿ, ಚಾರು ಬ್ಯಾನರ್ಜಿ, ನರೇಶ ಸೇನ ಮತ್ತು ಯತೀಂದ್ರ ಸಿಂಹ, * ಇವರಿಗೆ ಒತ್ತಾಯದಿಂದ ಬೇಡಿಕೊಳ್ಳುವುದೇನಂದರೆ – ' ತಾವೆಲ್ಲ ಮಹನೀಯರೂ ಚೆನ್ನಾಗಿ ವಿಮರ್ಶೆ

* ಇವರೆಲ್ಲರೂ ಪ್ರಸಿದ್ಧ ಬಂಗಾಲೀ ಕಾದಂಬರಿಕಾರರು. ತಮ್ಮ ಕಾದಂಬರಿಗಳಲ್ಲಿ ಪ್ರಾಮುಖ್ಯವಾಗಿ ಪ್ರೇಮದ ಸಮಸ್ಯೆಯನ್ನಿಟ್ಟಿರುತ್ತಾರೆ.

ಮಾಡಿ ಈ ಭೂತಗಳ ಹಕ್ಕು ಬಾಧ್ಯತೆಗಳನ್ನು ಸರಿಯಾಗಿ ಹಂಚಿಕೊಟ್ಟು, ಅವುಗಳ ಪ್ರಪಂಚವು ಹಾಳಾಗದಂತೆ ಅನೀತಿಕರವಾದ ಯಾವುದಾದರೊಂದು ಪ್ರಸಂಗವು ನಡೆಯದಂತೆ ಮಾಡಬೇಕು. ಕೊನೆಗೆ ಏನೂ ಆಗದಿದ್ದರೆ ಏನೋ ಅಷ್ಟು ವರ್ಗಣೀ ಕೂಡಿಸಿ ಗಯೆಯಲ್ಲಿ ನೀರು ಬಿಡುವ ವ್ಯವಸ್ಥೆಯನ್ನಾದರೂ ಮಾಡಿದರೆ, ಪಾಪ, ಬಡಪ್ರಾಣಿಗಳು ಸುಖದಿಂದ ಇದ್ದಾರು !






ಭರತನ ಕೂಡ ಚಿತ್ರಕೂಟ ಪರ್ವತಕ್ಕೆ ಹೋದ ವಶಿಷ್ಠಾದಿ ಋಷಿಗಳೂ ಮುಖಿಯರೂ ಕುಲಪತಿಗಳೂ ರಾಮಚಂದ್ರನನ್ನು ಅಯೋಧ್ಯೆಗೆ ಮರಳಿಸಲು ಪರಿಪರಿಯಿಂದ ಪ್ರಯತ್ನಿಸಿದರು. ಆದರೆ ಸತ್ಯಸಂಧನಾದ ರಾಮಚಂದ್ರನು ಅಚಲನಾಗಿ ಉಳಿದನು. ಕೊನೆಗೆ ಮಹರ್ಷಿ ಜಾಬಾಲಿಯೆಂದರು.

* "ರಾಮ, ನೀನು ಚೆನ್ನಾಗಿ ತಿಳಿದವನು. ಸಾಮಾನ್ಯ ಜನರಂತೆ ನಿನ್ನ ಬುದ್ಧಿಯು ಅನರ್ಥದರ್ಶಿನಿಯಾಗದಿರಲಿ. ಜೀವವು ಏಕಾಕಿಯಾಗಿಯೆ ಹುಟ್ಟುತ್ತದೆ, ಮತ್ತು, ಏಕಾಕಿಯಾಗಿಯೆ ನಷ್ಟವಾಗುತ್ತದೆ. ಆದ್ದರಿಂದ ತಂದೆ–ತಾಯಿ ಎಂದು ಸ್ನೇಹಾಸಕ್ತನಾಗುವವನು ಹುಚ್ಚನು. ....ತಂದೆಯ ಅಪ್ಪಣೆಯಂತೆ ರಾಜ್ಯವನ್ನು ತೊರೆದು ದುರ್ಗಮವೂ ಸಂಕಟಪೂರ್ಣವೂ ಆದ ಅರಣ್ಯದಲ್ಲಿ ನೆಲೆಸುವದು ನಿನ್ನ ಕರ್ತವ್ಯವಲ್ಲ. ನೀನು ಈಗಿಂದೀಗಲೆ ಸಮೃದ್ಧಿಶಾಲಿಯಾದ ಅಯೋಧ್ಯೆಗೆ ಹಿಂದಿರುಗು. ಆ ಏಕವೇಣೀಧರಾ ನಗರಿಯು ನಿನ್ನ ದಾರಿಕಾಯುತ್ತಿದೆ. ನೀನು ಅಲ್ಲಿ ರಾಜಭೋಗಗಳನ್ನು

* ವಾಲ್ಮೀಕಿ ರಾಮಾಯಣ. ಅಯೋಧ್ಯಾಕಾಂಡ.

ಭೋಗಿಸುತ್ತ ದೇವಲೋಕದ ಇಂದ್ರನಂತೆ ಪರಮಸೌಖ್ಯದಿಂದ ವಿಹರಿಸುವಿ. ದಶರಥನು ನಿನಗೆ ಯಾವನೂ ಅಲ್ಲ; ಅವನು ಬೇರೆ, ನೀನಾದರೂ ಬೇರೆ........ ಸತ್ಯ, ಸ್ವಬುದ್ಧಿದೋಷದಿಂದ ನೀನು ವ್ಯರ್ಥವಾಗಿ ಹಾಳಾಗುತ್ತಿರುವಿ. ಪ್ರತ್ಯಕ್ಷಸಿದ್ಧ ಪುರುಷಾರ್ಥವನ್ನು ತೊರೆದು ಬರೀ ಧರ್ಮದ ಬೆನ್ನು ಹತ್ತುವವರನ್ನು ನೋಡಿ ನನ್ನ ಹೃದಯದಲ್ಲಿ ಕಳವಳವಾಗುತ್ತದೆ; ಅವರು ಇಹ ಲೋಕದಲ್ಲಿ ವಿವಿಧ ಯಾತನೆಗಳನ್ನು ಭೋಗಿಸಿ ಅಂತ್ಯದಲ್ಲಿ ಮಹಾವಿನಾಶವನ್ನು ಹೊಂದುತ್ತಾರೆ. ಜನರು ಪಿತೃದೇವತೆಯನ್ನುದ್ದೇಶಿಸಿ ಅಷ್ಟಕಾ ಶ್ರಾದ್ಧವನ್ನು ಮಾಡುತ್ತಾರೆ; ಅದರಿಂದ ಅನ್ನವು ಮಾತ್ರ ವ್ಯರ್ಥ ಹಾಳಾಗುವದು. ಏಕೆಂದರೆ ಸತ್ತವರು ಊಟ ಮಾಡಬಲ್ಲರೆಂದು ಯಾರಾದರು ಕೇಳಿದ್ದಾರೆಯೆ ? ........ಶಾಸ್ತ್ರಗಳಲ್ಲಿ ದೇವಪೂಜೆ, ಯಜ್ಞ, ತಪಸ್ಸು ಮೊದಲಾದ ಕಾರ್ಯಗಳ ವಿಧಾನವಿದೆಯಷ್ಟೆ. ಅದೆಲ್ಲ ಜನರನ್ನು ವಶಪಡಿಸಿಕೊಳ್ಳಬೇಕೆನ್ನುವ ಬುದ್ಧಿವಂತ ವ್ಯಕ್ತಿಗಳ ತಂತ್ರ. ಆದ್ದರಿಂದ ರಾಮ, ಪರಲೋಕ ಸಾಧನಧರ್ಮವೆಂಬ ಹೆಸರಿನ ಯಾವ ಪದಾರ್ಥವೂ ಇಲ್ಲವೆಂಬುದು ನಿನ್ನ ಬುದ್ಧಿಗೆ ಹೊಳೆಯಲಿ. ನೀನು ಪ್ರತ್ಯಕ್ಷದ ಅನುಷ್ಠಾನದಲ್ಲಿ ಹಾಗು ಪರೋಕ್ಷದ ಅನನುಸಂಧಾನದಲ್ಲಿ ಪ್ರವೃತ್ತನಾಗು. ಭರತನು ನಿನಗೆ ಅನುರೋಧ ಮಾಡುತ್ತಿದ್ದಾನೆ. ನೀನು ಸರ್ವಸಮ್ಮತ ಬುದ್ಧಿಯನ್ನು ಅನುಸರಿಸಿ ರಾಜ್ಯಭಾರವನ್ನು ಗ್ರಹಿಸುವಂಥವನಾಗು.''

ಜಾಬಾಲಿಗಳ ಮಾತು ಕೇಳಿ ಧರ್ಮಬುದ್ಧಿಯನ್ನು ಬಿಡದೆ ರಾಮಚಂದ್ರನೆಂದ. '' ತಪೋಧನರೆ, ತಾವು ನನ್ನ ಹಿತವನ್ನು ಬಯಸಿ ಹೇಳುತ್ತಿರುವದೆಲ್ಲ ಕರ್ತವ್ಯವೆಂದು ಭಾಸವಾಗುತ್ತಿದ್ದರೂ ವಸ್ತುತಃ ಅಕಾರ್ಯವಾಗಿದೆ. ತಮ್ಮ ಬುದ್ಧಿಯು ವೇದವಿರೋಧಿಯಾಗಿದೆ. ತಾವು ಧರ್ಮಭ್ರಷ್ಟ ನಾಸ್ತಿಕರು. ತಮ್ಮನ್ನು ಯಾಜಕರನ್ನಾಗಿ ಗ್ರಹಿಸಿದ ನನ್ನ ತಂದೆಯ ಕಾರ್ಯವನ್ನು ನಾನು ಯಥೋಚಿತವಾಗಿ ನಿಷೇಧಿಸುತ್ತೇನೆ. ಬೌದ್ಧರು ತಸ್ಕರರಂತೆ ದಂಡನೀಯರಾಗಿರುವಂತೆ ನಾಸ್ತಿಕರಾದರೂ ದಂಡಿತರಾಗುವದು ಅವಶ್ಯವದೆ. ಅತಏವ, ಯಾವನನ್ನು ವೇದಬಹಿಷ್ಕೃತನೆಂದು ಪರಿಹರಿಸುವದು ಯೋಗ್ಯವೋ ಅಂಥ ನಾಸ್ತಿಕನ ಕೂಡ ಜಾಣರು ಮಾತು ಸಹ ಆಡುವದಿಲ್ಲ........''

ಜಾಬಾಲಿ ಆಗ ವಿನಯದಿಂದ ಹೇಳಿದರು. " ರಾಮ, ನಾನು ನಾಸ್ತಿಕನಲ್ಲ. ನಾಸ್ತಿಕನ ಮಾತೂ ಹೇಳುತ್ತಿರುವದಿಲ್ಲ. ಪರಲೋಕ ಮೊದಲಾದುದು ಏನೂ ಇಲ್ಲವೆಂದೂ ನನ್ನ ಅಭಿಪ್ರಾಯವಿಲ್ಲ. ನಾನು ಹೊತ್ತು ನೋಡಿಕೊಂಡು ನಾಸ್ತಿಕನಾಗುವೆನು. ಮತ್ತೆ ಪ್ರಸಂಗ ಬಂದಾಗ ಆಸ್ತಿಕನಾಗುವೆನು. ನಾಸ್ತಿಕನಾಗುವ ಕಾಲವು ಈಗ ಬಂದಿದೆ. ನಿನ್ನನ್ನು ವನದಿಂದ ಹಿಂದಿರುಗಿಸುವದಕ್ಕಾಗಿ ಈಗ ಹೀಗೆಂದೆ. ಹಾಗು ನಿನ್ನನ್ನು ಪ್ರಸನ್ನ ಮಾಡುವದಕ್ಕಾಗಿ ಮತ್ತೆ ಅದನ್ನು ಪ್ರತ್ಯಾಹಾರ ಮಾಡುತ್ತಿದ್ದೇನೆ. "

ಜಾಬಾಲಿ ಮಹರ್ಷಿಗಳ ಕಥೆ ರಾಮಾಯಣದಲ್ಲಿ ಇಲ್ಲಿಯವರೆಗೆ ಇದೆ. ಇಲ್ಲದುದನ್ನು ಕೆಳಗೆ ಬರೆಯಲಾಗಿದೆ.

* * * * *

ಮಹರ್ಷಿ ಜಾಬಾಲಿ ವಿಷಣ್ಣಚಿತ್ತರಾಗಿ ಕಾಲು ನೋಯಿಸಿಕೊಳ್ಳುತ್ತ ಅಯೋಧ್ಯೆಗೆ ಬಂದರು. ದಾರಿಯಲ್ಲೆಲ್ಲ ಇವರೊಬ್ಬರೇ. ಏಕೆಂದರೆ ಉಳಿದ ಋಷಿಗಳೆಲ್ಲ ದೂರದಲ್ಲಿಯೆ ಇರುತ್ತಿದ್ದರು, ಈತನ ಸಂಗತಿ ಬೇಡವೆಂದು. ಖರ್ವಟ ಖಲ್ವಾಟ ಖಲಿತ ಮೊದಲಾದ ಋಷಿಗಳು ದೂರದಿಂದಲೆ ಸನ್ನೆ ಮಾಡಿ ಅವರ ಚೇಷ್ಟೆ ಮಾಡಲೂ ಹಿಂದೆ ಮುಂದೆ ನೋಡುತ್ತಿದ್ದಿಲ್ಲ.

ಅಯೋಧ್ಯೆಯ ಬ್ರಾಹ್ಮಣರು ಯಾರೂ ಜಾಬಾಲಿ ಋಷಿಗಳಿಗೆ ಮರ್ಯಾದೆ ಕೊಡುತ್ತಿದ್ದಿಲ್ಲ. ಸ್ವಯಂ ರಾಜಾ ದಶರಥನು ಅವರಲ್ಲಿ ಅನುರಕ್ತನಾಗಿದ್ದನೆಂದು ಇಲ್ಲಿಯವರೆಗೆ ಅವರಿಗೆ ಅಮರ್ಯಾದೆಯಾಗುವ ಪ್ರಸಂಗ ಬಂದಿರಲಿಲ್ಲ. ಈಗ ರಾಮಚಂದ್ರನಿಂದ ಅವರ ಪ್ರತಿಷ್ಠೆಯು ನಷ್ಟವಾಗಿದೆ. ಸಹಯಾತ್ರಿಗಳಾದ ವಿಪ್ರರ ವ್ಯವಹಾರವನ್ನು ನೋಡಿ ಜಾಬಾಲಿಗಳಿಗೆ ಸ್ಪಷ್ಟವಾಗಿ ತಿಳಿಯಿತು, ತಪ್ಪತ್ತೈಲದಲ್ಲಿಯ ಮೀನಿನಂತೆ ಅಯೋಧ್ಯೆಯಲ್ಲಿರುವದು ದುರ್ವಸಹವೆಂದು.

ರಾಮಚಂದ್ರನ ವಿಷಯವಾಗಿ ಜಾಬಾಲಿಗಳಿಗೆ ಎಷ್ಟೂ ಸಿಟ್ಟಿಲ್ಲ. ಆದರೆ ಆತನ ಭವಿಷ್ಯದ ಬಗ್ಗೆ ಮಾತ್ರ ತುಸು ಚಿಂತಾಕುಲರಾಗಿದ್ದಾರೆ. ಹುಡುಗನಿಗೆ ಇನ್ನೂ ಇಪ್ಪತ್ತೆಂಟೇ ವರ್ಷ. ಸಂಸಾರದ ಅನುಭವವಿಲ್ಲ. ಶಾಸ್ತ್ರಜೀವಿಗಳಾದ ಸಭಾ ಪಂಡಿತರು ಮತ್ತು ಮುನಿಪುಂಗವ ವಿಶ್ವಾಮಿತ್ರರು—ಒಂದು ಕಾಲದಲ್ಲಿ ವಿಶೇಷ ಕೀರ್ತಿಯನ್ನು ಗಳಿಸಿದವರು—ಯಾವ

ರೀತಿಯಾಗಿ ಧನುರ್ ಶಿಕ್ಷಣವನ್ನು ಕೊಟ್ಟಿರುವರೋ ಅದನ್ನೇ ಪರಮ ಪುರುಷಾರ್ಥವೆಂದು ಸರಲಸ್ವಭಾವದ ರಾಮಚಂದ್ರನು ಗ್ರಹಿಸಿದ್ದಾನೆ. ಪಾಪ, ಆತ ಇನ್ನೆಷ್ಟು ಕಷ್ಟ ಸಹಿಸಬೇಕಾಗುವದು! .... ಹೀಗೆ ಬಗೆಬಗೆಯಾಗಿ ಚಿಂತಿಸುತ್ತ ಜಾಬಾಲಿ ಅಯೋಧ್ಯೆಯಲ್ಲಿರುವ ಆಶ್ರಮಕ್ಕೆ ಬಂದು ಮುಟ್ಟಿದರು.

* * * * *

ನಗರದ ಉಪಕಂಠದಲ್ಲಿ ಸರಯೂ ತೀರದಲ್ಲಿ ಜಾಬಾಲಿಯ ಪರ್ಣಕುಟೀರ. ಸಂಜೆಯಾಗಿದೆ. ಗೋಮಯಲಿಪ್ತ ಪರಿಚ್ಛನ್ನ ಅಂಗಳದ ಒಂದು ಬದಿಯಲ್ಲಿ ಪನಸವೃಕ್ಷದ ಕೆಳಗೆ ಜಾಬಾಲಿಯ ಪತ್ನಿ ಹಿಂದ್ರಾಲಿನಿಯು ರಾತ್ರಿಗಾಗಿ ಭೋಜ್ಯವನ್ನು ಸಿದ್ಧಪಡಿಸುತ್ತಿದ್ದಾಳೆ. ನದಿಯ ಆಚೆಗೆ ಇರುವ ನಿಷಾದರು ಕಳಿಸಿದ ಮೃಗಮಾಂಸವು ಶೂಲ್ಯಪಕ್ವವಾಗುತ್ತಿದೆ. ಇನ್ನು ನಾಲ್ಕಾರು ಪುರೋಡಾಶಗಳನ್ನಷ್ಟು ಬೇಯಿಸಿದರೆ ಆಯಿತು ಅಡುಗೆ. ಹಿಂದ್ರಾಲಿನಿಯು ಯವಪಿಂಡವನ್ನು ಕಲೆಸುತ್ತ ಮನದಲ್ಲಿ ಸಂಸಾರದ ಅನೇಕ ಚಿಂತೆಗಳನ್ನು ಮಾಡತೊಡಗಿದಳು. ತನಗೆ ಇಷ್ಟು ವಯಸ್ಸಾಯಿತು, ಇನ್ನೂ ಪುತ್ರಮುಖವನ್ನು ನೋಡಲಿಲ್ಲ. ಪತಿಗೆ ಪುನ್ನಾಮ ನರಕದ ಭಯವಿಲ್ಲ. ಪರಲೋಕದ ಪಿಂಡದ ಚಿಂತೆಯೂ ಇಲ್ಲ—ಇಹಲೋಕದಲ್ಲಿ ಎರಡು ಹೊತ್ತು ಪಿಂಡ ಸಿಕ್ಕರೆ ಸಾಕು, ಅದರಲ್ಲಿಯೆ ಸಂತುಷ್ಟರು. ದತ್ತಕದ ಮಾತೆತ್ತಿದರೆ "ಪುತ್ರನ ಅಭಾವವೆಲ್ಲಿ, ಬೇಕಾದವನೊಬ್ಬನನ್ನು ಮನಸ್ಸಿನಲ್ಲಿಯೆ ಮಗನೆಂದತು ತಿಳಿದರಾಯಿತು" ಎಂದು ಹೇಳಿಬಿಡುತ್ತಾರೆ. ಏನು ಮಾತು ಏನು ಕಥೆ! ಎಲ್ಲರಂತೆ ತನ್ನ ಗಂಡನಾಗಿದ್ದರೆ ಹಿಂದ್ರಾಲಿನಿಗೆ ಇಷ್ಟು ವಿಷಾದವಾಗುತ್ತಿದ್ದಿಲ್ಲ. ಆದರೆ ಆತನೊಬ್ಬ ಸೃಷ್ಟಿಬಹಿರ್ಭೂತ ಮನುಷ್ಯ; ಯಾರ ಕೂಡಲೂ ಬಗೆಹರಿಯುವದಿಲ್ಲ. ಪಾಷಂಡನೆಂದು ಜನರು ಹಿಂದೆ ಆಡಿಕೊಂಡರೆ ಆಗುವದೇನು! ತ್ರಿಕಾಲ ಸಂಧ್ಯೆಯಿಲ್ಲ, ಜಪತಪವಿಲ್ಲ, ಅಗ್ನಿಹೋತ್ರವಿಲ್ಲ. ತರ್ಕ ಹೂಡಿ ಜನರನ್ನು ನಿಟ್ಟಿಗೆಬ್ಬಿಸುತ್ತಾನೆ. ಇಂತಹ ಶಾಂತ ರಾಮಚಂದ್ರನನ್ನು ಸಹ ಬ್ರಾಹ್ಮಣ ಕೆರಳಿಸಿದ್ದಾನೆ. ದಶರಥನಿರುವವರೆಗೆ ಅನ್ನವಸ್ತ್ರದ ಅಭಾವವಾಗಲಿಲ್ಲ. ವೃದ್ಧರಾಜನು ಸ್ತ್ರೈಣನಾಗಿದ್ದರೂ ಆತನ ಮನವು ಉದಾರವಾಗಿತ್ತು. ಇನ್ನು ಮುಂದೇನಾಗುವದೋ

ದೇವರಿಗೆ ಗೊತ್ತು. ಭರತನಂತೂ ನಂದಿಗ್ರಾಮದಲ್ಲಿ ಪಾದುಕಾಪೂಜೆಯಲ್ಲಿ ನಿರತನಾಗಿಬಿಟ್ಟಿದ್ದಾನೆ. ಸಚಿವನಾದ ಸುಮಂತ್ರನೇ ರಾಜಕಾರ್ಯವನ್ನು ನೋಡಿಕೊಳ್ಳುತ್ತಿದ್ದಾನೆ. ಆದರೆ ಅವನು ಅತ್ಯಂತ ಕೃಪಣನು. ಕುದುರೆಯ ಲಗಾಮು ಜಗ್ಗಿ ಜಗ್ಗಿ ಎಲ್ಲ ವಿಷಯಗಳಲ್ಲಿ ಜಗ್ಗಾಡುವದು ಆತನಿಗೆ ಅಭ್ಯಾಸ ವಾಗಿ ಬಿಟ್ಟಿದೆ. ರಾಜಗೃಹದಿಂದ ಸಿಕ್ಕುವ ಸಾಮಾನ್ಯವೃತ್ತಿಯಿಂದ ಇಂತಹ ತುಟ್ಟಿಯ ದಿನಗಳಲ್ಲಿ ಹೊಟ್ಟೆಸಾಗುವದು ಹೇಗೆ? ಹಿಂದ್ರಾಲಿನಿಯು ತನ್ನ ತಂದೆಯ ಬಾಯಿಂದ ಕೇಳಿದ್ದಳು, ಸತ್ಯಯುಗದಲ್ಲಿ ಒಂದು ಕಪರ್ದಿಕನನ್ನು ಕೊಟ್ಟರೆ ಏಳು ಕಲಶ ಶುದ್ಧ ಹೈಯಂಗವೀನವು ದೊರೆಯುತ್ತಿತ್ತೆಂದು. ಆದರೆ ಈ ದಗ್ಧ ತ್ರೇತಾಯುಗದಲ್ಲಿ ಮೂರು ಕಲಶ ದೊರೆಯುವದೂ ಬಗಿ, ಅದೂ ಮಿಶ್ರವಾದದ್ದು. ಘೃತಕ್ಕಾಗಿ ಜಾಬಾಲಿಗೆ ತುಸು ಸಾಲವಾಗಿದೆ. ಅದನ್ನು ಮುಟ್ಟಿಸುವ ಸಾಮರ್ಥ್ಯವಿಲ್ಲ. ಸಂಗ್ರಹಿಸಿಟ್ಟ ನೀವಾರ ಧಾನ್ಯವೂ ತೀರಲಿಕ್ಕೆ ಬಂದಿದೆ. ಪರಿಧೇಯವು ಜೀರ್ಣವಾಗಿದೆ. ಅರ್ಥಾಗಮವು ನಿಂತಿದೆ. ಇತ್ತ ಜಾಬಾಲಿಯ ಶತ್ರುಸಂಖ್ಯೆ ಬೆಳೆಯುತ್ತಿದೆ. ಪತಿಯ ಸಂಸರ್ಗ ದೋಷದಿಂದ ಹಿಂದ್ರಾಲಿನಿಯೂ ಅನಾಚಾರದಲ್ಲಿ ಅಭ್ಯಸ್ತಳಾಗಿ ದ್ದಾಳೆ. ಅಯೋಧ್ಯೆಯ ನಿಷ್ಠಾಪತಿಯರು ಅವಳನ್ನು ಕಂಡು ಶೂಕರಿಯಂತೆ ತುಟಿಗಳನ್ನು ಮುದಡಿಸುತ್ತಾರೆ. ಹಿಂದ್ರಾಲಿನಿಗೆ ಇನ್ನು ಸಹಿಸುವುದು ಅಸಾಧ್ಯವಾಯಿತು. ಈದಿನ ಊಟವಾದಮೇಲೆ ಅವಳು ತನ್ನ ಪತಿಯನ್ನು ಕೆಣಕಿ ಮಾತನಾಡಿಸುವಳು.

ಅಂಗಳದ ಹೊರಗೆ ಹುಂಕಾರಮಾಡಿ ಯಾರು ಕೂಗಿದರು — " ಹಂ ಹೋ ಜಾಬಾಲೆ, ಹಂ ಹೋ ! " ಹಿಂದ್ರಾಲಿನಿಯು ತೃಪ್ತಳಾಗಿ ನೋಡಿದಳು, ಹತ್ತು ಹನ್ನೆರಡು ಕ್ಷುದ್ರಕಾಯ ಋಷಿಗಳು ಕುಟೀರದ್ವಾರ ದಲ್ಲಿ ನಿಂತಿದ್ದಾರೆ. ಅವರ ಖರ್ವ ವಪು, ವಿರಲ ಶ್ಮಶ್ರು ಹಾಗು ಸ್ಫೀತ ಉದರ ವನ್ನು ನೋಡಿ ಅವರು ವಾಲಖಿಲ್ಯಋಷಿಗಳೆಂದು ಹಿಂದ್ರಾಲಿನಿಗೆ ಗೊತ್ತಾ ಯಿತು.

ಹಿಂದ್ರಾಲಿನಿಯೆಂದಳು. " ಹೇ ಮಹಾತಪಾ ಮುನಿಗಳೇ, ನನ್ನ ಪತಿ ಸರಯೂ ತೀರದಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದಾರೆ. ಅವರು ಇಷ್ಟರಲ್ಲಿಯೆ

ತಿರುಗಿ ಬರುವರು. ಅಲ್ಲಿಯ ವರೆಗೆ ತಾವು ಈ ಕುಟೀರದ ಆಲಿಂದದಲ್ಲಿ ಆಸನ ವನ್ನು ಗ್ರಹಿಸಿ ವಿಶ್ರಮಿಸಬೇಕು.''

ವಾಲಖಿಲ್ಯರ ಅಗ್ರಣಿಯಾದ ಖರ್ಪಟರೆಂದರು. ''ಭದ್ರೇ, ನಿಮ್ಮ ಈ ಆಲಿಂದವು ಭೂಮಿಯಿಂದ ವಿತಸ್ತಿತ್ರಯ ಎತ್ತರವಾಗಿದೆ, ನಮಗೆ ನಿಲುಕುವ ದಿಲ್ಲ. ಅತಏವ ಈ ಪ್ರಾಂಗಣದಲ್ಲಿಯೆ ಆಸನವನ್ನು ಪರಿಗ್ರಹಿಸುವೆವು. ನೀನು ವ್ಯಸ್ತಳಾಗಬೇಡ.''



... ... ... ಎತ್ತರವಾಗಿದೆ, ನಮಗೆ ನಿಲುಕುವದಿಲ್ಲ.

ಜಾಬಾಲಿ ಆಗ ಸರಯೂತೀರದಲ್ಲಿ ಜಂಬೂವೃಕ್ಷದ ಕೆಳಗೆ ಕುಳಿತು ಕೊಂಡು ಯೋಚಿಸುತ್ತಿದ್ದರು. — ಈ ಅನ್ನಜಲಾವಲಂಬೀ ಮಾನವ ಶರೀರ ದಲ್ಲಿ ಪಂಚಮಹಾಭೂತಗಳ ಕಿಂವಿಧ ಸಂಸ್ಥಾನದಿಂದ ಸುಬುದ್ಧಿಯು ಉತ್ಪನ್ನವಾಗುವದು, ಹಾಗು ಮೂರ್ಖತೆಯಾದರೂ ಎಂತು ಹುಟ್ಟುವದು? ಇದಲ್ಲದೆ ಲಾಕ್ಷ್ಯೌಷಧಿಗಳ ದ್ವಾರಾ ಪಂಚಭೂತಗಳು ಪ್ರಕಂಪಿತವಾಗಲಾಗಿ ಮೂರ್ಖತೆಯು ಅಳಿವು, ಉದಯಿಸುವ ಸುಬುದ್ಧಿಯು ಸ್ಥಾಯಿಯೆ, ಅಸ್ಥಾಯಿಯೆ? ಈ ಜಟಿಲ ತತ್ತ್ವವಿಮಾಂಸೆಯನ್ನು ಮಾಡಲು ಏನಾದರೂ ಆಗದಿರಲು, ಬೇಸತ್ತು ಕಡೆಗೆ ಅಲ್ಲಿಂದ ಎದ್ದು ಜಾಬಾಲಿ ಆಶ್ರಮಕ್ಕೆ ತಿರುಗಿ ಬಂದರು.

ಜಾಬಾಲಿ ವಾಲಖಿಲ್ಯರಿಗೆಂದರು. "ಅಹೋ, ಇಂದು ಖರ್ವಟ ಖಲ್ವಾಟ ಖಲಿತ ಪ್ರಭೃತಿ ಮಹಾಮುನಿಗಳು ನಮ್ಮ ಆಶ್ರಮಕ್ಕೆ ಸಮಾಗತರಾದದ್ದು ಎಂತಹ ಸೌಭಾಗ್ಯವು! ಹೇ ಮುನಿಗಳೆ, ನಿಮ್ಮದೆಲ್ಲವೂ ಕುಶಲವಷ್ಟೆ? ಯಜ್ಞಯಾಗಾದಿಗಳು ನಿರ್ವಿಘ್ನದಿಂದ ಸಾಗಿವೆಯಷ್ಟೆ? ಋಷಿಭುಕ್ ರಾಕ್ಷಸರು ನಿಮ್ಮ ಕಡೆಗೆ ಲೋಲುಪದೃಷ್ಟಿಯಿಂದ ನೋಡುವದಿಲ್ಲವಷ್ಟೆ? ನಿಮ್ಮ ಆ ಕಪಿಲಾ ಆಕಳು ಕರ ಹಾಕಿದೆಯಷ್ಟೆ? ರಾಜಗುರು ವಶಿಷ್ಠರು ನಿಮಗಾಗಿ ಯಥೇಷ್ಟ ಗವ್ಯದ್ರವ್ಯದ ವ್ಯವಸ್ಥೆಯನ್ನು ಮಾಡಿರುವರಷ್ಟೆ?"

ಮಹಾಮುನಿ ಖರ್ವಟರು ದದೂರಧ್ವನಿವತ್ ಗಂಭೀರನಾದದಿಂದ ಹೇಳಿದರು. "ಜಾಬಾಲೆ, ಶ್ಯಾಂತನಾಗು. ಆಪ್ಯಾಯನಕ್ಕಾಗಿ ನಾವು ನಿನ್ನ ಕಡೆಗೆ ಬಂದಿಲ್ಲ. ನೀನು ಪಾಪಪಂಕದಲ್ಲಿ ಆಕಂಠವೂ ನಿಮಗ್ನನಾಗಿರುವೆ. ಪ್ರಾಯೋಪವೇಶನ ಚಾಂದ್ರಾಯಣಾದಿಗಳಿಂದ ನಿನಗೇನೂ ಆಗದು. ನಾವು ನಿನ್ನನ್ನು ಆಥರ್ವಣೋಕ್ತ ಪದ್ಧತಿಯಂತೆ ಅಗ್ನಿಶುದ್ಧ ಮಾಡುವೆವು. ಅದರಿಂದ ನೀನು ಅಂತ್ಯದಲ್ಲಿ ಪರಮಗತಿಯನ್ನು ಹೊಂದುವೆ. ತುಷಾನಲವು ಪ್ರಸ್ತುತವಾಗಿದೆ. ನೀನು ನಮ್ಮನ್ನು ಹಿಂಬಾಲಿಸು."

ಜಾಬಾಲಿ ಎಂದರು. "ಹೇ ಖರ್ವಟ, ನಿಮ್ಮನ್ನು ಯಾರು ಕಳಿಸಿದ್ದಾರೆ? ರಾಜ ಪ್ರತಿಭೂ ಭರತನೋ ಅಥವಾ ರಾಜಗುರು ವಶಿಷ್ಠರೋ? ನನ್ನ ಉದ್ಧಾರಸಾಧನೆಗಾಗಿ ನೀವು ಇಷ್ಟೊಂದು ವ್ಯಗ್ರರಾಗಿರುವದೇಕೆ? ನಾನು ಅತಿ ನಿರೀಹನಾದ ವಾನಪ್ರಸ್ಥಾವಲಂಬೀ ಪ್ರೌಢಬ್ರಾಹ್ಮಣನು. ನಾನು ಎಂದಿಗೂ ಯಾರ ಅನಿಷ್ಟವನ್ನೂ ಬಗೆದವನಲ್ಲ. ನಿಮಗೆ ಬರುವ ದಕ್ಷಿಣೆಯಲ್ಲಿ ಪಾಲುಗಾರನೂ ಆಗಿಲ್ಲ. ನೀವು ನನ್ನ ಪರಕಾಲದ ಬಗೆಗೆ ಚಿಂತಿತರಾಗದೆ ನಿಮ್ಮ ಸ್ವತಃದ ಇಹಕಾಲದ ವಿಷಯವಾಗಿ ಪ್ರಯತ್ನಿಸಿರಿ."

ಆಗ ಅತಿಕೋಪಸ್ವಭಾವದ ಖಲ್ವಾಟ ಋಷಿಗಳು ಅಶ್ವಧ್ವನಿವತ್ ಕಂಪಿತಕಂಠದಿಂದ ಹೇಳಿದರು. "ರೇ ತಪೋಧನ, ನೀನು ಅತಿ ದುರಾಚಾರಿ, ಧರ್ಮಭ್ರಷ್ಟ ನಾಸ್ತಿಕ. ನಿನ್ನ ವಾಸದಿಂದ ಈ ಅಯೋಧ್ಯಾಪುರಿಯು ಅಶುಚಿಯಾಗಿದೆ. ಧರ್ಮಾತ್ಮಾ ವಿಪ್ರಸಮಾಜವು ಅತಿಷ್ಟವಾಗಿದೆ. ನಾವು ಭರತ ಅಥವಾ ವಶಿಷ್ಠರ ಯಾರ ಆಜ್ಞಾಧಾರಿಗಳೂ ಅಲ್ಲ. ಬ್ರಾಹ್ಮಣ್ಯರಕ್ಷಣೆಗಾಗಿ

ನಾವು ಪ್ರಜಾಪತಿ ಬ್ರಹ್ಮನಿಂದ ಸೃಷ್ಟರಾಗಿದ್ದೇವೆ. ನೀನೆಸ್ನ್ಸ ವಾಕ್ಯವ್ಯಯು ಮಾಡಬೇಡ. ಸಿದ್ಧನಾಗು.''

ಜಾಬಾಲಿ ಎಂದರು. ''ಹೇ ವಾಲಖಿಲ್ಯರೆ, ನಾನು ಸ್ವೇಚ್ಛೆಯಿಂದ ಬರುವವನಲ್ಲ. ಬೇಕಾದರೆ ನೀವು ನನ್ನನ್ನು ಬ್ರಹ್ಮತೇಜೋಬಲದಿಂದ ಎತ್ತಿರಿ.''

ಜಾಬಾಲಿಗಳ ಶಾಲಪ್ರಾಂಶು ವಿರಾಟ್ ದೇಹವನ್ನು ನೋಡಿ ವಾಲಖಿಲ್ಯರು ಕಿಯತ್‌ಕ್ಷಣ ನಿಮ್ನ-ಕಂಠದಿಂದ ಜಲ್ಪನೆ ಮಾಡಿದರು. ಕೊನೆಗೆ ಗಲಿತದಂತರಾದ ಖಲಿತ ಮುನಿಗಳು ಸ್ಖಲಿತ ಸ್ವರದಲ್ಲಿ ನುಡಿದರು. ''ಹೇ ಜಾಬಾಲೆ, ಯದಿ ನೀನು ಅಗ್ನಿಪ್ರವೇಶ ಮಾಡಲಿಕ್ಕೆ ಅತ್ಯಂತ ಭೀತನಾಗಿದ್ದರೆ ಪ್ರಾಯಶ್ಚಿತ್ತದ ನಿಷ್ಕ್ರಯಸ್ವರೂಪವಾಗಿ ಮೂರು ಶೂರ್ಪ ತಿಲ ಹಾಗು ಶತನಿಷ್ಕ ಕಾಂಚನವನ್ನು ಪ್ರದಾನಮಾಡು. ನಾವು ಯಥಾವಿಹಿತ ಅನುಷ್ಠಾನದ್ವಾರಾ ನಿನ್ನನ್ನು ಪಾಪಮುಕ್ತ ಮಾಡುವೆವು.''

ಜಾಬಾಲಿ ಎಂದರು. ''ನನ್ನ ಹತ್ತಿರ ಒಂದು ಕಪರ್ದಿಕವೂ ಇಲ್ಲ. ಇದ್ದರೂ ಕೊಡುತ್ತಿದ್ದಿಲ್ಲ.''

ಆಗ ಖರ್ವಟ-ಖಲ್ವಾಟ-ಖಲಿತಾದಿ ಮುನಿಗಳು ಸಮಸ್ವರದಿಂದ ಅಂದರು. ''ರೇ ನರಾಧಮ, ಹಾಗಾದರೆ ಅಭಿಸಂಪಾತ ಮಾಡುತ್ತೇವೆ, ಶ್ರವಣಮಾಡು. ಸಾಕ್ಷೀ ಚಂದ್ರ-ಸೂರ್ಯ-ತಾರಾ, ಸಾಕ್ಷೀ ದೇವಗಣ ಪಿತೃಗಣ-ದಿಕ್ಪಾಲಗಣ- ವಷಟ್‌ಕಾರಗಣ....''

ಜಾಬಾಲಿ ಎಂದರು. ''ಶೌಂಡಿಕನಿಗೆ ಸಾಕ್ಷೀ ಮದ್ಯಪ, ತಸ್ಕರನಿಗೆ ಸಾಕ್ಷೀ ಗ್ರಂಥಿಭೇದಕ. ಹೇ ವಾಲಖಿಲ್ಯರೆ, ವ್ಯರ್ಥವಾಗಿ ದೇವತೆಗಳನ್ನು ಆಹ್ವಾನ ಮಾಡುತ್ತಿರುವಿರಿ. ಅವರು ಬರುವದಿಲ್ಲ. ಅದಕ್ಕಿಂತ ಭೂತವೇತಾಳಗಳನ್ನಾದರೂ ಸ್ಮರಿಸಿರಿ.''

ಹಿಂದ್ರಾಲಿನಿಯೆಂದಳು. ''ಹೇ ಆರ್ಯಪುತ್ರ, ನೀವು ಈ ಅಲ್ಪಾಯುಷಿ ಅಪೋಗಂಡ ಅಕಾಲಪಕ್ವ ಕೂಷ್ಮಾಂಡಗಳ ಕೂಡ ಅದೇಕೆ ವಾಗ್ವಿತಂಡೆಯನ್ನು ಮಾಡುವಿರಿ? ಇವರೆಲ್ಲರನ್ನೂ ಹೊಡೆದು ಅಟ್ಟಿರಿ.''

ವಾಲಖಿಲ್ಯರು ಗರ್ಜಿಸಿದರು. ''ರೇ-ರೇ-ರೇ-ರೇ....''

ಜಾಬಾಲಿ ಆಗ ತಮ್ಮ ವಿಶಾಲಬಾಹುದ್ವಯಗಳಿಂದ ವಾಲಖಿಲ್ಯ

ರೆಲ್ಲರನ್ನೂ ಒಬ್ಬೊಬ್ಬರನ್ನಾಗಿ ಎತ್ತಿ ಪ್ರಾಂಗಣ ವೇಷ್ಟಿಸಿಯ ಆಚೆಗೆ ದಪದಪ ಚೆಲ್ಲಿಬಿಟ್ಟರು.

* * * * *

ವಾಲಖಿಲ್ಯರು ಪ್ರಸ್ಥಾನಮಾಡಿದ ಮೇಲೆ ಜಾಬಾಲಿ ನುಡಿದರು. "ಪ್ರಿಯೆ, ನಾವಿನ್ನು ಅಯೋಧ್ಯೆಯಲ್ಲಿರುವದು ಸಾಧ್ಯವಿಲ್ಲ. ಯಾವಾಗ ಯಾವ ದಿಕ್ಕಿನಿಂದ ಉತ್ಪಾತ ಬರುವದೆಂಬುದು ಹೇಳಲಿಕ್ಕೆ ಬರುವಂತಿಲ್ಲ. ಆತಏವ, ನಾಳೆ ಪ್ರತ್ಯೂಷದಲ್ಲಿಯೆ ನಾವು ಈ ಆಶ್ರಮವನ್ನು ಬಿಟ್ಟು ದೂರ ದಲ್ಲಿ ಯಾವುದಾದರೊಂದು ನಿರುಪದ್ರವ ಸ್ಥಾನಕ್ಕೆ ಹೋಗೋಣ."

ಮರುದಿನ ಉಷಃಕಾಲದಲ್ಲಿ ಜಾಬಾಲಿ ಸಸ್ತ್ರೀಕರಾಗಿ ಅಯೋಧ್ಯೆ ಯನ್ನು ಬಿಟ್ಟರು. ಕೆಲ ಅನುಗತ ನಿಷಾದರು ಸಾಮಾನ್ಯ ಗೃಹೋಪಕರಣ ಗಳನ್ನು ಹೊತ್ತುಕೊಂಡು ಮುಂದೆ ಮುಂದೆ ದಾರಿ ತೋರಿಸುತ್ತ ನಡೆದರು. ಮಾಸಾಧಿಕ ಕಾಲ ಅವರು ಅನೇಕ ಜನಪದ, ಗಿರಿ–ನದಿ, ವನಭೂಮಿಗಳನ್ನು ಅತಿಕ್ರಮಿಸಿ ಕೊನೆಗೆ ಹಿಮಾಲಯದ ಪ್ರಾಂತದೇಶದಲ್ಲಿ ಶತದ್ರೂ ತೀರದಲ್ಲಿ ರುವ ಒಂದು ರಮಣೀಯವಾದ ಉಪತ್ಯಕೆಗೆ ಬಂದಿಳಿದರು. ಜಾಬಾಲಿ ಅಲ್ಲಿ ಪರ್ಣಕುಟೀರವನ್ನು ರಚಿಸಿ ಸುಖದಿಂದ ವಾಸಮಾಡತೊಡಗಿದರು. ಪರ್ವತ– ವಾಸೀ ಕಿರಾತರು ಅವರ ವಿಶಾಲದೇಹ ನಿಬಿಡ ಶ್ಮಶ್ರು ಹಾಗು ಮಧುರ ಸದಯ ವ್ಯವಹಾರವನ್ನು ನೋಡಿ ಮುಗ್ಧರಾದರು. ಮತ್ತು ನಾನಾವಿಧ ವಾದ ಉಪಟೋಕನಸಪ್ಪಾರಾ ಸಂವರ್ಧನೆಯನ್ನು ಮಾಡಿದರು. ಜಾಬಾಲಿ ಅಲ್ಲಿ ವಿವಿಧ ದುರೂಹ ತತ್ತ್ವಸಮೂಹದ ಅನುಷ್ಠಾನದಲ್ಲಿ ನಿವಿಷ್ಟರಾದರು. ಹಾಗು ವಿರಾಮಕಾಲದಲ್ಲಿ ಶತದ್ರೂನದಿಯಲ್ಲಿ ಮತ್ಸ್ಯಗಳನ್ನು ಹಿಡಿ ಯುತ್ತ ಚಿತ್ತ ವಿನೋದನವನ್ನು ಮಾಡಿಕೊಳ್ಳಹತ್ತಿದ್ದರು.

* * * * *

ದೇವತೆಗಳ ಖ್ಯಾತಿಯಿದೆ, ಅವರು ಅಂತರ್ಯಾಮಿಗಳೆಂದು. ಆದರೆ ವಸ್ತುತಃ ಅವರಾದರೂ ಸಾಧಾರಣ ಜನರಂತೆ ಹಾರುಸುದ್ದಿಯ ಮೇಲೆ ಅವಲಂಬಿಸಿ ಕೆಲಸ ಮಾಡುವ ಪ್ರಸಂಗ ಬರುತ್ತದೆ. ಮತ್ತು ಆದರ ಫಲ ವಾಗಿ ಜಗತ್ತಿನಲ್ಲಿ ಅನೇಕ ಅವಿಚಾರಗಳು ಘಟಿಸುತ್ತವೆ. ಇಷ್ಟರಲ್ಲಿ ದೇವ ರಾಜ ಇಂದ್ರನ ಕಡೆಗೆ ಸಮಾಚಾರ ಹೋಯಿತು,–ಮಹಾತೇಜ ಜಾಬಾಲಿ

ಮುನಿಗಳು ಕಠೋರ ತಪಸ್ಸಿಯಲ್ಲಿ ನಿಮಗ್ನರಾಗಿದ್ದಾರೆ. ಅವರ ಅಭಿಸಂಧಿ ಯೇನೆಂಬುದು ಇನ್ನೂ ಸಮ್ಯಕ್ ಅವಧಾರಿತವಾಗಿಲ್ಲ. ಆದರೂ ಸಂಭವತ್ಃ ಅವರು ಇಂದ್ರತ್ವ, ವಿಷ್ಣುತ್ವ ಅಥವಾ ಈ ತರದ ಮತ್ತಾವುದಾದರೂ ಪರಮ ಪದವನ್ನು ದೊರಕಿಸದೆ ಬಿಡರು. – ದೇವೇಂದ್ರನು ಚಿಂತಿತನಾಗಿ ಆಜ್ಞಾಪಿಸಿದ. " ಕರೆಯಿರಿ ಊರ್ವಶಿಯನ್ನು "

ಮಾತಾಲಿ ಬಂದು ಕೈಜೋಡಿಸಿ ನಿವೇದನ ಮಾಡಿದ. " ಹೇ ದೇವೇಂದ್ರ, ಊರ್ವಶಿಯು ಇನ್ನು ಮರ್ತ್ಯಲೋಕದಲ್ಲಿ ಅವತೀರ್ಣಳಾಗಲು ಇಚ್ಛಿಸುವದಿಲ್ಲ. "

ಇಂದ್ರನೆಂದ. "ಹೂಂ, ಅವಳು ಇಷ್ಟು ವಿರಿಕೊಂಡು ಕುಳಿತಿರುವಳೊ ?"

ಮಹರ್ಷಿ ನಾರದರೆಂದರು. " ಮರ್ತ್ಯಲೋಕದ ಕವಿಗಳೇ ಅವಳನ್ನು ಸ್ತುತಿಸಿ ಸ್ತುತಿಸಿ ಅವಳ ತಲೆ ಕೆಡಿಸಿದ್ದಾರೆ. ಇನ್ನು ಕೆಲವು ದಿನ ಅವಳಿಗೆ ವಿರಾಮ ಕೊಡಬೇಕು. ಕೆಲವು ದಿನ ಅಮರಾವತಿಯಲ್ಲಿ ಆಬದ್ಧಳಾದಳೆಂದರೆ ಮರ್ತ್ಯಲೋಕಕ್ಕೆ ಓಡಲು ತಾನಾಗಿ ದುಂಬಾಲು ಬೀಳುವಳು. ಜಾಬಾಲಿ–ಗಾಗಿ ಮತ್ತೆ ಯಾವಳಾದರೂ ಅಪ್ಸರೆಯನ್ನು ಕಳಿಸು. "

**ಮಾತಾಲಿ:**— ಮೇನಕೆಯು ತನ್ನ ಮಗಳನ್ನು ನೋಡಲಿಕ್ಕೆ ಹೋಗಿದ್ದಾಳೆ. ಅಶ್ವಿನೀಕುಮಾರದ್ವಯರು ತಿಲೋತ್ತಮೆಯು ಇನ್ನೂ ಎರಡು ಮೂರು ತಿಂಗಳ ಹೊರಬೀಳಬಾರದೆಂದು ಹೇಳಿದ್ದಾರೆ. ಅಲಂಬುಷೆಯ ಕಾಲು ಒಳದಿದೆ, ಕುಣಿಯಲಾರಳು. ಅಷ್ಟಾವಕ್ರ ಮುನಿಗಳು ದೇವತೆಗಳ ವಿರುದ್ಧ ಮಣಿದು ಕುಳಿತಿದ್ದಾರೆ. ರಂಭಾ ಅವರನ್ನು ನೆಟ್ಟಗೆ ಮಾಡಲು ಹೋಗಿದ್ದಾಳೆ. ನಾಗದತ್ತಾ, ಹೇಮಾ, ಸೋಮಾ ಮೊದಲಾದ ಮೂರು ನೂರು ಅಪ್ಸರೆಯರನ್ನು ಲಂಕೇಶ್ವರ ರಾವಣನು ಅಪಹರಿಸಿಕೊಂಡು ಹೋಗಿದ್ದಾನೆ. ಇನ್ನುಳಿದವರು ಇಬ್ಬರೇ. ಮಿಶ್ರಕೇಶೀ ಮತ್ತು ಘೃತಾಚೀ.

ಇಂದ್ರ ಸಿಟ್ಟಿಗೆದ್ದು ಅಂದ. " ನನಗೆ ತಿಳಿಸದೆ ಅಪ್ಸರೆಯರನ್ನು ಯತ್ರತತ್ರ ಅದೇಕೆ ಕಳಿಸಿದಿರಿ ? ಮಿಶ್ರಕೇಶೀ ಘೃತಾಚಿಯರಿಗೆ ವಯಸ್ಸಾಗಿದೆ. ಅವರಿಂದ ಏನೂ ಆಗದು. "

ನಾರದರೆಂದರು. " ಹೇ ಇಂದ್ರ, ಅದಕ್ಕಾಗಿ ನೀನು ಚಿಂತಿಸಬೇಡ.

ಜಾಬಾಲಿಯೂ ತರುಣನಲ್ಲ. ಗೃಹಿಣೀ – ವಾಹಿನೀ – ಜಾತೀಯಾ ಅಪ್ಸರೆಯರೆ ಅವನನ್ನು ವಶಪಡಿಸಿಕೊಳ್ಳಬಲ್ಲರು. ''

ಇಂದ್ರನೆಂದ. '' ಮಿಶ್ರಕೇಶಿಯ ಕೂದಲು ಬೆಳ್ಳಗಾಗಿದೆ. ಅವಳು ಬೇಡ. ಘೃತಾಚಿಯನ್ನೆ ಕಳುಹುವ ವ್ಯವಸ್ಥೆ ಮಾಡು. ಅವಳಿಗೊಂದು ಸೂಕ್ಷ್ಮ ಚೀನಾಂಶುಕವನ್ನೂ ಯಥೋಪಯುಕ್ತ ಅಲಂಕಾರಾದಿಗಳನ್ನೂ ಕೊಡು. ವಾಯೂ, ನೀನು ಮಂದಮಂದವಾಗಿ ವಹಿಸು. ಶಶಧರ, ನೀನು ಮಂದಾಕಿನಿಯಲ್ಲಿ ಸ್ನಾನಮಾಡಿ ಉಜ್ವಲನಾಗು. ಕಂದರ್ಪ, ನೀನು ಆ ಅಭ್ರಕ ಪೋಷಾಕನ್ನು ಧರಿಸಿಕೊಂಡು ಹೋಗು; ಮತ್ತೆ ಭಸ್ಮವಾಗುವ ಪ್ರಸಂಗ ಬೇಡ. ವಸಂತ, ನಿನ್ನ ಸಂಗಡ ನೂರು ಕೋಗಿಲೆಗಳನ್ನು ಕರೆದುಕೊಂಡು ಹೋಗು. ''

ನಾರದರೆಂದರು. '' ಮತ್ತೆ ಒಂದು ನೂರು ವನಕುಕ್ಕುಟ. ಋಷಿಗೆ ಅವುಗಳ ಮೇಲೆ ಬಹಳ ಪ್ರೀತಿ. ''

ಇಂದ್ರನೆಂದ. '' ಒಳ್ಳೇದು, ಅವುಗಳನ್ನೂ ತೆಗೆದುಕೊಂಡು ಹೋಗಲಿ ಇದಲ್ಲದೆ ದಶಕುಂಭ ಘೃತ, ದಶಸ್ಥಾಲೀ ದಧಿ, ದಶದ್ರೋಣೀ ಗುಡ. ಹಾಗು ಅನ್ಯಾನ್ಯ ಭೋಜ್ಯಸಂಭಾರ. ಹೇಗಾದರೂ ಮಾಡಿ ಜಾಬಾಲಿಯ ಧ್ಯಾನಭಂಗವನ್ನು ಮಾಡಲೇಬೇಕು. ''

ಎಲ್ಲ ಸಿದ್ಧತೆಯೂ ಆದಬಳಿಕ ಘೃತಾಚಿಯು ಜಾಬಾಲಿ–ವಿಜಯ ಯಾತ್ರೆಗೆ ಹೊರಟಳು.

* * * * *

ಜಾಬಾಲಿ ಮಹರ್ಷಿಗಳ ತಪೋವನದಲ್ಲಿ ಆಗ ಭಯಂಕರ ಮಳೆ. ಮೇಘಗಳೂ ಪರ್ವತಗಳೂ ಏಕಾಕಾರವಾಗಿ ದಿಗಂತದಲ್ಲಿ ನಿಬಿಡ ಪ್ರಾಚೀರವನ್ನು ರಚಿಸಿವೆ. ಶತದ್ರುವಿನ ಗೈರಿಕವರ್ಣದ ಜಲದಲ್ಲಿ ಮತ್ಸ್ಯಗಳು ಹಿಂಡುಹಿಂಡಾಗಿ ಸಂಚರಿಸುತ್ತಿವೆ. ವನದಲ್ಲಿ ಭೇಕವಂಶದ ಚತುರ್ಮಹರ ವ್ಯಾಪೀ ಮಹೋತ್ಸವವು ನಡೆದಿದೆ.

ಸಂಜೆಯ ಮುಂದೆ ಘೃತಾಚಿಯು ಅನುಚರರೊಡನೆ ಜಾಬಾಲಿಯ ಆಶ್ರಮವನ್ನು ಮುಟ್ಟಿದಳು. ಆಕ್ರಮಣದ ಉದ್ಯೋಗವನ್ನು ಮಾಡಲು ಅವರಿಗೆ ಕಿಂಚಿದಪಿ ವಿಲಂಬವಾಗಲಿಲ್ಲ. ಏಕೆಂದರೆ ಬಹಳ ನಾರೆ ಹೀಗೆ ಅಭಿ–

ಮಾನವಮಾಡಿ ಅವರು ಅನುಭವಿಕರಾಗಿದ್ದರು. ನಿಮಿಷಾರ್ಧದಲ್ಲಿ ಮೇಘಗಳು ದೂರಾದವು. ಮಲಯಾನಿಲನು ಸುಳಿಯತೊಡಗಿದನು. ಶತದ್ರುವಿನ ಪ್ರವಾಹವು ಮಂದೀಭೂತವಾಯಿತು. ನಿರ್ಮಲ ಆಕಾಶದಲ್ಲಿ ಪೂರ್ಣಚಂದ್ರನು ಉದಯಿಸಿದನು. ಪಾದಪರಾಶಿಯು ಪುಷ್ಪಸ್ತಬಕದಿಂದ ಭೂಷಿತವಾಯಿತು. ಅಲಿಕುಲವು ಗುಂಜಾರವ ಮಾಡತೊಡಗಿತು. ಭೇಕಗಣವು ಸ್ತಬ್ಧವಾಗಿ ಪಲ್ವಲದಲ್ಲಿ ಅಡಗಿತು.



... ... ದಿವ್ಯಾಂಗನೆಯು ನೃತ್ಯ ಮಾಡುತ್ತಿದ್ದಾಳೆ.

ಆಗ ಜಾಬಾಲಿ ಶತದ್ರೂತೀರದಲ್ಲಿ ಕೈಯಲ್ಲಿ ಗಾಳ ಹಿಡಿದುಕೊಂಡು ಏಕಧ್ಯಾನರಾಗಿ ಮೀನಗಳನ್ನು ಹಿಡಿಯುತ್ತಿದ್ದರು. ಆಕಸ್ಮಿಕವಾದ ಈ ಪ್ರಾಕೃತಿಕ ವಿಪರ್ಯಯದಿಂದ ಅವರು ನಾಲ್ಕೂ ದಿಕ್ಕುಗಳಲ್ಲಿ ನೋಡತೊಡಗಿದರು. ಸಹಸಾ ಋತುರಾಜ ವಸಂತನ ಎಳೆತದಿಂದ ನಿದ್ರಾತುರ ಕೋಕಿಲ

ಕುಲವು ಆಕುಲಚೀತ್ಕಾರವನ್ನು ಆರಂಭಿಸಿತು. ಜಾಬಾಲಿ ಆಶ್ಚರ್ಯದಿಂದ ಹಿಂದಿರುಗಿ ನೋಡಿದರು, ಒಬ್ಬ ಅಪೂರ್ವ ಲಾವಣ್ಯವತಿಯಾದ ದಿವ್ಯಾಂಗನೆಯು ನೃತ್ಯ ಮಾಡುತ್ತಿದ್ದಾಳೆ; ಕಟಿತಟದಲ್ಲಿ ವಾಮಕರ, ಗದ್ದದ ಮೇಲೆ ದಕ್ಷಿಣ ಕರ.

ಧೀಮಂತರಾದ ಜಾಬಾಲಿಋಷಿಗಳು ಸಮಸ್ತ ಉಪದ್ವ್ಯಾಪವನ್ನು ತಟ್ಟನೆ ತಿಳಿದುಕೊಂಡರು. ಈಷತ್ ಹಾಸ್ಯದಿಂದ ನುಡಿದರು. " ಅಯಿ



... ... ಆಶ್ಚರ್ಯದಿಂದ ಹಿಂದಿರುಗಿ ನೋಡಿದರು.

ವರಾಂಗನೆ, ನೀನು ಯಾರು ? ಅದಾವ ನಿಮಿತ್ತದಿಂದ ಈ ದುರ್ಗಮ, ಜನಶೂನ್ಯ ಉಪತ್ಯಕೆಗೆ ಬಂದಿರುವಿ ? ನೀನು ನೃತ್ಯವನ್ನು ನಿಲ್ಲಿಸು. ಈ ಸೈಕತ ಭೂಮಿಯು ಬಹಳ ಜಾರುತ್ತದೆ; ಉಪಲಸಂಕುಲವಾಗಿದೆ. ಎಡವಿ ಬಿದ್ದಿಯಾದರೆ ನಿನ್ನ ಈ ಕೋಮಲ ಅಸ್ಥಿಗಳು ಚೂರುಚೂರಾದಾವು ! "

ಅಪಾಂಗದಲ್ಲಿ ವಿಲೋಲಕಟಾಕ್ಷವನ್ನು ಬೀರಿ ಘೃತಾಚಿಯು ನುಡಿದಳು. " ಹೇ ಋಷಿಶ್ರೇಷ್ಠ, ನಾನು ಘೃತಾಚೀ, ಸ್ವರ್ಗಾಂಗನೆ. ನಿನ್ನನ್ನು ನೋಡಿ ವಿಮೋಹಿತಳಾಗಿದ್ದೇನೆ. ಪ್ರಸನ್ನನಾಗು. ಈ ಸಮಸ್ತ ದ್ರವ್ಯ ಸಂಭಾರವು ನಿನ್ನದೆ. ಈ ಘೃತಕುಂಭ ದಧಿಸ್ಥಲೀ ಗುಡದ್ರೋಣಿಗಳೆಲ್ಲವೂ ನಿನ್ನವೇ. ನಾನೂ ನಿನ್ನವಳೆ. ನನ್ನದೆಲ್ಲವೂ....ಬಹಳ ಏನು ಹೇಳಲಿ...." ಇಷ್ಟೆಂದು ಲಜ್ಜಾವತೀ ಘೃತಾಚಿಯು ಕೊರಳನ್ನು ತಗ್ಗಿಸಿದಳು.

ಜಾಬಾಲಿ ಎಂದರು. " ಅಯಿ ಕಲ್ಯಾಣಿ, ನಾನು ದೀನ-ಹೀನ ವೃದ್ಧ ಬ್ರಾಹ್ಮಣನು. ಗೃಹಿಣಿಯೂ ಇದ್ದಾಳೆ. ನಿನ್ನ ತುಷ್ಟಿವಿಧಾನವನ್ನು ಮಾಡುವುದು ನನಗೆ ಸಾಧ್ಯಾತೀತವಾಗಿದೆ. ಅತಏವ ನೀನು ಇಂದ್ರಾಲಯಕ್ಕೆ ತಿರುಗಿ ಹೋಗು. ಅಥವಾ ಋಷಿಮುನಿಗಳ ವಿಷಯವಾಗಿ ನಿನಗೆ ಅಷ್ಟೊಂದು ಮೋಹವಿದ್ದರೆ ಅಯೋಧ್ಯೆಗೆ ಹೋಗು. ಅಲ್ಲಿ ಖರ್ವಟ ಖಲ್ವಾಟ ಖಲಿತಾದಿ ಮಹಾ ಮಹಾ ಮುನಿಗಳಿದ್ದಾರೆ. ಅವರಲ್ಲಿ ಯಾರು ಬೇಕಾದವರನ್ನು ನೀನು ನಿನ್ನ ತರ್ಜನೀಚಲನದಂತೆ ಕುಣಿಸಬಲ್ಲೆ. ಇನ್ನು ಇದಕ್ಕಿಂತ ಹೆಚ್ಚಿನ ಮಹತ್ವಾಕಾಂಕ್ಷೆಯಿದ್ದರೆ ಭಾರ್ಗವ ದುರ್ವಾಸ ಕೌಶಿಕ ಪ್ರಭೃತಿ ಅನಲ ಸಂಕಾಶ ಉಗ್ರತೇಜ ಮಹರ್ಷಿಗಳ ಬಿಂಕವನ್ನಿಳಿಸಿ ಯಶಸ್ವಿನಿಯಾಗು. ನನ್ನನ್ನು ಕ್ಷಮಿಸು."

ಘೃತಾಚಿಯೆಂದಳು. " ಹೇ ಜಾಬಾಲೆ, ನೀನು ನಿತಾಂತ ನೀರಸನಾಗಿರುವೆ. ನಿನ್ನ ಈ ವಿಪುಲದೇಹವನ್ನು ವಿಧಾತನು ಶುಷ್ಕ ಕಾಷ್ಠದಿಂದ ನಿರ್ಮಿಸಿರುವನೆ? ನೀನು ದೀನಹೀನನಾದರೇನಾಯಿತು? ನಾನು ನಿನಗೆ ಕುಬೇರನ ಐಶ್ವರ್ಯವನ್ನು ತಂದು ಕೊಡುವೆನು. ನಿನ್ನ ಬ್ರಾಹ್ಮಣಿಯನ್ನು ವಾರಣಾಸಿಗೆ ಅಟ್ಟಿಬಿಡು. ಅವಳು ನಿಶ್ಚಯವಾಗಿಯೂ ಲೋಲಾಂಗಿ, ವಿಗತ ಯೌವನಾ. ನನ್ನ ಕಡೆಗೆ ಒಂದಿಷ್ಟು ನೋಡು, ನಾನು ಚಿರಯೌವನಾ, ಸುದೇಹೀ, ಸುರೂಪಿ. ಊರ್ವಶಿ ಮೇನಕೆಯರು ಸಹ ನನ್ನನ್ನು ನೋಡಿ ಕಸಿವಿಸಿ ಪಡುತ್ತಾರೆ."

ಜಾಬಾಲಿ ನಕ್ಕು ನುಡಿದರು. " ಹೇ ಸುಂದರಿ, ಮನಸ್ಸಿಗೆ ಹಚ್ಚಿಕೊಳ್ಳಬೇಡ. ನೀನೇನು ಚಿಕ್ಕ ಕೂಸಲ್ಲ. ನಿನ್ನ ಮುಖದ ಲೋಧ್ರರೇಣುವನ್ನು

ಭೇದಿಸಿ ಕಾಣುವ ರೇಖೆ ಏನದು ? ನಿನ್ನ ಕಂಣುಗಳ ಮೂಲೆಯಲ್ಲಿ ಆ ಅಂಧಕಾರವೇನು ? ನಿನ್ನ ದಂತಪಂಕ್ತಿಗಳಲ್ಲಿಯ ಸಂದು ಏನದು ? ''

ಘೃತಾಚಿಯು ಕೋಪಯುಕ್ತಳಾಗಿ ಆಡಿದಳು. '' ಹೇ ಮೂರ್ಖ, ನೀನು ನಿಶ್ಚಯವಾಗಿಯೂ ಕಾಮಾಂಧನು. ಅಂತೆಯೇ ಹೀಗೆ ಮಾತಾಡುತ್ತಿರುವಿ. ಪಥಶ್ರಮದ ಕ್ಲಾಂತಿಯಿಂದ ನನ್ನ ಲಾವಣ್ಯವು ಸಮ್ಯಕ್ ಸ್ಫೂರ್ತಿಯನ್ನು ಹೊಂದದಾಗಿದೆ. ಬೆಳಗಾಗಲಿ, ನಾನು ಹಾಲಿನ ಕೆನೆ ಹಚ್ಚಿಕೊಂಡು ಸ್ನಾನ ಮಾಡುವೆ, ಆಗ ನೋಡಿದಿಯೆಂದರೆ ನಿನ್ನ ತಲೆ ತಿರುಗಿ ಹೋದೀತು '' ಹೀಗೆಂದು ಘೃತಾಚಿಯು ಮತ್ತೆ ನೃತ್ಯವನ್ನು ಆರಂಭಿಸಿದಳು.

ಅನತಿದೂರದಲ್ಲಿರುವ ದೇವದಾರು ವೃಕ್ಷದ ಮರೆಯಲ್ಲಿ ನಿಂತುಕೊಂಡು ಜಾಬಾಲಿಪತ್ನಿಯು ಎಲ್ಲವನ್ನೂ ನೋಡುತ್ತಿದ್ದಳು. ಘೃತಾಚಿಯು ದ್ವಿತೀಯಾವೃತ್ತಿ ನೃತ್ಯವನ್ನು ಆರಂಭಿಸಲು ಅವಳಿಗೆ ತಡೆಯಲು ಆಗಲಿಲ್ಲ. ಓಡಿ ಬಂದವಳೇ ಕೈಯಲ್ಲಿಯ ಸಮ್ಮಾರ್ಜನಿಯಿಂದ ಘೃತಾಚಿಯ ಬೆನ್ನಮೇಲೆ ಚೆನ್ನಾಗಿ ಹತ್ತೆಂಟು ಏಟು ಕೊಟ್ಟಳು.

ಆಗ ಕಂದರ್ಪ ಶಶಧರ ವಸಂತ ಮಲಯಾನಿಲರೆಲ್ಲರೂ ಮಹಾಭಯದಿಂದ ವ್ಯಾಕುಲರಾಗಿ ವೇಗದಿಂದ ಪಲಾಯನವನ್ನು ಹೇಳಿಸಿದರು. ಆಕಾಶವು ಮತ್ತೆ ಜಲದ ಜಾಲದಿಂದ ಆಚ್ಛನ್ನವಾಯಿತು. ದಿಙ್ಮಂಡಲವು ತಿಮಿರಾವೃತವಾಯಿತು. ಕೋಕಿಲಕುಲವು ತೂಕಡಿಸತೊಡಗಿತು. ಮಧುಕರನಿಕರವು ಉದ್ಭ್ರಾಂತವಾಗಿ ಪರಸ್ಪರ ದಂಶನ ಮಾಡತೊಡಗಿತು. ಶತದ್ರೂಸ್ಫೀತವಾಯಿತು. ಭೇಕಕುಲವು ಮಹಾ ಉಲ್ಲಾಸದಿಂದ ವಿಕಟಕೋಲಾಹಲವನ್ನೆಬ್ಬಿಸಿತು.

ಜಾಬಾಲಿ ಪತ್ನಿಗೆ ಹೇಳಿದರು. '' ಪ್ರಿಯೆ ಸ್ಥಿರಾ ಭವ. ಇವಳು ಸ್ವರ್ಗಾಂಗನಾ ಘೃತಾಚಿ. ಇಂದ್ರನ ಆದೇಶದಂತೆ ಇಲ್ಲಿಗೆ ಬಂದಿದ್ದಾಳೆ. ಇವಳ ಅಪರಾಧವಿಲ್ಲ. ''

ಹಿಂದ್ರಾಲಿನಿಯೆಂದಳು. '' ಹಲಾ ದಗ್ಧಾನನೆ, ನಿರ್ಲಜ್ಜೆ ಘಿತ್ತ್ರೀ, ಎಷ್ಟೇ ನಿನ್ನ ಸೊಕ್ಕು ! ಭೋಳೆ ಸ್ವಭಾವದವನೆಂದು ನನ್ನ ಪತಿಯನ್ನು ಮೋಸಗೊಳಿಸಲು ಬಂದಿರುವಿಯಲ್ಲವೆ ? ಅಲ್ಲದೆ ಭೋ ಅಜ್ಜಉತ, ಈ ಉತ್ಕಪಾಲೀ

ವಿಶಾಲಾಕ್ಷೀ ಮಹಾಪ್ರಾಪಿಸಿಯು ಕೂಡ ವಿಜನದಲ್ಲಿ ವಿಶ್ರಂಭಾಲಾಪ ಮಾಡಲು ನಿಮಗಾದರೂ ಹೇಗೆ ತಿಳಿಯಲಿಲ್ಲ?"

ಜಾಬಾಲಿ ಆಗ ಎಲ್ಲ ಕತೆಯನ್ನೂ ವಿವರಿಸಿ ಅತಿ ಪ್ರಯಾಸದಿಂದ ಪತ್ನಿಯ ಸಮಾಧಾನ ಮಾಡಿದರು. ಹಾಗು ರೋರುದ್ಯಮಾನಳಾದ ಘೃತಾಚಿಗೆ ಎಂದರು. "ವತ್ಸೇ ನೀನು ಶಾಂತಳಾಗು. ಹಿಂದಾವ್ರಲಿನಿಯು ನಿನ್ನ ಬೆನ್ನ ಮೇಲೆ ಇಂಗುದೀತೈಲವನ್ನು ಹಚ್ಚಿ ಮರ್ದಿಸುವಳು. ಅದರಿಂದ ನಿನ್ನ ವ್ಯಥೆಯು ಉಪಶಮವಾಗುವದು. ನೀನು ಈ ದಿನ ರಾತ್ರಿ ನಮ್ಮ ಕುಟೀರದಲ್ಲಿಯೆ ವಿಶ್ರಮಿಸು. ನಾಳೆ ಅಮರಾವತಿಗೆ ತಿರುಗಿ ಹೋಗಿ ದೇವರಾಜ ಇಂದ್ರನಿಗೆ ನನ್ನ ಪ್ರೀತಿ-ಸಂಭಾಷಣವನ್ನೂ ಘೃತ-ದಧಿ-ಗುಡಾದಿಗಳಿಗಾಗಿ ಅನೇಕ ಧನ್ಯವಾದಗಳನ್ನೂ ತಿಳಿಸು."

ಘೃತಾಚಿಯೆಂದಳು. "ಅವರು ನನ್ನ ಮುಖದರ್ಶನವನ್ನು ಸಹ ಮಾಡುವದಿಲ್ಲ. ಹಾ, ಇಂಥ ದುರ್ದಶೆಯು ಎಂದಿಗೂ ಆಗಿಲ್ಲಿಲ್ಲ!"

ಜಾಬಾಲಿ ಹೇಳಿದರು. "ನೀನೇನೂ ಭಯ ಪಡಬೇಡ. ನೀನು ದೇವೇಂದ್ರನಿಗೆ ತಿಳಿಸು, ಇಂದ್ರಪದದ ಲೋಭವು ನನಗೆ ಎಷ್ಟೂ ಇಲ್ಲವೆಂದು. ಅವನೇ ಸ್ವರ್ಗರಾಜ್ಯವನ್ನು ಸ್ವಚ್ಛಂದವಾಗಿ ಭೋಗಿಸಲಿ."

* * * * *

ಘೃತಾಚಿಯ ಪರಾಭವವನ್ನು ಕೇಳಿ ದೇವರಾಜ ಇಂದ್ರನು ನಾರದರಿಗೆ ಕೇಳಿದ. "ಹೇ ದೇವರ್ಷಿ, ಇನ್ನೇನು ಮಾಡಬೇಕು? ಜಾಬಾಲಿ ಇಂದ್ರಪದವನ್ನು ಇಚ್ಛಿಸುವದಿಲ್ಲವೆಂದು ತಿಳಿದರೂ ನಾನು ನಿಶ್ಚಿಂತನಾಗಲಾರೆ. ಆ ದುರ್ದಾಂತ ಋಷಿಯು ಸಮಸ್ತ ದೇವಜಾತಿಯನ್ನೇ ಹಾರಿಸಬೇಕೆಂದು ಮಾಡಿದ್ದಾನೆಂದು ಜನರವವನ್ನು ಕೇಳಿದ್ದೇನೆ."

ನಾರದರೆಂದರು. "ಪುರಂದರ, ನೀನು ಚಿಂತಿಸಬೇಡ. ನಾನು ಯಥೋಚಿತ ವ್ಯವಸ್ಥೆ ಮಾಡುವೆನು."

* * * * *

ನೈಮಿಷಾರಣ್ಯದಲ್ಲಿ ಸನಕಾದಿ ಮಹರ್ಷಿಗಳ ಕಡೆಗೆ ದೇವರ್ಷಿ ನಾರದರು ಬಂದು ಜಿಜ್ಞಾಸೆ ಮಾಡಿದರು. "ಹೇ ಮುನಿಮಹಾಶಯರೆ, ಶಾಸ್ತ್ರಗಳಲ್ಲಿ ಉಕ್ತವಾಗಿದೆ-ಸತ್ಯಯುಗದಲ್ಲಿ ಪುಣ್ಯವು ಚತುಷ್ಪಾದ, ಪಾಪ ನಾಸ್ತಿ

ಎಂದು. ಕಿಂತು ಈ ತ್ರೇತಾಯುಗದಲ್ಲಿ ಪುಣ್ಯವು ತ್ರಿಪಾದ ಮಾತ್ರ ಹಾಗು ಏಕಪಾದ ಪಾಪವೂ ಕಂಡುಬರುತ್ತಿದೆ. ಇದರ ಕಾರಣವೇನೆಂಬುದನ್ನು ವಿಚಾರಮಾಡಿ ನೋಡಿರುವಿರಾ ? ''

ಮುನಿವೃಂದವೆಂದಿತು. '' ಆಶ್ಚರ್ಯ, ಈ ವಿಚಾರವಿನ್ನೂ ನಮ್ಮ ತಲೆಯಲ್ಲಿ ಬಂದಿಲ್ಲವಲ್ಲ ! ''



... ... ಅದೇಕೆ ವಾಗ್ವಿತಂಡೆಯನ್ನು ಮಾಡುವಿರಿ ? ( ಪುಟ. ೮೮ )

ನಾರದರೆಂದರು. '' ಹಾಗಾದರೆ ಈ ನಿಮ್ಮ ಯಜ್ಞ-ಯಾಗ ಜಪ-ತಪಗಳೆಲ್ಲವೂ ವ್ಯರ್ಥ. ಹೀಗೆಂದು ಅವರು ತಮ್ಮ ಕಾಷ್ಠವಾಹನದ ಮೇಲೆ ಆರೋಹಣ ಮಾಡಿ ಮತ್ತೊಂದು ಕಾರಸ್ಥಾನವನ್ನು ಹೂಡಲು ಬ್ರಹ್ಮನ ಕಡೆಗೆ ಹೊರಟರು.

ನಾರದೀಯ ಪ್ರಶ್ನೆಯ ಮೀಮಾಂಸೆಯನ್ನು ಮಾಡಲು ಮುನಿಗಣಕ್ಕೆ

ಆಗದಿರಲು ಅವರೊಂದು ಮಹತೀ ಸಭೆಯನ್ನು ಆಹ್ವಾನ ಮಾಡಿದರು. ಜಂಬೂ ಪ್ಲಕ್ಷ ಶಾಲ್ಮಲೀ ಪ್ಲವಾದಿ ಸಪ್ತದ್ವೀಪಗಳಿಂದ ವಿವಿಧ ಶಾಸ್ತ್ರಜ್ಞ ವಿಪ್ರಸಮೂಹವು ನೈಮಿಷಾರಣ್ಯದಲ್ಲಿ ಸಮವೇತವಾಯಿತು. ಮಹರ್ಷಿ ಜಾಬಾಲಿಗಳೂ ಆಮಂತ್ರಿತರಾಗಿ ಬಂದರು.

ಸಕಲರೂ ಆಸನ ಗ್ರಹಣಮಾಡಿದ ನಂತರ ಸಭಾಪತಿ ದಕ್ಷಪ್ರಜಾಪತಿಗಳು ಭಾಷಣವನ್ನು ಆರಂಭಿಸಿದರು. "ಭೋಃ ಪಂಡಿತ ಮಹಾಶಯಾಃ, ಸತ್ಯಯುಗದಲ್ಲಿ ಪುಣ್ಯವು ಚತುಷ್ಪಾದವಾಗಿತ್ತು; ಈಗ ಅದು ತ್ರಿಪಾದವಾಗಿದೆ. ಅದು ಹೀಗೇಕೆ ಆಯಿತು, ಮತ್ತು ಅದರ ಪ್ರತೀಕಾರವನ್ನು ಮಾಡುವದೆಂತು, ಎಂಬ ವಿಷಯವು ನಿಮಗೇನಾದರೂ ಅವಗತವಿದ್ದರೆ ಪ್ರಕಟವಾಗಿ ಹೇಳೋಣಾಗಲಿ."

ಆಗ ಜ್ವಲಂತ ಪಾವಕತುಲ್ಯ ತೇಜಸ್ವೀ ಜಾಮದಗ್ನ್ಯ ಮುನಿಗಳು ಎದ್ದು ಹೇಳಿದರು. "ಹೇ ಪ್ರಜಾಪತೆ, ಈ ಪಾಪಾತ್ಮಾ ಜಾಬಾಲಿಯೆ ಸಮಸ್ತ ಪಾಪದ ಮೂಲ. ಈತನ ಸಂಸ್ಪರ್ಶದಿಂದ ವಸುಂಧರೆಯು ಭಾರಗ್ರಸ್ತಳಾಗಿದ್ದಾಳೆ."

ಸಭಾಸ್ಥ ಪಂಡಿತಮಂಡಲಿಯೆಂದಿತು. "ಸರಿ ಸರಿ, ನಾವು ಇದನ್ನು ಅನೇಕ ದಿನಗಳಿಂದ ಬಲ್ಲೆವು."

ಜಾಮದಗ್ನ್ಯರೆಂದರು. "ಈ ಜಾಬಾಲಿಯು ಭ್ರಷ್ಟಾಚಾರಿ, ಉನ್ಮಾರ್ಗಗಾಮಿ, ನಾಸ್ತಿಕ. ಈತನಿಗೆ ಶಾಸ್ತ್ರವಿಲ್ಲ, ಮಾರ್ಗವಿಲ್ಲ. ಇದೇ ಪಾಷಂಡನು ರಾಮಚಂದ್ರನನ್ನು ಸತ್ಯಧರ್ಮಚ್ಯುತನಾಗಿ ಮಾಡಲು ಪ್ರಯತ್ನಿಸಿದ್ದನು. ಇದೇ ದುರಾತ್ಮನು ವಾಲಖಿಲ್ಯರನ್ನು ಹೊರಕ್ಕೆ ಅಟ್ಟಿದ್ದನು. ದೇವರಾಜ ಪುರಂದರನನ್ನೂ ಹಾಸ್ಯಾಸ್ಪದನಾಗಿ ಮಾಡಿದವನು ಇದೇ ದುರಾತ್ಮನು. ಈತನನ್ನು ವಧಮಾಡದೆ ಪುಣ್ಯದ ನಷ್ಟಪಾದವು ಉದ್ಧಾರವಾಗಲಾರದು."

ಪಂಡಿತವೃಂದವೆಂದಿತು. "ಈ ಅಭಿಪ್ರಾಯವು ಸರ್ವಥಾ ಸಾಧುವಾಗಿದೆ. ನಾವಾದರೂ ಇದನ್ನೇ ಯೋಚಿಸುತ್ತಿದ್ದೆವು."

ದಕ್ಷಪ್ರಜಾಪತಿಗಳೆಂದರು. "ಹೇ ಜಾಬಾಲೆ, ಸತ್ಯವಾಗಿಯೂ ಹೇಳು, ನೀನು ನಾಸ್ತಿಕನಹುದೊ ಅಲ್ಲವೊ? ನಿನ್ನ ಮಾರ್ಗವಾವುದು? ಶಾಸ್ತ್ರವಾದರೂ ಆವುದು?"

ಜಾಬಾಲಿ ಉತ್ತರ ಕೊಟ್ಟರು. ''ಹೇ ಸುಧೀವೃಂದ, ನಾನು ಆಸ್ತಿಕನೋ ನಾಸ್ತಿಕನೋ ಎಂಬುದು ನನಗೇ ಗೊತ್ತಿಲ್ಲ. ದೇವತೆಗಳಿಗೆ ನಾನು ಶರಣು ಹೊಡೆದಿದ್ದೇನೆ. ನನ್ನ ತುಚ್ಛ ಅಭಾವ ಅಭಿಯೋಗಗಳನ್ನು ತಿಳಿಸಿ ನಾನು ಅವರಿಗೆ ತೊಂದರೆ ಕೊಡಲಾರೆ. ವಿಧಾತನು ನನಗೆ ಕೊಟ್ಟ ಸಾಮಾನ್ಯ ಬುದ್ಧಿಯ ಬಲದಿಂದ ಅಂತೂ ಇಂತೂ ನನ್ನ ಕೆಲಸವನ್ನು ಸಾಗಿಸಿಕೊಂಡು ಹೋಗುವೆನು. ನನ್ನ ಮಾರ್ಗ ಯತ್ರ ತತ್ರ; ನನ್ನ ಶಾಸ್ತ್ರ ಅನಿತ್ಯ, ಪೌರುಷೇಯ, ಪರಿವರ್ತನ ಸಹ. ''

ದಕ್ಷರೆಂದರು. '' ನಿನ್ನ ಮಾತಿನ ತಲೆ-ಕಾಲು ಏನೂ ತಿಳಿಯಲಿಲ್ಲ. ''

ಜಾಬಾಲಿ ನುಡಿದರು. '' ಹೇ ಕುರುಡಲೆ ದಕ್ಷ, ನೀನು ತಿಳಿದುಕೊಳ್ಳುವ ವ್ಯರ್ಥ ಪ್ರಯಾಸವನ್ನು ಮಾಡಬೇಡ. ನಾನೀಗ ಹೊರಟೆ. ವಿಪ್ರರೆ, ನಿಮಗೆ ಜಯವಾಗಲಿ. ''

ಆಗ ಸಭೆಯಲ್ಲಿ ಭೀಷಣ ಕೋಲಾಹಲವೆದ್ದಿತು. ಧರ್ಮಪ್ರಾಣ ವಿಪ್ರ-ಸಮುದಾಯವು ಕ್ರೋಧದಿಂದ ಕ್ಷಿಪ್ತವಾಯಿತು. ಕೆಲವರು ಓಡಿಹೋಗಿ ಜಾಬಾಲಿ ಋಷಿಗಳನ್ನು ಹಿಡಿದುಕೊಂಡು ಬಂದರು. ಜಾಮದಗ್ನ್ಯರು ತಮ್ಮ ತೀಕ್ಷ್ಣ ಕುಠಾರವನ್ನೆತ್ತಿ ಗರ್ಜಿಸಿದರು. ''ನಾನು ಇಪ್ಪತ್ತೊಂದು ಸಾರೆ ಕ್ಷತ್ರಿಯ ಕುಲವನ್ನು ನಿಃಶೇಷ ಮಾಡಿರುವೆನು. ಈ ಸಾರೆ ಈ ನಾಸ್ತಿಕನನ್ನು ಕೊಂದುಹಾಕುವೆನು.''

ಸ್ಥಿರಪ್ರಜ್ಞ ದಕ್ಷಪ್ರಜಾಪತಿಗಳು ಅಷ್ಟರಲ್ಲಿ ಎದ್ದುಬಂದು ತಡೆದರು. '' ಹಾಂ ಹಾಂ ಇದೇನು, ಬ್ರಾಹ್ಮಣನ ದೇಹದ ಮೇಲೆ ಅಸ್ತ್ರಘಾತವೆ? ಛೀ ಛೀ, ಮನು ಮಹರ್ಷಿಗಳು ಮನದಲ್ಲಿ ಏನು ತಿಳಿದಾರು? ಅದಕ್ಕಿಂತ ಜಾಬಾಲಿಯನ್ನು ಹಲಾಹಲ ಪ್ರಯೋಗದಿಂದ ವಧಿಸಿರಿ '' ಎಂದರು ಅವರು.

ದೇವರ್ಷಿ ನಾರದರು ಇಷ್ಟು ಹೊತ್ತು ಮರೆಯಲ್ಲಿ ಕುಳಿತಿದ್ದರು. ಅವರೀಗ ಆತ್ಮಪ್ರಕಾಶಮಾಡಿ ಹೇಳಿದರು. ''ನನ್ನ ಹತ್ತಿರ ವಿಶುದ್ಧ ಚೈನಿಕ ಹಲಾಹಲವಿದೆ. ಆದರೆ, ಸರ್ಷಪಪ್ರಮಾಣ ಸೇವನೆಯಿಂದ ದಿವ್ಯಜ್ಞಾನದ ಲಾಭವಾಗುವದು. ಎರಡು ಸರ್ಷಪದಿಂದ ಬುದ್ಧಿಭ್ರಂಶ; ಚತುರ್ಮಾತ್ರೆಗಳಿಂದ ನರಕಭೋಗ, ಅಷ್ಟಮಾತ್ರೆಗಳಿಂದ ಮೋಕ್ಷಲಾಭವಾಗುತ್ತದೆ. ಜಾಬಾಲಿಗೆ ಚತುರ್ಮಾತ್ರೆಗಳನ್ನು ಹಾಕಿರಿ. ಎಚ್ಚರ, ಹೆಚ್ಚಿಗೆಯಾಗದಿರಲಿ.''

ಮಹಾಚೀನದಿಂದ ತಂದ ಕೃಷ್ಣವರ್ಣದ ಹಲಾಹಲವನ್ನು ಸೀಸದಲ್ಲಿ ತುಂಬಿ ಜಾಬಾಲಿಗಳಿಗೆ ಬಲಪೂರ್ವಕವಾಗಿ ಕುಡಿಸಲಾಯಿತು. ಆ ಮೇಲೆ ಅವರನ್ನು ಘೋರಾರಣ್ಯದಲ್ಲಿ ಚೆಲ್ಲಿ ತ್ರಿಲೋಕದರ್ಶೀ ಪಂಡಿತರೆಂದರು. “ಮಹಾಪಂಡಿತನೀಗ ಕುಂಭೀಪಾಕವನ್ನು ಮುಟ್ಟಿದ್ದಾನೆ.”

* * * * *

ಚೈನಿಕ ಹಲಾಹಲವು ಜಾಬಾಲಿಗಳ ಮಸ್ತಿಷ್ಕದಲ್ಲಿ ಕ್ರಮಶಃ ಪ್ರಭಾವವನ್ನು ವಿಸ್ತರಿಸತೊಡಗಿತು.

ಜಾಬಾಲಿ ಯಜ್ಞದ ನಿಮಂತ್ರಣೆಯಲ್ಲಿ ಎಷ್ಟೋ ಸಾರೆ ಸೋಮರಸವನ್ನು ಪಾನಮಾಡಿದ್ದರು. ಪ್ರಥಮ ಯೌವನದಲ್ಲಿ ವಯಸ್ಕರಾದ ಕ್ಷತ್ರಿಯ ಕುಮಾರರ ಸಂಗತಿಗೆ ಬಿದ್ದು ಗೌಡೀ ಮಾಧ್ವೀ ಪೈಷ್ಟೀ ಮೊದಲಾದ ಆಸವಗಳ ರುಚಿಯನ್ನೂ ನೋಡಿದ್ದರು. ಬಾಲ್ಯದಲ್ಲಿ ಸೋದರಮಾವನ ಮನೆಯಲ್ಲಿ ಒಂದು ಸಾರೆ ಭೃಗುಮಾವನ ಕೂಡ ಕದ್ದು ಫೇನಿಲ ತಾಲರಸವನ್ನಾದರೂ ಕುಡಿದಿದ್ದರು. ಆದರೆ ಇಂತಹ ಪ್ರಚಂಡ ನಶೆಯು ಎಂದಿಗೂ ಆಗಿರಲಿಲ್ಲ. ಅವರ ಸಕಲಾಂಗಗಳೂ ನಿಶ್ಚಲವಾದವು. ತಾಲೂ ಶುಷ್ಕವಾಯಿತು. ಕಣ್ಣು ಮೇಲಕ್ಕೆದ್ದವು. ಬಾಹ್ಯಜ್ಞಾನವು ಲೋಪವಾಯಿತು.

ಸಹಸಾ ಜಾಬಾಲಿ ಅನುಭವಿಸಿದರು. ಅವರು ರಕ್ತಚಂದನ ಚರ್ಚಿತರಾಗಿ ರಕ್ತಮಾಲೆಯನ್ನು ಧರಿಸಿ ಗರ್ದಭ-ಯೋಜಿತ ರಥದಲ್ಲಿ ದಕ್ಷಿಣಾಭಿಮುಖರಾಗಿ ದ್ರುತವೇಗದಿಂದ ನೀಯಮಾನರಾಗುತ್ತಿದ್ದಾರೆ. ರಕ್ತವಸನಾ ಪಿಂಗಲವರ್ಣಾ ಕಾಮಿನಿಯು ಅವರನ್ನು ನೋಡಿ ನಗುತ್ತಿದ್ದಾಳೆ, ಹಾಗು, ವಿಕೃತವದನಾ ರಾಕ್ಷಸಿಯು ಅವರ ರಥವನ್ನು ಎಳೆಯುತ್ತಿದ್ದಾಳೆ. ಕ್ರಮವಾಗಿ ವೈತರಣಿಯನ್ನು ದಾಟಿ ಅವರು ಯಮಪುರಿಯ ದ್ವಾರಕ್ಕೆ ಬಂದರು. ಅಲ್ಲಿ ಯಮಕಿಂಕರರು ಅವರ ಸ್ವಾಗತವನ್ನು ಮಾಡಿ ಧರ್ಮರಾಜನ ಕಡೆಗೆ ಕರೆದುಕೊಂಡು ಹೋದರು.

ಯಮನೆಂದ. “ಜಾಬಾಲೆ, ಸ್ವಾಗತೋಽಸಿ; ನಾನು ಬಹುದಿನಗಳಿಂದ ನಿನ್ನ ಪ್ರತೀಕ್ಷೆಯನ್ನು ಮಾಡುತ್ತಿದ್ದೆನು. ನಿನ್ನ ಪಾರಲೌಕಿಕ ವ್ಯವಸ್ಥೆಯನ್ನು ನಾನು ಯಥೋಚಿತವಾಗಿ ಮಾಡಿಟ್ಟಿದ್ದೇನೆ. ಈಗ ನೀನು ನನ್ನನ್ನು ಹಿಂಬಾಲಿಸು. ಅದೋ, ದೂರದಲ್ಲಿ ಕಾಣುವ ಘೋರಕೃಷ್ಣವರ್ಣದ, ಗವಾಕ್ಷ

ಹೀನವಾದ ಅಗ್ನ್ಯುದ್ಗಾರಿಯಾದ ಆ ಸೌಧಮಾಲೆಯೇ ರೌರವವು. ಇತರ ಪ್ರಕೃತಿ ಪಾಪಿಗಳು ಅಲ್ಲಿರುತ್ತಾರೆ. ಸಮ್ಮುಖದಲ್ಲಿ ಕಾಣುವ ಈ ಗಗನ ಚುಂಬೀ ತಾಮ್ರಜಾತ ರಕ್ತವರ್ಣ – ಅಲಿಂದ – ಪರಿವೇಷ್ಟಿತ ಆಯತನವೇ ಕುಂಭೀಪಾಕವು. ಪ್ರತಿಷ್ಠಿತ ಜನರು ಅಲ್ಲಿ ವಾಸಮಾಡುತ್ತಾರೆ. ನಿನ್ನ ಸ್ಥಾನವು ಇಲ್ಲಿಯೇ ನಿರ್ದಿಷ್ಟವಾಗಿದೆ. ಒಳಗೆ ನಡೆ.''

ಅನಂತರ ಯಮಧರ್ಮರಾಜನು ಜಾಬಾಲಿಯನ್ನು ಕುಂಭೀಪಾಕದ ಗರ್ಭಮಂಡಪದಲ್ಲಿ ಕರೆದುಕೊಂಡು ಹೋದನು. ಈ ಮಂಡಪವು ಬಹು ಯೋಜನವಿಸ್ತೃತವಾದುದು, ಉಚ್ಚ ಛಾದವಾದುದು, ಬಾಷ್ಪನಮಾಕುಲ ವಾದುದು, ಗಭೀರ ಆರವದಿಂದ ನಿಧೂನಿತವಾದುದು. ಉಭಯ ಪಾರ್ಶ್ವ ಗಳಲ್ಲಿ ಉರಿಯುತ್ತಿರುವ ಒಲೆಗಳ ಮೇಲೆ ಪ್ರಚಂಡ ಕುಂಭಗಳು ಶ್ರೇಣೀ ಬದ್ಧವಾಗಿ ಇರಿಸಲಾಗಿವೆ. ಅವುಗಳೊಳಗಿಂದ ನಿರಂತರವಾಗಿ ಶ್ವೇತವರ್ಣ ಬಾಷ್ಪವೂ ಆರ್ತನಾದವೂ ಏಳುತ್ತಿವೆ. ನೀಲವರ್ಣದ ಯಮದೂತರು ಇಂಧನ ನಿಕ್ಷೇಪಕ್ಕಾಗಿ ಆಗಾಗ ಒಲೆಗಳ ಬಾಗಿಲುಗಳನ್ನು ತೆರೆಯುತ್ತಿದ್ದಾರೆ; ಜ್ವಲಂತ ಅನಲಚ್ಛಟೆಯಿಂದ ಅವರ ಮುಖವು ಉಲ್ಕಾಪಿಂಡದಂತೆ ಉದ್ಭಾಸಿತ ವಾಗುತ್ತಿದೆ.

ಕೃತಾಂತನೆಂದ. ''ಹೇ ಮಹರ್ಷಿ, ಈ ರಜತನಿರ್ಮಿತ ಕಿಂಕಿಣೀಜಾಲ ಮಂಡಿತ ಸುಬೃಹತ್ ಕುಂಭವನ್ನು ನೋಡುತ್ತಿರುವಿಯಷ್ಟೆ. ಇದರಲ್ಲಿ ನಹುಷ ಯಯಾತಿ ದುಷ್ಯಂತ ಪ್ರಭೃತಿ ಮಹಾಯಶಾ ಮಹೀಪಾಲರು ಪರಿ-ಪಕ್ವರಾಗುತ್ತಿದ್ದಾರೆ. ಇವರೆಲ್ಲರೂ ಪ್ರಾಯಃ ಸಂಶೋಧಿತರಾಗಿದ್ದಾರೆ. ಕೇವಲ ಯಯಾತಿಯದು ಕಿಂಚಿತ್ ವಿಲಂಬವಿದೆ. ಇನ್ನೊಂದು ಪ್ರಹರ ದಲ್ಲಿಯೆ ಎಲ್ಲರೂ ವಿಗತಪಾಪರಾಗಿ ಅಮರಾವತಿಗೆ ಗಮನಮಾಡುವರು. ಇದೋ, ಈ ವೈದೂರ್ಯಖಚಿತ ಹಿರಣ್ಮಯ ಕುಂಭದಲ್ಲಿಯ ತಪ್ತತೈಲದಲ್ಲಿ ಇಂದ್ರಾದಿ ದೇವತೆಗಳು ಮೇಲಿಂದಮೇಲೆ ಬಂದು ಸ್ನಾನ ಮಾಡಿ ಹೋಗು ತ್ತಾರೆ. ಗೌತಮರ ಅಭಿಶಾಪದನಂತರ ಸಹಸ್ರಾಕ್ಷ ಪುರಂದರನು ಬಹು ಕಾಲಪರ್ಯಂತ ವಾಸಮಾಡಬೇಕಾಯಿತು. ನಿರವಚ್ಛಿನ್ನ ಅಗ್ನಿಪ್ರಯೋಗ ದಿಂದ ಇದರ ತಲದೇಶವು ಕ್ಷಯಪ್ರಾಪ್ತವಾಗಿದೆ. ಇದೋ, ಈ ರುದ್ರಾಕ್ಷ ಮಾಲಾವೇಷ್ಟಿತ ಗೈರಿಕವರ್ಣದ ಪ್ರಕಾಂಡ ಕುಂಭವನ್ನು ನೋಡುತ್ತಿರುವಿ

ಯಲ್ಲ, ಇದರ ಅಭ್ಯಂತರದಲ್ಲಿ ಭಾರ್ಗವ,ದುರ್ವಾಸ, ಕೌಶಿಕ ಪ್ರಭೃತಿ ಉಗ್ರ ತಪದ ಮಹರ್ಷಿಗಳು ಕುದಿಯುತ್ತಿದ್ದಾರೆ.''

ಜಾಬಾಲಿ ಕೌತೂಹಲ,ಪರವಶರಾಗಿ ಕೇಳಿದರು. '' ಹೇ ಧರ್ಮರಾಜ ಕುಂಭದ ಒಳಗೆ ಏನಾಗುತ್ತಿದೆಯೆಂಬುದನ್ನು ದಯಮಾಡಿ ನನಗೆ ತೋರಿಸು''



' ರೇ ನಾರಕೀ ಯಮರಾಜ '

ಧರ್ಮರಾಜನ ಅಪ್ಪಣೆಯಂತೆ ಜನೈಕ ಯಮಕಿಂಕರನು ಕುಂಭದ ಅವರಣೆಯನ್ನು ಉನ್ಮುಕ್ತಮಾಡಿದನು. ಯಮನು ಅದರೊಳಗೆ ಒಂದು ಬೃಹತ್ ದಾರುಮಯ ದರ್ವಿಯನ್ನು ಎದ್ದಿ ಸಾಹಸಪೂರ್ವಕವಾಗಿ ಎತ್ತಿದ. ಸಿಕ್ತ ಜಟಾಜೂಟ, ಧೂಮಾಯಿತ ಕಲೇವರ ಕೆಲಜನ ಋಷಿಗಳು ದರ್ವಿಗೆ ಹತ್ತಿಕೊಂಡು ಬಂದರು. ಹಾಗು, ಯಜ್ಞೋಪವೀತವನ್ನು ಹರಿದು ಚೆಲ್ಲಿ ಅಭಿಸಂಪಾತವನ್ನು ಆರಂಭಿಸಿದರು.... 'ರೇ ನಾರಕೀ ಯಮರಾಜ, ಯದಿ ಅಸ್ಮದೀಯ ಕಿಂಚಿದಪಿ ತಪಃಪ್ರಭಾವವಿದ್ದರೆ....'

ದರ್ವಿಯನ್ನು ತಿರುವಿ ಕುಂಭದ ಆವರಣೆಯನ್ನು ಝಟಿತಿ ಮುಚ್ಚಿ

ಯಮನೆಂದ. " ಹೇ ಜಾಬಾಲೆ, ಈ ಕೋಪನ ಸ್ವಭಾವ ಋಷಿಗಳ ಕಾತಿ ಣ್ಯವು ದೂರಾಗಲು ಇನ್ನೂ ಬಹಳ ವಿಲಂಬವಿದೆ. ಇವರಿನ್ನೂ ಆಷ್ಟಾಹಕಾಲ ಪರಿಪಕ್ವರಾಗುತ್ತಿರಲಿ "

ಇಷ್ಟರಲ್ಲಿ ಕೆಲ ಯಮದೂತರೊಡನೆ ಖರ್ವಟ ಖಲ್ವಾಟ ಖಲಿತಾದಿ ಗಳು ವಿಷಣ್ಣವದನದಿಂದ ಕುಂಭೀಪಾಕದ ಗರ್ಭಗೃಹವನ್ನು ಪ್ರವೇಶಿಸಿದರು.

ಜಾಬಾಲಿ ನುಡಿದರು. " ಹೇ ಭ್ರಾತೃಗಳೆ, ನೀವು ಇಲ್ಲಿ ಏಕೆ? ಬ್ರಹ್ಮ ಲೋಕದಲ್ಲಿ ಸ್ಥಾನಾಭಾವವಾಗಿರುವದೇ ?"

ಖರ್ವಟರು ಹೇಳಿದರು. " ಜಾಬಾಲೆ, ನೀನು ಸಿಟ್ಟಿಗೆಬ್ಬಿಸಬೇಡ. ನಾವು ಇಲ್ಲಿ ವಿಚಾರಣೆಗಾಗಿ ಬಂದಿದ್ದೇವೆ. "

ಯಮರಾಜನ ಇಂಗಿತದ ಮೇರೆಗೆ ಕಿಂಕರರು ವಾಲಖಿಲ್ಯತ್ರಯರನ್ನು ಏಕತ್ರ ಕಟ್ಟಿ ಒಂದು ಉತ್ತಪ್ತ ಪಂಚಗವ್ಯಪೂರ್ಣ ಕ್ಷುದ್ರಕಾಯ ಕುಂಭ ದಲ್ಲಿ ನಿಕ್ಷೇಪ ಮಾಡಿದರು. ಕುಂಭದೊಳಗಿಂದ ತೀವ್ರ ಚೀತ್ಕಾರವೆದ್ದಿತು. ಹಾಗು ಅದರ ಕೂಡ ಕೃತಾಂತನ ಕುಲೋದ್ಧಾರಕ ವಾಕ್ಯಸಮೂಹವು ನಿರ್ಗತವಾಗತೊಡಗಿತು. ಧರ್ಮರಾಜನು ಕಿವಿಯಲ್ಲಿ ಬೊಟ್ಟು ಇಟ್ಟು ಕೊಂಡು ಅಲ್ಲಿಂದ ಸರಿದುಬಂದು ಅಂದ. "ಹೇ ಮಹರ್ಷಿ, ನರಕದ ಇದೆಲ್ಲ ಅನುಷ್ಠಾನವು ಅತ್ಯಂತ ಅಪ್ರೀತಿಕರವಾಗಿದೆ. ಕೇವಲ ವಿಪನ್ನಳಾದ ಧರಿತ್ರಿಯ ರಕ್ಷಣಾರ್ಥವಾಗಿ ನಾನಿದನ್ನು ಮಾಡುತ್ತಿದ್ದೇನೆ. ಏನೇ ಇರಲಿ, ನಾನಿನ್ನ ನಿನ್ನ ಅಮೂಲ್ಯ ಸಮಯವನ್ನು ನಷ್ಟಮಾಡುವದಿಲ್ಲ; ಈಗ ನಿನ್ನ ವಿಷಯಕವಾದ ಕರ್ತವ್ಯವನ್ನು ಪಾಲನಮಾಡುವೆನು. ಕೇಳು, ಮನಸ್ಸಿಗೆ ಗೋಚರವಾಗುವ ಪಾಪವನ್ನು ನಾನು ಸಹಜವಾಗಿ ದೂರಮಾಡಬಲ್ಲೆನು. ಆದರೆ ಮನಸ್ಸಿಗೆ ಅಗೋಚರವಾಗಿರುವ ಪಾಪವು ಜನ್ಮಜನ್ಮಾಂತರಗಳಲ್ಲಿ ಸಂಕ್ರಮಿತವಾಗುತ್ತದೆ. ಅದರ ಶೋಧನಮಾಡಲು ಕುಂಭೀಪಾಕದಲ್ಲಿ ಆಗಾಗ ಚೆಲ್ಲುವದು ಅತ್ಯಾವಶಕ. ನಿನ್ನ ಅಲ್ಪಸ್ವಲ್ಪ ದುಷ್ಕೃತವನ್ನು ನೀನು ತಿಳಿದೂ ತಿಳಿದೂ ದೌರ್ಬಲ್ಯವಶಾತ್ ಮಾಡಿರುವಿ. ಕದಾಪಿ ಆತ್ಮಪ್ರವಂಚ ನೆಯನ್ನು ಮಾಡಿಕೊಳ್ಳಲಿಲ್ಲ. ಸುತರಾಂ ನಾನು ನಿನ್ನನ್ನು ಸಹಜವಾಗಿ ಪಾಪಮುಕ್ತ ಮಾಡುವೆನು; ವಿಶೇಷ ಯಂತ್ರಣೆಯನ್ನು ಕೊಡುವದಿಲ್ಲ. "

ಹೀಗೆಂದು ಕೃತಾಂತನು ಜಾಬಾಲಿಯನ್ನು ಸುಬೃಹತ್ ಲೌಹ

ಸಂಪಂಶದಲ್ಲಿ ಪೇಷ್ಟನಮಾಡಿ ಒಂದು ತಪ್ತತೈಲಪೂರ್ಣ ಕುಂಭದಲ್ಲಿ ಚೆಲ್ಲಿದನು. 'ದುಷ್ಟಂ' ಎಂದು ಸಪ್ಪಳವಾಯಿತು........

* * * * *

ಸಹಸ್ರವಿಹಗ- ಕಾಕಲಿತ ( ಕೂಜಿತ ) ವನಭೂಮಿಯು ಸಹಸಾ ಝುಂಕೃತವಾಯಿತು. ಪ್ರಾಚೀದಿಶೆಯು ನವಾರುಣಕಿರಣಗಳಿಂದ ಆರಕ್ತವಾಯಿತು. ಜಾಬಾಲಿ ಚೈತನ್ಯಲಾಭವನ್ನು ಹೊಂದಿ ಸಾಧ್ವೀ ಹಿಂದಾಲಿನಿಯ ಅಂಕದ ಮೇಲಿಂದ ನಾವಕಾಶವಾಗಿ ಮಸ್ತಕವನ್ನೆತ್ತಿ ನೋಡಿದರು - ಸಮ್ಮುಖದಲ್ಲಿ ಲೋಕಪಿತಾಮಹ ಬ್ರಹ್ಮನು ಪ್ರಸನ್ನವದನನಾಗಿ ಮೃದುಮಧುರ ಹಾಸ್ಯವನ್ನು ಸೂಚಿಸುತ್ತಿದ್ದಾನೆ.

ಬ್ರಹ್ಮನೆಂದ. " ವತ್ಸ, ನಾನು ಪ್ರೀತನಾಗಿರುವೆನು. ನೀನು ಬೇಕಾದ ವರವನ್ನು ಕೇಳಿಕೋ. "

ಜಾಬಾಲಿ ಎಂದರು. "ಹೇ ಚತುರಾನನ, ಮನೋಭೀಷ್ಟವಾಗಿದೆ. ಇನ್ನೇನೂ ವರ ಬೇಕಾಗಿಲ್ಲ. ತಾವು ಇಲ್ಲಿಂದ ವಿಜಯಂಗೈಸಿರಿ. ಸುಮ್ಮನೆ ಅಣಕಿಸಬೇಡಿರಿ "

ಭೂರ್ಜಪತ್ರ-ರಚಿತವಾದ ಛದ್ಮಮುಖವನ್ನು ಮೋಚನಮಾಡಿ ಬ್ರಹ್ಮನೆಂದ. " ಜಾಬಾಲಿ, ಅಭಿಮಾನವನ್ನು ಸಂವರಣ ಮಾಡು. ನೀನು ವರವನ್ನು ಕೇಳದಿದ್ದರೂ ನಾನೆಲ್ಲಿ ಬಿಡುವೆನು ? ನಾನಾದರೂ ಪ್ರಾರ್ಥೀ. ಹೇ ಸ್ವಾವಲಂಬಿ ಮುಕ್ತಮತಿ ಯಶೋವಿಮುಖ ತಪಸ್ವಿಯೆ, ನೀನಿನ್ನು ದುರ್ಗಮ ಅರಣ್ಯದಲ್ಲಿ ಆತ್ಮಗೋಪನ ಮಾಡಿಕೊಳ್ಳಬೇಡ. ಲೋಕಸಮಾಜದಲ್ಲಿ ನಿನ್ನ ಮಂತ್ರದ ಪ್ರಚಾರ ಮಾಡು. ನಿನ್ನ ಭ್ರಾಂತಿಯು ಅಪನೀತವಾಗಲಿ. ಅನ್ಯರ ಭ್ರಾಂತಿಯನ್ನೂ ನೀನು ಅಪನಯನ ಮಾಡು. ನಿನ್ನನ್ನು ಯಾರೂ ನಷ್ಟ ಮಾಡಲಾರರು. ನಿನ್ನಿಂದಲೂ ಯಾರೂ ನಷ್ಟರಾಗದಿರಲಿ. ಹೇ ಮಹಾತ್ಮನ್, ನೀನು ಅಮರತ್ವಲಾಭವನ್ನು ಹೊಂದಿ ಯುಗಯುಗಾಂತರಗಳಲ್ಲಿ ದೇಶದೇಶಾಂತರಗಳಲ್ಲಿ ಮಾನವಮನಸನ್ನು ಸಂಸ್ಕಾರದ ನಾಗಪಾಶದಿಂದ ಮುಕ್ತಮಾಡುತ್ತಿರು. "

ಜಾಬಾಲಿ ಎಂದರು. " ತಥಾಸ್ತು "

———

# ಸ್ವಯಂವರಾ

ಚಟರ್ಜಿ ಮಹಾಶಯರು ಪಂಚಾಂಗ ನೋಡಿ ಹೇಳಿದರು. "ರಾತ್ರಿ ಒಂಬತ್ತು ಹೊಡೆದು ಐವತ್ತೇಳು ಮಿನಿಟಿಗೆ 'ಅಂಬುವಾಚಿ'ಯ ನಿವೃತ್ತಿಯಿದೆ. ಅಲ್ಲಿಯ ವರೆಗೆ ನಿಲ್ಲುವದಲ್ಲ ಈ ಮಳೆ."

"ಹಾಗಾದರೆ ಬಹಳ ಪಂಚೇತಿ ಆಯಿತು. ಇನ್ನು ಮನೆ ಮುಟ್ಟುವ ಬಗೆ ಹೇಗೆ?" ವಿನೋದ ವಕೀಲರೆಂದರು.

ಮನೆಯ ಯಜಮಾನರಾದ ವಂಶಲೋಚನ ಬಾಬುಗಳೆಂದರು. "ಮೊದಲು ಮಳೆಯಂತೂ ನಿಲ್ಲಲಿ. ಆಮೇಲೆ ಮನೆಯ ವಿಚಾರ. ರಾತ್ರಿಯ ಊಟ ನಮ್ಮ ಮನೆಯಲ್ಲಿಯೆ ಆಗಲಿ. ಉಧೋ, ಒಳಗೆ ಹೋಗಿ ಹೇಳಿ ಬಾರಪಾ."

ಚಟರ್ಜಿಯವರೆಂದರು. "ಚನ್ನಾಗಿ ಬೇಳೆಯ ಹುಗ್ಗಿ ಮತ್ತು 'ಇಲಿಸ್' ಮೀನದ ಪಲ್ಲೆ...."

ವಿನೋದಬಾಬುಗಳು ದಿಂಬನ್ನು ತಮ್ಮ ಕಡೆಗೆ ಎಳೆದುಕೊಂಡು ಎಂದರು. "ಒಳ್ಳೇದು, ಇದೆಲ್ಲವೂ ಆಯಿತು. ಆದರೆ ಇನ್ನು ಹೊತ್ತು ಕಳೆಯುವದೆಂತು? ಏನಾದರೊಂದು ಕಥೆ ಹೇಳಿರಲ್ಲ, ಚಟರ್ಜಿಯವರೆ."

ಚಟರ್ಜಿಯವರು ತುಸು ಹೊತ್ತು ಸುಮ್ಮನಿದ್ದರು. ಆಮೇಲೆ ಆರಂಭಿಸಿದರು.

"ಹೋದ ವರ್ಷ ನಾನು ಮುಂಗೇರದಲ್ಲಿದ್ದಾಗ ಒಂದು ಹೆಣ್ಣು ಹುಲಿಯ ಕೈಯಲ್ಲಿ ಸಿಕ್ಕಿದ್ದೆ."

ವಿನೋದ ಬಾಬುಗಳು ನಡುವೇ ತಡೆದು "ಚಟರ್ಜಿಮಹಾಶಯ, ದಯಮಾಡಿ ಸಾಕುಮಾಡಿರಿ ಈ ಹುಲಿಯ ಕಥೆ" ಎಂದರು.

ಚಟರ್ಜಿಯವರಿಗೆ ತುಸು ವಿರಸವಾದಂತಾಗಿ ಅವರೆಂದರು. "ಹಾಗಾದರೆ ಯಾವದು ಹೇಳಲಿ, ಹೇಳಿರಿ. ಹಾವಿನದೋ ದೆವ್ವಿನದೋ?"

" ಈ ಮಳೆಗಾಲದಲ್ಲಿ ಹಾವು, ಹುಲಿ,ದೆವ್ವ ಯಾವುದೂ ಬಗೆಹರಿಯುವದಿಲ್ಲ. ಆರಿಸಿ ಯಾವುದಾದರೊಂದು ಮೃದುವಾದ ಪ್ರೇಮದ ಕಥೆಯನ್ನು ಹೇಳಿರಿ "

" ಕಟ್ಟುಕತೆ ಹೇಳುವವನಲ್ಲ ನಾನು. ನಾನು ಹೇಳುವದೆಲ್ಲವೂ ನಿಜವಾಗಿ ನಡೆದಿರುತ್ತದೆ."

" ಹಾಗೆಯೆ ಆಗಲಿ. ನಿಜವಾಗಿ ನಡೆದ ಕತೆಯನ್ನೇ ಹೇಳಿರಿ. "

ನಗೇನ್ ಎಂದುಬಿಟ್ಟ. " ಸಾಕು ಸಾಕು, ಚಟರ್ಜಿಮಹಾಶಯರು ಪ್ರೇಮದ ಕಥೆಯನ್ನು ಹೇಳುವರಂತೆ! ಎಷ್ಟು ವಯಸ್ಸಾಯಿತು ತಮ್ಮದು ಮಹಾಶಯ? ಬಾಯಲ್ಲಿ ಹಲ್ಲು ಇನ್ನೂ ಎಷ್ಟು ಉಳಿದಿವೆ? "

" ಪ್ರೇಮವೇನು ಹಲ್ಲಿನಿಂದ ನುರಿಸಿ ತಿನ್ನುವ ವಸ್ತುವೆ? ಎಲೋ ಕತ್ತೇ, ಹಲ್ಲಿನಲ್ಲಿ ಪ್ರೇಮವಿರುವದಿಲ್ಲ; ಪ್ರೇಮವಿರುವದು ಮನಸ್ಸಿನಲ್ಲಿ. "

ನಗೇನ್ ಎಂದ. " ಮನಸ್ಸಂತೂ ಒಣಗಿ ಕಟಿಗೆಯಾಗಿದೆ. ಪ್ರೇಮದ್ದು ನಿಮಗೇನು ಗೊತ್ತಿದೆ? ಎಲ್ಲವನ್ನೂ ಮರೆತುಬಿಟ್ಟಿರಬಹುದು. ಪ್ರೇಮದ ವಿಷಯವನ್ನು ಕೇಳುವದಾದರೆ ತರುಣರನ್ನು ಕೇಳಿರಿ. ಏನಯ್ಯಾ,ಉಧೋ?"

" ತರುಣನೆಂದರೆ ಏನಲೆ? ಸರಳವಾಗಿ ಹೇಳಲ್ಲ; ಹುಡುಗ ಅನ್ನು ಹುಡುಗ! ಮೂರಿಪ್ಪತ್ತು ವರ್ಷ ಆದವು, ಕೇದಾರ ಚಟ್ಟೋಪಾಧ್ಯಾಯನಿಗೆ ಪ್ರೇಮದ ವಿಷಯ ಗೊತ್ತಿಲ್ಲ, ಈ ಮಕ್ಕಳಿಗೆ ಗೊತ್ತಿದೆ!.... ಹುಂಬಾ ಹಸಿ ಹುಂಬಾ! "

" ಹೋಗಲಿ ಬಿಡಿರಿ. ಸುಮ್ಮನೆ ಆ ಬ್ರಾಹ್ಮಣನನ್ನೇಕೆ ಕಾಡುವರಿ? ಕೇಳಿರಿ ಏನು ಕತೆ ಎಂಬುದನ್ನು " ಎಂದರು ವಿನೋದಬಾಬುಗಳು.

ಚಟರ್ಜಿಯವರೆಂದರು. " ವರ್ಣಗಳಲ್ಲಿ ಶ್ರೇಷ್ಠರು ಬ್ರಾಹ್ಮಣರು. ದರ್ಶನವೆನ್ನಿರಿ, ಕಾವ್ಯಶಾಸ್ತ್ರವೆನ್ನಿರಿ, ಪ್ರೇಮತತ್ತ್ವವೆನ್ನಿರಿ ಎಲ್ಲವೂ ಬ್ರಾಹ್ಮಣನ ತಲೆಯಿಂದ ಹೊರಟಿವೆ. ಹಾಗು ಬ್ರಾಹ್ಮಣರಲ್ಲಿ ಶ್ರೇಷ್ಠರೆಂದರೆ ಚಟರ್ಜಿಯವರು. ಉದಾಹರಣಾರ್ಥ ಬಂಕಿಮಚಂದ್ರ ಚಟರ್ಜಿ, ಶರಚ್ಚಂದ್ರ ಚಟರ್ಜಿ...."

" ಮತ್ತೆ? "

" ಮತ್ತೆ ಈ ಕೇದಾರನಾಥ ಚಟರ್ಜಿ. ಅದೇಕೆ ಹೇಳಬಾರದು? ನಿಮ್ಮ ಹೆದರಿಕೆ-ಗಿದರಿಕೆ ಏನು?"

" ಸರಿ; ಆಗಲಿ. ಇನ್ನು ಮುಂದಿನ ಕತೆ ಆರಂಭವಾಗಲಿ. "

ಚಟರ್ಜಿಯವರು ಕತೆಯನ್ನು ಆರಂಭಿಸಿದರು.

" ಹೋದ ವರ್ಷದ ಮಾತು. ಅಸಮಸುಂದರಿಯಾದ ಹೆಂಗಸೊಬ್ಬಳ ಕೈಯಲ್ಲಿ ನಾನು ಸಿಕ್ಕಿದ್ದೆ. "

ನಗೇಶ್ ಎಂದ. " ಇದೇ ತಾವು ಅಂದಿದ್ದಿರಷ್ಟೆ, ಹೆಣ್ಣು ಹುಲಿ ಎಂದು?"

" ಎರಡೂ ಒಂದೇ " ಎಂದರು ವಿನೋದರು.

ಚಟರ್ಜಿಯವರೆಂದರು. " ಮುಖರ್ಜಿ, ಹುಲಿಯ ಕೈಯಲ್ಲಿ ಸಿಕ್ಕಿದ್ದು ಮುಂಗೇರದಲ್ಲಿ. ಈ ವಿಷಯ ನಡೆದದ್ದು ಪಂಜಾಬಮೇಲಿನಲ್ಲಿ, ಟುಂಡಲಾದ ಈಚೆಗೆ. ಸರಿ, ಕಥೆ ಕೇಳಿರಿ. "

* * * * *

ಹೋದ ವರ್ಷ ಮಾಘಮಾಸದಲ್ಲಿ ಚರಣಾಘೋಷನು ತನ್ನ ಚಿಕ್ಕ ಮಗಳನ್ನು ಟುಂಡಲಾಕ್ಕೆ ಕಳಿಸಿ ಬರಲು ಹೇಳಿದ. ಆತನ ಅಳಿಯ ಅಲ್ಲಿ ಕೆಲಸ ಮಾಡುತ್ತಾನೆ. ನೆಟ್ಟಗೇ ಆಯಿತು, ಎರಡನೆಯವರ ರೊಕ್ಕದಿಂದ ಸೆಕಂಡಕ್ಲಾಸಿನಲ್ಲಿ ಪ್ರವಾಸ, ತಿರುಗಿ ಬರುವಾಗ ಒಂದು ದಿನ ಕಾಶೀವಾಸ, ಆಗುವದು. ಹುಡಿಗೆಯನ್ನಂತೂ ನಿರ್ವಿಘ್ನವಾಗಿ ಮುಟ್ಟಿಸಿ ಬಂದೆ. ಮರಳುವಾಗ ಟುಂಡಲಾ ಸ್ಟೇಶನ್ನಿನಲ್ಲಿ ನೋಡಿದೆ, ಗಾಡಿಯಲ್ಲಿ ಸೂಜಿಯನ್ನಿಡಲು ಸಹ ಸ್ಥಳವಿಲ್ಲ; ಆಗ್ರಾದಿಂದ ತಿರುಗಿದ ಅಮೇರಿಕನ್ ಪ್ರವಾಸಿಗಳು ಫರ್ಸ್ಟ್-ಸೆಕಂಡ ಕ್ಲಾಸಿನ ಎಲ್ಲ ಬೆಂಚುಗಳನ್ನು ವ್ಯಾಪಿಸಿಬಿಟ್ಟಿದ್ದಾರೆ. ಸುದೈವದಿಂದ ಅಳಿಯಂದಿರು ರೇಲ್ವೆಯ ಡಾಕ್ಟರರಾಗಿದ್ದರು. ಗಾರ್ಡನಿಗೆ ಹೇಳಿ-ಮಾಡಿ ಅವರು ನನ್ನನ್ನು ಒಂದು ಫರ್ಸ್ಟಕ್ಲಾಸಿನ ಡಬ್ಬಿಯಲ್ಲಿ ದಬ್ಬಿಬಿಟ್ಟರು. ಗಾಡಿಯೂ ಅದೇ ಹೊತ್ತಿಗೆ ಹೊರಟಿತು.

ಆಗ ಬೆಳಗಿನ ಏಳು ಗಂಟೆಯಾಗಿರಬಹುದು. ಆದರೆ ಮಂಜಿನ ಮೂಲಕ ಏನೂ ಕಾಣುತ್ತಿರಲಿಲ್ಲ. ಎಷ್ಟೋ ಹೊತ್ತು ಕಣ್ಣು ಮಿಳುಕಿಸುತ್ತ ಹಾಗೆಯೆ ಕುಳಿತಿದ್ದೆ. ಆಮೇಲೆ ತುಸು ತುಸು ಕಾಣಿಸತೊಡಗಿತು.

ನೋಡಿದ ಕೂಡಲೆ ಬೆಚ್ಚಿಬಿದ್ದೆ. ಎಡೆಯ ಬೆಂಚಿನ ಮೇಲೆ ರಾಕ್ಷಸನಂತಹ ಟೊಣಪನಾದ ಒಬ್ಬ ಸಾಹೇಬನು ಅಸಹ್ಯವೆನಿಸುವಂತೆ ಬಾಯಿ ತೆರೆದು ಕಣ್ಣು ಮುಚ್ಚಿಕೊಂಡು ಉದ್ದಕ್ಕೆ ಬಿದ್ದಿದ್ದಾನೆ. ನಡುನಡುವೆ ಏನೇನೊ ಬಡಬಡಿಸುತ್ತಿದ್ದಾನೆ. ಎರಡೂ ಬೆಂಚುಗಳ ನಡುವೆ ಹಲಗೆಯ ಮೇಲೆ ಮತ್ತೊಬ್ಬ ಲಠ್ಠ ಸಾಹೇಬನು ಅರೆ ಬಾಯ್ತೆರೆದು ಬಿದ್ದುಕೊಂಡಿದ್ದಾನೆ. ಆತನ ತಲೆಯ ಹತ್ತಿರ ತೆರವಾದ ಬಾಟಲಿಯೊಂದು ಉರುಳಾಡುತ್ತಿದೆ. ಈಚೆಯ ಬೆಂಚಿನ ಮೇಲೆ ಯಾರೂ ಇರಲಿಲ್ಲ. ಆದರೆ ಅದರ ಮೇಲೊಂದು



**ದೂರದಿಂದ ಎಷ್ಟೋ ಮಡಮ್ಮರನ್ನು ನೋಡಿದ್ದೇನೆ;**

ಬೆಲೆಯುಳ್ಳ ಹಾಸಿಗೆಯನ್ನು ಹಾಸಿದ್ದರು. ಅದರ ಮೇಲೆ ಒಂದು ವಿಚಿತ್ರವಾದ ಪೋಷಾಕು ಬಿದ್ದಿತ್ತು—ಬಹುಶಃ ಕರಡಿಯ ತೊಗಲಿನದಾಗಿರಬಹುದು,—ಮತ್ತೆ ಏನೇನೋ ಸಾಮಾನುಗಳೂ ಹರವಿದ್ದವು. ಗಾಡಿಯು ಸಾಗಿಯೆ ಇತ್ತು. ಆದ್ದರಿಂದ ಓಡಿಹೋಗಲು ದಾರಿಯಿರಲಿಲ್ಲ. ಬೆಂಚಿನ ಕೊನೆಗೆ ಕುರ್ಚಿಯಂತಹದೊಂದು ಇತ್ತು. ಅದರ ಮೇಲೆಯೆ ಕುಳಿತುಕೊಂಡು ದುಗಾರ್-

ನಾಮವನ್ನು ಜಪಿಸಹತ್ತಿದೆ. ಹೇಗೋ ಹೊತ್ತು ಹೋಗಹತ್ತಿತು, ಸಾಹೇಬರಿಬ್ಬರೂ ಹಾಗೆಯೆ ಬಿದ್ದುಕೊಂಡಿದ್ದರು. ಆದರಿಂದ ನನಗೆ ತುಸು ಧೈರ್ಯ ಬಂದಂತಾಯಿತು.

ಒಮ್ಮಿಂದೊಮ್ಮೆ ಬಾಥ್‌ರೂಮಿನ ಬಾಗಿಲ ತೆರೆಯಿತು. ಅದರೊಳಗಿಂದ ಒಂದು ಅನುಪಮ ಮೂರ್ತಿಯು ಹೊರಬಿದ್ದಿತು. ದೂರದಿಂದ ಎಷ್ಟೋ ಮಡಮ್ಮರನ್ನು ನೋಡಿದ್ದೇನೆ; ಆದರೆ ಹೀಗೆ ಎದರುಬದರು ನೋಡುವ ಪ್ರಸಂಗ ಬಂದಿರಲಿಲ್ಲ.



**ಆದರೆ ಹೀಗೆ ಎದರುಬದರು ನೋಡುವ ಪ್ರಸಂಗ ಬಂದಿರಲಿಲ್ಲ.**

ಕವಳಿಯ ಕಾಯಿಯಂತಹ ಮುಖ; ಹಣ್ಣು ಮೆಣಸಿನಕಾಯಿಯಂತಹ ತುಟಿಗಳು; ಶ್ವೇತಶಿಲೆಯಲ್ಲಿ ಕೊರೆದಂತೆ ಆಜಾನುಲಂಬಿತ ಬಾಹುಗಳು; ಕೊರಳ ವರೆಗೆ ಕತ್ತರಿಸಿದ ಕೂದಲು—ಕಿವಿಯ ಹತ್ತರ ಏನೋ ನಾಲ್ಕಾರು

ಕೂದಲು ಪುಂಡಿಯ ನಾರಿನಂತೆ ಸುರುಳಿ ಸುತ್ತಿವೆ; ಒಂದುವರೆ ಮೊಳದ ‘ಟುವಾಲನ್ನು’ ಸುತ್ತಿದ್ದಾಳೆ.

ವಿನೋದಬಾಬುಗಳೆಂದರು. “ಚಟರ್ಜಿಯವರೆ, ಅದು ‘ಟುವಾಲು’ ಅಲ್ಲ; ಅದಕ್ಕೆ ‘ಸ್ಕ್ಯಾರ್ಟ್’ ಎನ್ನುತ್ತಾರೆ.”

“ಕೋಟೋ ಗೀಟೋ ಯಾರಿಗೆ ಗೊತ್ತು ಮಹಾರಾಯಾ! ಸ್ಪಷ್ಟವಾಗಿ ನೋಡಿದೆ, ನಾವು ಮೈ ಒರಿಸಿಕೊಳ್ಳುವ ಚೌಕುಮನೆಯ ಟುವಾಲಿನಂತಹದನ್ನು ತೊಟ್ಟಿದ್ದಳು. ಅದರ ಕೆಳಗೆ ಗುಲಾಬೀ ಕದಲೀಸ್ತಂಭದಂತಹ ಎರಡು ಕಾಲುಗಳು ಇಳಿದಿದ್ದವು. ಕಾಲುಚೀಲ ಹಾಕಿದ್ದಳೋ ಇಲ್ಲವೋ ತಿಳಿಯುವಂತಿರಲಿಲ್ಲ. ‘ಶರೀರಯಷ್ಟಿ’ ಎಂಬ ಶಬ್ದವನ್ನು ನಾವು ಪುಸ್ತಕದಲ್ಲಿ ಓದಿದ್ದೇವೆ. ಆದರೆ ಅದನ್ನೀಗ ಕಣ್ಣಾರೆ ನೋಡಿದೆ;—ಅವಳು ಯಷ್ಟಿ (ಕಟಿಗೆ) ಯೇ ಆಗಿದ್ದಳು. ತಲೆಯಿಂದ ಎದೆ, ಟೊಂಕಗಳವರೆಗೆ ಸರಿಯಾಗಿ ಕೆತ್ತಿದಂತೆ ಕಾಣುತ್ತಿದ್ದಳು. ಎಲ್ಲಿಯೂ ಏರು—ಇಳಿ ಇರಲಿಲ್ಲ. ‘ಸಂಚಾರಿಣೀ ಪಲ್ಲವಿನೀ ಲತೆ’ ಯಂತಲ್ಲ, ಉರಿಯುತ್ತಿರುವ ಮದ್ದಿನ ಬಾಣದಂತೆ ಕಾಣುತ್ತಿದ್ದಳು. ನೋಡಿ ಬಹಳ ಭಕ್ತಿಯುಂಟಾಯಿತು. ಹಣೆಗೆ ಕೈ ಹಚ್ಚಿ “ಸಲಾಮು ಮಡಮ್ ಸಾಹಬ” ಎಂದೆ.

ಕಿಲಕಿಲನೆ ನಕ್ಕಳು. ಹಣ್ಣುಮೆಣಸಿನಕಾಯಿಯ ಸಂದಿಯೊಳಗಿಂದ ಗೊಂಜಾಳದ ಕಾಳಿನಂತಹವು ಕಂಡವು. ತಲೆ ಅಲ್ಲಾಡಿಸಿ ಅಂದಳು. “ಘುಡ್ ಮಾರ್ನಿಂಗ.”

ಲೇಡಿಯು ನೃತ್ಯಪರಾ ಅಪ್ಸರೆಯಂತೆ ಚಂಚಲ ಹಾವಭಾವಗಳನ್ನು ತೋರಿಸುತ್ತ ಬೆಂಚಿನ ಮೇಲೆ ಬಂದು ಕುಳಿತಳು. ನಾನು ಗಾಬರಿಯಾಗಿ ಕುರ್ಚಿಯಿಂದ ಎದ್ದು ನಿಂತೆ. ಲೇಡಿಯು ಹೇಳಿದಳು. “ಸಿಟ್ ಡಾವುನ ಬಾಬೂ, ಹೆದರಬೇಡಿರಿ.”

ದೇವಿಯು ಒಂದು ಕೈಯಲ್ಲಿ ವರಾಭಯವಿತ್ತು. ಮತ್ತೊಂದರಲ್ಲಿ ಸಿಗರೇಟು. ನನಗೆ ತಿಳಿಯಿತು, ದೇವಿಯು ಪ್ರಸನ್ನಳಾಗಿದ್ದಾಳೆ, ಇನ್ನು ನನಗೇತರ ಭಯ? ಇಂಗ್ಲಿಷ್ಟು ಚೆನ್ನಾಗಿ ಬರುತ್ತಿದ್ದಿಲ್ಲ. ಹಿಂದುಸ್ತಾನೀ ಇಂಗ್ರೇಜಿ ಬೆರಸಿ ಅರಿಕೆಮಾಡಿಕೊಂಡೆ. “ಗಾಡಿಯಲ್ಲಿ ಎಲ್ಲಿಯೂ ಸ್ಥಳ

ವಿರಲಿಲ್ಲ. ಆದ್ದರಿಂದ ಅನಧಿಕಾರ ಹೊಕ್ಕಿರುವೆನು. ಆದರೆ ಗಾರ್ಡನ ಅಪ್ಪಣೆ ತೆಗೆದುಕೊಂಡು. ಮಡಮ್ ಸಾಹೇಬರು ತಪ್ಪನ್ನು ಕ್ಷಮಿಸಬೇಕು."

ಮೇಮಳು ಮತ್ತೆ ಅಭಯಕೊಟ್ಟಳು. ನಾನು ಮತ್ತೆ ಕುಳಿತುಕೊಂಡೆ.

ಆದರೆ ಇಷ್ಟಕ್ಕೆ ಮುಗಿಯಲಿಲ್ಲ. ಮೇಮಸಾಹೇಬಳು ನನ್ನ ಹತ್ತರ ಬಂದು ಕುಳಿತುಕೊಂಡು, ನನ್ನ ಕಡೆಗೆ ಮಿಕಿ ಮಿಕಿ ನೋಡತೊಡಗಿದಳು.

ಈ ಕೇದಾರಚಟರ್ಜಿಗೆ ಹಾವು ಬೆನ್ನುಹತ್ತಿದೆ; ಹುಲಿ ಗಂಟುಬಿದ್ದಿದೆ; ದೆವ್ವ ಹೆದರಿಸಿದೆ; ಪೋಲೀಸ ಕೋರ್ಟಿನ ವಕೀಲರು 'ಕ್ರಾಸ್' ಮಾಡಿದ್ದಾರೆ. ಆದರೆ ಇಂತಹ ದುರವಸ್ಥೆಯು ಎಂದಿಗೂ ಆಗಿರಲಿಲ್ಲ. ಮೊದಲೆ ಆರವತ್ತು ವರ್ಷ ವಯಸ್ಸು, ಬಣ್ಣಾ ಅಷ್ಟ ಕರಿದೆಂಬೇನೂ ಅನ್ನುವಂತಿರಲಿಲ್ಲ, ಐದು ದಿನ ಕ್ಷೌರ ಮಾಡಿಸಿರಲಿಲ್ಲ, ಮುಖವು ಕದಂಬದ ಹೂವಿನಂತೆ ಕಾಣುತ್ತಿತ್ತು. ಆದರೆ ಈ ಎಲ್ಲ ತಡೆಗಳನ್ನು ಭೇದಿಸಿ ನಾಚಿಕೆಯು ಹೊರಗೆ ಬಂದು ನನ್ನ ಕಿವಿಗಳನ್ನು ಕೆಂಪಗೆ ಮಾಡಿತು. ನನಗೆ ತಡೆಯದಾಯಿತು. ಕೇಳಿದೆ, "ಮಡಮ್‌ಸಾಬ, ಏನು ನೋಡುತ್ತಿರುವಿರಿ ?"

ಮೇಮಳು ಪಿಸಿ ಪಿಸಿ ನಕ್ಕು, "ಏನೂ ಇಲ್ಲ, ನೋ ಒಫೆನ್ಸ; ನೀನು ಯಾರು ಬಾಬೂ ?" ಎಂದಳು.

ನನ್ನ ಮರ್ಯಾದೆಗೆ ಭಂಗ ಬಂದಿತು. ನಾನೇನು ಮೋಗು-ಗೀಗೋ ಏನು ಪ್ರಾಣಿಸಂಗ್ರಹಾಲಯದ ಜಂತುವೋ ? ಎದೆ ಸೆಟೆಸಿ, ತಲೆ ಎತ್ತಿ ಹೇಳಿದೆ, "ಆಯ್, ಕೇದಾರ ಚಟರ್ಜಿ. ನೋ ಜೂ ಗಾರ್ಡನ್."

ಮೇಮಳು ಮತ್ತೆ ಹೋ ಹೋ ಎಂದು ನಕ್ಕು. "ಬೆಂಗಾಲೀ ?" ಎಂದಳು. ನಾನು ಅಭಿಮಾನದಿಂದ ಉತ್ತರಕೊಟ್ಟೆ." ಇಯೆಸ್ ಸರ್, ಹಾಯಿ-ಕಾಸ್ಟ ಬೆಂಗಾಲೀ ಬ್ರಾಹ್ಮಿನ್." ಜನಿವಾರವನ್ನು ಹಿರಿದು ತೋರಿಸಿ ಎಂದೆ. "ನೀ, ನೀವು ಯಾರು ಮ್ಯಾಡಾಮ್ ?"

ಏನೋದಬಾಬುಗಳೆಂದರು. "ಛೀ ಚಟರ್ಜಿಮಹಾಶಯ, ಮಡಮ್ಮಳ ಪರಿಚಯವನ್ನು ಕೇಳಿದಿರಾ ನೀವು ? ಎಟಿಕೆಟ್ಟಿನಲ್ಲಿ ಇದು ನಿಷಿದ್ಧ."

"ಅದೇಕೆ ಕೇಳಬಾರದು ? ಮಡಮಳು ನನ್ನ ಪರಿಚಯವನ್ನು ಕೇಳಿದ ಮೇಲೆ ನಾನು ಬಿಡುವೆನೆ ? ಮಡಮಳು ಎಷ್ಟು ಸಿಟ್ಟಾಗಲಿಲ್ಲ. ಎಲ್ಲವನ್ನು ಹೇಳಿದಳು—ಹೆಸರು ಜೋನ ಜಿಲ್ಬರ. ನಿವಾಸಸ್ಥಾನ ಅಮೇರಿಕಾ. ಈ

ದೇಶಕ್ಕೆ ಈ ಮೊದಲು ಎಷ್ಟೋ ಸಾರೆ ಬಂದು ಹೋಗಿದ್ದಾಳೆ. ಇಂಡಿಯಾ ಬಹು ಆಶ್ಚರ್ಯಕರವಾಗಿದೆ. ''

ನನಗೆ ತುಸು ಧೈರ್ಯ ಬಂದಂತಾಯಿತು. ಆ ಇಬ್ಬರೂ ಸಾಹೇಬರ ಕಡೆಗೆ ಬೊಟ್ಟು ಮಾಡಿ ಕೇಳಿದೆ, ' ಇವರಾರು ? '

ಪಾಪ, ಮಡಮಳು ಬಹಳ ಸರಳಸ್ವಭಾವದವಳಾಗಿದ್ದಳು. ಬೆಂಚಿನ ಮೇಲೆ ಬಿದ್ದುಕೊಂಡ ಉದ್ದ ಸಾಹೇಬನ ಕಡೆಗೆ ಬೆರಳು ಮಾಡಿ ಹೇಳಿದಳು. ''ದ್ಯಾಟ್ ಚಾಪೀ, ಟಿಮುಥೀ ಟೋಪರ. ನಿವಾಸ ಕ್ಯಾಲಿಫೋರ್ನಿಯಾ. ಇವನು ನನ್ನನ್ನು ಮದುವೆಯಾಗಬೇಕೆನ್ನುತ್ತಾನೆ. ಇವನು ಹತ್ತುಕೋಟಿಯ ಕುಳವಾಗಿದ್ದಾನೆ. ಮತ್ತೆ ಕೆಳಗೆ ಮಲಗಿಕೊಂಡವ, ಕ್ರಿಸ್ಟೋಫರ ಕೋಲಂಬಸ್ ಬ್ಲಾಟೋ. ಇವನೂ ನನ್ನನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದಾನೆ. ಈತನ ಕಡೆಗಾದರೂ ಹತ್ತುಕೋಟಿ ಡಾಲರುಗಳಿವೆ.''

ನಾನು ಗಾಂಭೀರ್ಯದಿಂದ ನುಡಿದೆ. '' ಕೋಲಂಬಸ್ ಅಮೇರಿಕೆಯ ಶೋಧ ಮಾಡಿದ್ದನಲ್ಲವೆ ?''

ಮಡಮಳು ಹೇಳಿದಳು.'' ಆ ಕೋಲಂಬಸ್ ಬೇರೆ.ಇವರು ಅಮೇರಿಕೆಯಲ್ಲಿಯೆ ಇರುತ್ತಾರೆ. ಆದರೆ ಶೋಧನನ್ನೇನೂ ಮಾಡಿಲ್ಲ. ಆ ದೇಶವು ತೀರಾ ಒಣಗಿ ಹೋಗಿದೆ. ಮೆಥಿಲೇಟೆಡ್ ಸ್ಪಿರಿಟಿನ ಹೊರತಾಗಿ ಮತ್ತೇನೂ ಸಿಗುವದಿಲ್ಲ. ಆದ್ದರಿಂದ ಇವರು ದೇಶತ್ಯಾಗ ಮಾಡಿ ವಿಶುದ್ಧ ವಸ್ತುವಿನ ಸಂಧಾನಕ್ಕಾಗಿ ಭೂಪ್ರದಕ್ಷಿಣೆ ನಡೆಸಿದ್ದಾರೆ. ''

'' ಹಾಗಾದರೆ, ಇವರು ಭಾರೀ ಸ್ಪಿರಿಚ್ಯುಲಿಸ್ಟ ಇದ್ದಾರಲ್ಲವೆ ? '' ಎಂದು ನಾ ಕೇಳಿದೆ.

ಇಷ್ಟರಲ್ಲಿ ಉದ್ದ ಸಾಹೇಬರು ಕಣ್ತೆರೆದು ನನ್ನ ಕಡೆಗೆ ಸಿಟ್ಟಿನಿಂದ ನೋಡುತ್ತ ಮುಷ್ಟಿಯನ್ನು ತೋರಿಸಿ '' ಯೂ-ಯೂ, ಗೆಟ ಆವುಟ್ ಕ್ವಿಕ್ '' ಎಂದು ಗರ್ಜಿಸಿದ. ಲಕ್ಷ್ಮನೂ ಕೈಕಾಲು ಬೀಸಹತ್ತಿದ.

ನಾನು ನನ್ನ ಬಡಿಗೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಠರ್ ಠಕ್ ಎಂದು ಬಡಿಯುತ್ತಿದೆ. ಮಡಮಳು ಹಾಸಿಗೆಯ ಮೇಲಿಂದ ತನ್ನ ಸ್ಲೀಪರುಗಳನ್ನು ತೆಗೆದುಕೊಂಡು ಉದ್ದ ಸಾಬನ ಎರಡೂ ಗಲ್ಲಗಳನ್ನು ಸವರಿ ಅಚ್ಛೆಯಿಂದ '' ಯೂ ಪಾಗ್ ಯೂ ಪಾಗ್ '' ಎಂದು ನುಡಿದಳು. ಲಕ್ಷ್ಮನಿಗೂ

ಒನಿಕೆ ಕೊಟ್ಟು "ಯೂ ಪಿಗ್, ಯೂ ಪಿಗ್" ಎಂದಳು. ಇಬ್ಬರೂ ಆಗ ಮತ್ತೆ ಬಾಯ್ತೆರೆದು ಬಿದ್ದುಕೊಂಡರು. ಮಡಮುಳು ಅವರಿಬ್ಬರ ಎದೆಯ ಮೇಲೆ ಒಂದೊಂದು ಸ್ಲೀಪರ ಇಟ್ಟು ಸ್ವಸ್ಥಾನದಲ್ಲಿ ಕುಳಿತುಕೊಂಡು "ಏನೂ ಹೆದರಬೇಡ, ಬಾಬೂ" ಎಂದಳು.

ಇನ್ನೇನು ಗತಿ? 'ಅರೇಬಿಯನ್ ನಾಯಿಟ್ಸ್' ನಲ್ಲಿ ಓದಿದ್ದೆ, ಒಬ್ಬ ದೈತ್ಯನು ಯಾವುದೊ ರಾಜಕುಮಾರಿಯನ್ನು ಪೆಟ್ಟಿಗೆಯಲ್ಲಿ ಹಾಕಿ ತಲೆಯ ಮೇಲೆ ಹೊತ್ತುಕೊಂಡು ತಿರುಗುತ್ತಿದ್ದನಂತೆ. ದೈತ್ಯನು ಮಲಗಿದ ಕೂಡಲೆ ಆ ರಾಜಕುಮಾರಿಯು ಅವನ ಎದೆಯ ಮೇಲೆ ಒಂದು ಹೆಂಟೆಯನ್ನಿಟ್ಟು ಜಗತ್ತಿನಲ್ಲಿಯ ಎಲ್ಲ ರಾಜಪುತ್ರರನ್ನು ಕೂಡಿಸಿ ಅವರ ಕಡೆಯಿಂದ ಉಂಗುರಗಳನ್ನು ಎಬ್ಬಿಸುತ್ತಿದ್ದಳಂತೆ. ನಾ ತಿಳಿದೆ, ಈ ಸಾರೆ ಇವಳು ಎಬ್ಬಿಸುವಳು. ಈ ಮಡಮುಳಂತೂ ಇಬ್ಬರು ದೈತ್ಯರ ಹೆಗಲ ಮೇಲೇರಿ ತಿರುಗುತ್ತಿದ್ದಾಳೆ. ಇನ್ನು ತನ್ನ ತೊಂಬತ್ತೊಂಬತ್ತು ಉಂಗುರಗಳ ಮಾಲೆಯನ್ನು ಹೊರಗೆ ತೆಗೆಯುವಳು.

ನಾನು ಹೆದರಿದಂತೆಯೆ ಆಯಿತು. ನನ್ನ ಬೆರಳಿನಲ್ಲಿ ತಾಮ್ರ ಮತ್ತು ಬೆಳ್ಳಿಯ ತಂತಿಯ ಪವಿತ್ರದ ಉಂಗುರವಿತ್ತು. ಮಡಮುಳ ಕಣ್ಣು ಅದರ ಮೇಲೆ ಬಿತ್ತು. 'ಹೌ ಲವ್ಲೀ! ನೋಡುವ ಹೇಗಿದೆ ಉಂಗುರ?" ಎಂದಳು ಅವಳು.

ನಾನು ಹೆದರುತ್ತ ಕೈ ಮುಂದೆ ಚಾಚಿದೆ, ಬೆರಳಿಗೆ ಚೂರಿ ಹಾಕುತ್ತಾರೆಂಬಂತೆ! ಮಡಮುಳು ಸರ್ರನೆ ಉಂಗುರವನ್ನು ಹಿರಿದು ತನ್ನ ಬೆರಳಲ್ಲಿ ಹಾಕಿಕೊಂಡು "ಬ್ಯೂಟಿ ಫೂಃ" ಎಂದಳು. ಹರಿ ಹರಿ! ಇದಂತೂ ನನ್ನ ತ್ರಿಸಂಧ್ಯಾ ಜಪ ಮಾಡುವ ಉಂಗುರ. ಹಾಯ್, ಈ ಮ್ಲೇಚ್ಛದುರಗಿಯು ಇದನ್ನು ಅಪವಿತ್ರವಾಗಿ ಮಾಡಿಬಿಟ್ಟಳು. ನನ್ನ ಕಣ್ಣಲ್ಲಿ ನೀರು ತುಂಬಿ ಬಂದವು. ಆದರೆ ಕುತೂಹಲವೂ ಬಹಳವುಂಟಾಯಿತು. ಕೇಳಿದೆ, 'ಮೇಮ ಸಾಬ, ತಮ್ಮ ಕಡೆಗೆ ಇನ್ನೂ ಎಷ್ಟು ಉಂಗುರಗಳಿವೆ? ನಾಯಿಂಟೀ-ನಾಯಿನ್?'

ಮಡಮುಳು ಬೆಂಚಿನ ಕೆಳಗಿಂದ ಒಂದು ಟ್ರಂಕನ್ನು ತೆಗೆದಳು. ಹಾಗು ಅದರೊಳಗಿನ ಒಂದು ಅದ್ಭುತವಾದ ಪೆಟ್ಟಿಗೆಯನ್ನು ತೆಗೆದು ತೆರೆದು ತೋರಿ

ನಿನಗೆ. ಕಣ್ಣು ಕುಕ್ಕಿದಂತಾಯಿತು. ಅದರಲ್ಲಿ ಅನೇಕ ಖಾನೆಗಳಿದ್ದವು. ಒಂದರಲ್ಲಿ ಕೊರಳಹಾರವಾದರೆ ಇನ್ನೊಂದರಲ್ಲಿ ಕಿವಿಯ ಬೆಂಡೋಲೆ; ಮತ್ತೊಂದರಲ್ಲಿ ಮತ್ತೆ ಏನೇನೋ! ಒಂದು 'ಟ್ರೇ'ಯಲ್ಲಿ ಇಪ್ಪತ್ತು ಇಪ್ಪತ್ತೈದು ಉಂಗುರಗಳಿದ್ದವು. ಪ್ರೇಮಳು ಅದನ್ನು ನನ್ನೆದುರಿಗೆ ಇಟ್ಟು 'ಬಾಬೂ ಇವರಲ್ಲಿ ನಿಮ್ಮ ಮನಸ್ಸಿಗೆ ಬಂದುದನ್ನು ತೆಗೆದುಕೊಳ್ಳಿರಿ' ಎಂದಳು.

ನಾನಂದೆ. "ಹೀಗೇಕೆ? ನನ್ನ ಉಂಗುರ ಬಹಳವಾದರೆ ಎರಡೂ ಕಾಲು ರೂಪಾಯಿಗಳದು. ನಾನು ಅದನ್ನು ತಮಗೆ ಪ್ರೆಝೆಂಟ ಮಾಡಿದ್ದೇನೆ. ಸಾವಧಾನದಿಂದ ಇಟ್ಟುಕೊಳ್ಳಿರಿ. ವ್ಹೇರೀ ಪೂಅರ್ ಉಂಗುರ ಅದು."

ಮುಗುಳ್ನಕ್ಕಳು. "ಯೂ ಓಲ್ಡ ಡೀಯರ! ಹಾಗಾದರೆ ನಾನು ನಿಮ್ಮ ಉಪಹಾರವನ್ನು ತೆಗೆದುಕೊಳ್ಳುವೆನೆಂದ ಮೇಲೆ ನೀವಾದರೂ ನನ್ನ ಉಪಹಾರವನ್ನು ಸ್ವೀಕರಿಸದೆ ಇರಬಾರದಷ್ಟೆ?" ಹೀಗೆಂದು ಅವಳು ಒಂದು ಬಂಗಾರದ ಉಂಗುರವನ್ನು ನನ್ನ ಬೆರಳಲ್ಲಿ ಹಾಕಿಬಿಟ್ಟಳು.

ನಾನೆಂದೆ. "ಥ್ಯಾಂಕ ಯೂ ಮೇಮ ಸಾಬ. ನಾನು ತಮ್ಮ ಅಡಿಯಾಳು. ಫಾರಗೇಟ್ ಮಿ ನಾಟ್." ಮನಸ್ಸಿನಲ್ಲಿಯೆ ಅಂದುಕೊಂಡೆ. "ವೆದರಬೇತ ಬ್ರಾಹ್ಮಣೀ, ಈ ಉಂಗರ ನಿನಗಾಗಿಯೇ ಇದೆ."

* * * * *

ಗಾಡಿಯು ಇಟಾವಾಕ್ಕೆ ಬಂದು ನಿಂತಿತು. ಕೆಲವಾರ ಹಾಟೆಲ್‌ದ ಖಾನಸಾಮಾನು (ಮಾಣಿ) ಚಹ ಬ್ರೆಡ್ ಬೆಣ್ಣೆ ತೆಗೆದುಕೊಂಡುಬಂದು "ಟೀ ಹುಜೂರ?" ಎಂದು ಕೇಳಿದ. ಪ್ರೇಮಳು ಟ್ರೇ ಇಟ್ಟುಕೊಂಡಳು. ಅನಂತರ ಅವಳು ನನ್ನ ಬಡಿಗೆಯನ್ನು ತೆಗೆದುಕೊಂಡು ಅದರಿಂದ ಉದ್ದ ಮತ್ತು ಲತ್ತ ಸಾಬರಿಬ್ಬರನ್ನೂ ತಿವಿದು ಎಬ್ಬಿಸಿ 'ಗೆಟ್ ಅಪ್ ಟಿಮ್ಮೀ, ಗೆಟ್ ಅಪ್ ಬ್ಲಾಟೋ" ಎಂದಳು. ಅವರಿಬ್ಬರೂ ಕಾಡುಹಂದಿಯಂತೆ ಗುರ್ರೆನ್ನುತ್ತ ಏನೇನೋ ಒಟಗುಟ್ಟಿದರು, ಚೆನ್ನಾಗಿ ಕೇಳಿಸಲಿಲ್ಲ. ಲಕ್ಷಣಗಳ ಮೇಲಿಂದ ಇವರದನ್ನೂ ಎದ್ದು ಕೂಡುವಷ್ಟು ಅವಸ್ಥೆಯಿಲ್ಲವೆಂದು ತರ್ಕ ಮಾಡಿದೆ.

"ಚಟರ್ಜೀ ಚಹ ಕುಡಿಯುವಿರಾ? ಪಥ್ಯ—ಗಿಥ್ಯ ಏನೂ ಇಲ್ಲವಷ್ಟೆ?" ಎಂದು ಕೇಳಿದಳು ಪ್ರೇಮಳು.

ಬಹಳ ಬಿಗಿ ಬಂದಿತು. ಏನು ಮಾಡಲಿ? ಮ್ಲೇಂಚ್ಛಸ್ತ್ರೀಯ ಕೈಯ ಚಹಾ—ಆದರೆ ಕಮ್ಮಗಿನ ವಾಸನೆ—ಚಳಿಯೂ ವಿಪರೀತ. ಶಾಸ್ತ್ರಗಳಲ್ಲಿ ಚಹ ಕುಡಿಯಬಾರದೆಂದು ಎಲ್ಲಿಯೂ ಬರೆದಿಲ್ಲ. ಇದಲ್ಲದೆ ರೈಲುಗಾಡಿಯಂತಹ ಬೃಹತ್ ಕಾಷ್ಠದಮೇಲೆ ಕುಳಿತು ಶೀತನಿವಾರಣೆಗಾಗಿ 'ಔಷಧಾರ್ಥ' ಯದಿ ಚಹ ಕುಡಿದರೆ ಸಿಕ್ಷ್ಯವಾಗಿಯೂ ಅದರಲ್ಲಿ 'ದೋಷ ನಾಸ್ತಿ !'

ನಾನಂದೆ. "ಮ್ಯಾಡಮ್ ದೇವಿ, ನೀವು ಸ್ವತಃ ನಿಮ್ಮ ಕೈಯಿಂದ ಚಹ ಕೊಡುವಿರೆಂದ ಮೇಲೆ ನಾನು ಕುಡಿಯದೆ ಇರುವೆನೆ? ಆದರೆ—ಬ್ರೆಡ್ ಬೇಡ."

ಚಹದಿಂದ ಮನದ ಬಾಗಿಲುಗಳು ತೆರೆಯುತ್ತವೆ. ಕುಡಿದು ಕುಡಿಯುತ್ತ ಎಂತೆಂತಹವೋ ಮಾತುಗಳು ಬಾಯಿಂದ ಹೊರಸೂಸುತ್ತವೆ. ಅಶ್ವತ್ಥಾಮನು ಹಾಲು ದೊರೆಯದ ಮೂಲಕ ಅಕ್ಕಿಯ ಕಷ್ಟನ್ನು ಕುಟಿದು ಕುಣಿದಾಡಿದಂತೆ ನಮ್ಮ ದೇಶದ ಬಡಪ್ರಾಣಿಗಳು ಚಹದಿಂದಲೆ ನೆರೆಯ ಚಟವನ್ನು ತೀರಿಸಿಕೊಳ್ಳುತ್ತಿದ್ದಾರೆ. ಬಂಕಿಮ ಚಟರ್ಜಿಯವರು ವಿಧಿಯುಕ್ತವಾಗಿ ಚಹ ಕುಡಿಯುವದನ್ನು ಕಲಿತಿದ್ದಿಲ್ಲ; ನೆಗಡಿ ಕೆಮ್ಮು ಆದರೆ ಬಾರಗೆಣಸೂ ಸೈಂಧಲವಣ ಹಾಕಿ ಕುಡಿಯುತ್ತಿದ್ದರು. ಇದರಿಂದ ಅವರು "ಬಂದೀ, ನನ್ನ ಪ್ರಾಣೇಶ್ವರ...." ಎಂದು ಬರೆದಿದ್ದಾರೆ. ಈಗಿನ ಕಾಲದಲ್ಲಿ ಚಹದ ಪ್ರತಾಪದಿಂದ ದೇಶದಲ್ಲೆಲ್ಲ ಭಾವತರಂಗಗಳ ನೆರೆಬಂದಿದೆ, – ಮನೆಮನೆಗಳಲ್ಲಿ ಚಹಾ, ಮನೆಮನೆಗಳಲ್ಲಿ ಪ್ರೇಮ. ಆಗಿನ ಕಾಲದ ಕವಿಗಳ ಆಡಂಬರ ಬಹಳ-ಅವರಿಗೆ ಬೇಕು—ಉಪವನ, ಚಂದ್ರ, ಮಲಯಮಾನಿಲ, ಕೋಕಿಲ. ಅನಂತರ ಎಲ್ಲಿಯೋ ಪಂಚಶರಗಳು ನಿಸುಟಬೇಕು ! ಈಗ ಈ ಬಗಾ ಜಂಜಾಲವಿಲ್ಲ, ಸಾಕು, ಒಡಕು ಹಿಡಿಕೆಯ ಎರಡು ಕಪ್, ಚಿಮಣಿ ಕಟಿಗೆಯ ಒಂದು ಟೇಬಲ್, ಅದರ ಮೇಲೊಂದು ಹರಕುಪರಕಾದ ವಸ್ತ್ರ, ಎರಡೂ ಕಡೆಗೆ ತರುಣ ಹಾಗು ತರುಣಿ; ನಡುವೆ ಉಗಿಯುಗುವ ಕೆಟ್ಲಿ. ದೈವ ಅನುಕೂಲವೆನ್ನಬೇಕು, ವಯಸ್ಸು ಅರವತ್ತಾಗಿತ್ತು,—ಭಲೆ ಪಾರಾದೆ !

"ಒಳ್ಳೇದು ಮಡಮಸಾಬ, ಈ ಇಬ್ಬರೂ ಹುಡುಗರು ಬರಹೋಗುತ್ತಿದ್ದಾರಲ್ಲ ಇವರಿಬ್ಬರೂ ನಿಮ್ಮ ಪಾಣಿಪ್ರಾರ್ಥಿಗಳಷ್ಟೆ. ಇವರಲ್ಲಿ ಯಾವ ಭಾಗ್ಯಶಾಲಿಯನ್ನು ನೀವು ಆರಿಸುವಿರಿ?" ಎಂದು ನಾನು ಕೇಳಿದೆ.

ಮಡಮಮಳು ಹೇಳಿದಳು. "ಇದೊಂದು ಸಮಸ್ಯೆಯಾಗಿದೆ. ನನ್ನ ಮನಸ್ಸು ಇನ್ನೂ ಸ್ಥಿರವಾಗದಾಗಿದೆ. ಒಮ್ಮೆ ಅನಿಸುತ್ತದೆ, ಟೀಮನೇ ಯೋಗ್ಯ ಪಾತ್ರ. ಎತ್ತರವಾಗಿದ್ದು ನೋಡಲು ಚೆನ್ನಾಗಿ ಕಾಣುತ್ತಾನೆ. ನನ್ನ ಮೇಲೆ ಪ್ರೇಮವೂ ವಿಶೇಷ. ಆದರೆ ಶೆರೆ ಕುಡಿದ ಕೂಡಲೆ ಅವನ ತಲೆ ಕೆಡುತ್ತದೆ. ಮತ್ತೆ ಈ ಬ್ಲಾಟೋ-ಅಡ್ಡೀನೋ ಬೆಳೆದಿದ್ದಾನೆ, ವಯಸ್ಸೂ ಹೆಚ್ಚಾಗಿದೆ-ನಾನು ಹೇಳಿದಂತೆ ಕೇಳುತ್ತಾನೆ. ಅವನ ಮನಸ್ಸು ಬಹಳ ಕೋಮಲವಾಗಿದೆ. ತುಸು ಶೆರೆ ಕುಡಿದರೆ ಸಾಕು, ಅಳು ಬಂದಿತೇ! ಬಹಳ ತೊಡಕಿನಲ್ಲಿ ಬಿದ್ದಿರುವೆನು. ಇಬ್ಬರೂ ಸರಿಸಮಾನರಾಗಿದ್ದಾರೆ. ಇರಲಿ ಇನ್ನೂ ಎಷ್ಟೋ ಹೊತ್ತು ಇದೆ. ಹೌರಾ ಮುಟ್ಟುವದರೊಳಗಾಗಿಯೆ ಯಾವುದನ್ನೂ ನಿಶ್ಚಯಿಸುವೆ. ಒಳ್ಳೇದು, ಚಟರ್ಜೀ ನೀವೇ ಹೇಳಿರಲ್ಲ, - ಇವರಲ್ಲಿ ಯಾರನ್ನು ಮದುವೆಯಾಗುವದು ಯೋಗ್ಯವಾದೀತು?"

ನಾ ಹೇಳಿದೆ. "ಮಡಮಸಾಹೇಬ, ತಾವು ಇವರ ಶೀಲ ಸ್ವಭಾವಾದಿಗಳನ್ನು ವರ್ಣಿಸಿದ್ದನ್ನು ನೋಡಿದರೆ ಇವರಿಬ್ಬರೂ ಅತ್ಯಂತ ಸುಪಾತ್ರರೆಂದು ಅನಿಸುತ್ತದೆ. ಆದರೆ ಇವರು ಹೀಗೆ ದುಂದಾಗಿ ಬಿದ್ದಿರುವದನ್ನು ನೋಡಿದರೆ...."

ಮೇಮಳೆಂದಳು. "ಇದೇನೂ ಅಂಥ ದೊಡ್ಡ ವಿಷಯವಲ್ಲ. ತುಸು ಹೊತ್ತಿನಲ್ಲಿಯೆ ಇವರು ಸರಿಯಾಗುವರು."

ನಾನಂದೆ. "ಇಂಥವನನ್ನೇ ಮದುವೆಯಾಗಬೇಕೆಂದು ನಿಮಗೆ ಅನಿಸದಿದ್ದರೆ, ನಿಮ್ಮ ತಾಯಿತಂದೆಗಳ ಮೇಲೆಯೆ ಆ ಭಾರವನ್ನೇಕೆ ಹಾಕಬಾರದು?"

ಮಡಮಳು ಹೇಳಿದಳು. "ನನಗೆ ತಂದೆತಾಯಿಗಳಿಲ್ಲ. ನಾನೇ ನನ್ನ ಅಭಿಭಾವಕೆ. ನೋಡಿರಿ ಚಟರ್ಜಿ, ನಿಮ್ಮ ಮೇಲೆಯೆ ಎಲ್ಲ ಭಾರವನ್ನು ಹಾಕಿದ್ದೇನೆ. ನೀವು ಚೆನ್ನಾಗಿ ಇಬ್ಬರನ್ನೂ ಪರೀಕ್ಷಿಸಿರಿ. ಮೊಗಲಸರಾಯಿಯಲ್ಲಿ ಇಳಿಯುವ ಮೊದಲೆ ನೀವು ನಿಮ್ಮ ನಿರ್ಣಯವನ್ನು ತಿಳಿಸಬೇಕು. ಒಂದು ರೂಪಾಯಿ ತೂರಿ ಮೋರೆ-ಮರೆ ನೋಡಿ ನಿಶ್ಚಯಿಸಬೇಕೆಂದು ಮಾಡಿದ್ದೆ; ಆದರೆ ನೀವು ಇರುವಿರೆಂದಮೇಲೆ ಅದರ ಆವಶ್ಯಕತೆಯಿಲ್ಲ."

ಬಹು ವಿಚಿತ್ರವಾದ ವ್ಯವಸ್ಥೆಯೋ ಸರಿ. ನನ್ನ ಆತ್ಮೀಯ ಬಂಧುಗಳಿಗಾಗಿ ಇಲ್ಲಿಯವರೆಗೆ ಅನೇಕ ವರ-ಕನ್ಯೆಯರನ್ನು ಗೊತ್ತುಮಾಡಿಕೊಟ್ಟಿದ್ದೇನೆ.

ಆದರೆ ಇಂತಹ ಅದ್ಭುತ ಪಾತ್ರವನ್ನು ನೋಡುವ ಭಾರವು ಇದುವರೆಗೆ ಬಂದಿರಲಿಲ್ಲ. ಇಬ್ಬರೂ ಕೋಟ್ಯಾಧೀಶರು, ಇಬ್ಬರೂ ಮಹಾ ಕುಡುಕರು. ಒಬ್ಬನು ಎತ್ತರದಲ್ಲಿ ಹೆಚ್ಚಾಗಿದ್ದರೆ ಮತ್ತೊಬ್ಬನು ತೂಕದಲ್ಲಿ ಹೆಚ್ಚಾಗಿದ್ದಾನೆ. ವಿದ್ಯಾಬುದ್ಧಿಗಳ ಪರಿಚಯವಾದದ್ದು ಇಲ್ಲಿಯವರೆಗೆ ಇವರ ಕುಡಿಕೆ ಮಾತ್ರ. ಆಗಲಿ, ನಮ್ಮ ಗಂಟು ಹೋಗುವದೇನು ? ಸ್ವತಃ ಮೇಮಳಿಗೇ ಆಕ್ಷೇಪವಿಲ್ಲವೆಂದಮೇಲೆ ನಮಗೇನು ? ಇಬ್ಬರಲ್ಲಿ ಯಾರ ಹೆಸರನ್ನಾದರೂ ಹೇಳಿದರಾಯಿತು. ಇನ್ನು ನನ್ನ ಮಾತಿಗೆ ಒಪ್ಪಲಿಲ್ಲವಾದರೆ ಹೇಳಿಬಿಡುವೆ– "ಅಮ್ಮಾ, ತಲೆಯನ್ನಂತೂ ಮೊದಲೇ ಬೋಳಿಸಿರುವಿ; ಇನ್ನು ಉಳಿದ ಕೆಲಸವನ್ನಾದರೂ ಕೊನೆಗಾಣಿಸು. ಈ ಇಬ್ಬರೂ ಭಾವೀಪತಿಗಳನ್ನು ಮೈಮುರಿ ಹಣಿದು ಸುಡುಗಾಡಿಗೆ ಅಟ್ಟಿಬಿಡು."

ಹರಟೆ ಹೊಡೆಯುಹೊಡೆಯುತ್ತ ಮೂರು ತಾಸು ಹೊತ್ತೇರಿತು. ಇನ್ನು ಮುಂದಿನ ಸ್ಟೇಶನ್ನಿನಲ್ಲಿ ಗಾಡಿ ನಿಲ್ಲುವದು. ಆಗ ಮಡಮಳೂ ಸಾಹೇಬರೂ 'ಹಾಜರ' ಗಾಗಿ ರಿಫ್ರೆಶ್‌ಮೆಂಟ ರೂಮಿಗೆ ಹೋಗುವರು.- ಆಗ ನನ್ನ ಲಕ್ಷ್ಯಕ್ಕೆ ಬಂದಿರಲಿಲ್ಲ, ಈಗ ನೋಡಿವೆ ಚಹ ಕುಡಿದ ನಂತರ ಮಡಮಳ ತುಟಿಗಳು ಸಪ್ಪಗಾಗಿವೆ! ತಿಳಿಯಿತು ಬಣ್ಣ 'ಕಚ್ಚಾ' ಇದೆಯೆಂದು. ಮಡಮಳು ಒಂದು ಬಂಗಾರದ ಡಬ್ಬಿಯನ್ನು ತೆಗೆದಳು. ಅದರೊಳಗಿಂದ ಒಂದು ಚಿಕ್ಕ ಕನ್ನಡಿ, ಒಂದು ಕೆಂಪು ಬಣ್ಣದ ವಡಿ, ಒಂದು ಪಾವುಡರದ ಡಬ್ಬಿ ಹೊರಬಿದ್ದವು. ಕೆಂಪು ವಡಿಯನ್ನು ತುಟಿಗೆ ತಿಕ್ಕಿಕೊಂಡು ಮೂಗಿನಮೇಲೆ ತುಸು ಪಾವುಡರ ಹಚ್ಚಿಕೊಂಡು ಮಡಮಳು ತನ್ನ ಮುಖವನ್ನು ಸರಿಪಡಿಸಿಕೊಂಡಳು.

ಗಾಡಿ ನಿಂತಿತು. ಮಡಮಳೆಂದಳು. "ಚಟರ್ಜಿ, ನಾನು ಬ್ರೆಕ್‌ಫಾಸ್ಟಿಗಾಗಿ ಹೋಗುತ್ತೇನೆ. ಟೀಮ ಮತ್ತು ಬ್ಲಾಟೋನನ್ನು ಇಲ್ಲಿಯೆ ಬಿಟ್ಟಿರುತ್ತೇನೆ. ತುಸು ಲಕ್ಷ್ಯವಿರಲಿ. ಇಬ್ಬರೂ ಎದ್ದು ಎಲ್ಲಿಯಾದರೂ ಹೊಡೆದಾಡಿಯಾರು ! ನಿಮ್ಮ ಕಡೆಯಿಂದ ನೀಗದಂತಾದರೆ ಸರಪಳಿಯನ್ನು ಜಗ್ಗಿ ಬಿಡಿರಿ."

ಆಹಾ, ಎಂಥ ಹಗುರಾದ ಕೆಲಸವನ್ನು ಹೇಳಿ ಹೋಗಿದ್ದಾಳೆ ! ಸುಮಾರು ಅರ್ಧತಾಸಿನ ನಂತರ ಗಾಡಿ ಕಾನಪುರದಲ್ಲಿ ನಿಲ್ಲುವದು, ಆಗ ಈ

ಮಡಮಳು ತಬ್ಬಿಗೆ ತಿರುಗಿ ಬರುವಳು. ಅಲ್ಲಿಯವರೆಗೆ ಬದುಕಿ ಇದ್ದರಷ್ಟೆ ! ಕೈಯಲ್ಲಿಯ ಬಡಿಗೆಯನ್ನು ಇನ್ನೂ ಅಷ್ಟು ಗಟ್ಟಿಯಾಗಿ ಹಿಡಿದುಕೊಂಡು ಮತ್ತೆ ದುರ್ಗಾನಾಮವನ್ನು ಜಪಿಸಹತ್ತಿದೆ.

ಉದ್ದ ಸಾಹೇಬ ಎದ್ದು ಕುಳಿತ. ಆಕಳಿಸಿದ, ಕಣ್ಣು ತಿಕ್ಕಿದ, ಬಟ್ಟು ಲಟಕ್ ಅನಿಸಿಕೊಂಡ. ನನ್ನ ಕಡೆಗೆ ಒಂದುಸಾರೆ ತಿರುಗಿ ನೋಡಿದ. ಆದರೆ ಏನೂ ಮಾತಾಡಲಿಲ್ಲ. ಮುಗ್ಗರಿಸುತ್ತ ಬಾಥ್‌ರೂಮಿಗೆ ಹೊರಟುಹೋದ.

ಇಷ್ಟರಲ್ಲಿ ಲತ್ತ ಸಾಹೇಬನು ಕಪ್ಪೆಯಂತೆ ಹಾರಿ ದೊಪ್ಪನೆ ನನ್ನ ಬದಿಯಲ್ಲಿ ಬಂದು ಕುಳಿತುಕೊಂಡ. ನಾನು ಹೆದರಿಕೆಯಿಂದ ಚೀರುವವನಿದ್ದೆ; ಆಮೊದಲೇ ಅವನು ನನ್ನ ಕೈ ಅಲ್ಲಾಡಿಸಿ "ಗುಡ್ ಮಾರ್ನಿಂಗ ಸರ್, ನಾನು ಕ್ರಿಸ್ತೋಫರ ಕೋಲಂಬಸ್" ಎಂದ.

ನನಗೆ ತುಸು ಧೈರ್ಯ ಬಂದಂತಾಯಿತು. "ಸಲಾಮು ಹುಜೂರ" ಎಂದೆ.

"ನನ್ನ ಹತ್ತಿರ ಹತ್ತು ಕೋಟಿ ಡಾಲರುಗಳಿವೆ. ಮಿನಿಮಿನೀಟಿಗೆ ನನ್ನ ಉತ್ಪನ್ನ...."

"ಹುಜೂರರ ಐಶ್ವರ್ಯಕ್ಕೆ ಎಣೆಯಿದೆಯೆ !"

ಬ್ಲಾಟೋ ನನ್ನ ಎದೆಗೆ ಬೊಟ್ಟು ಮುಟ್ಟಿಸಿ ಹೇಳಿದ. "ಲುಕ್ ಹಿಯರ್ ಬಾಬೂ, ನಾನು ನಿಮಗೆ ಐದು ರೂಪಾಯಿ ಇನಾಮು ಕೊಡುವೆನು"

"ಅದೇಕೆ ಹುಜೂರ ?"

"ಮಿಸ್ ಜಿಲ್ಬರಳು ಒಪ್ಪುವಂತೆ ನೀವು ಮಾಡಲೇ ಬೇಕು. ನಾನು ನಿಮ್ಮಿಬ್ಬರ ಎಲ್ಲ ಮಾತನ್ನು ಕೇಳಿದ್ದೇನೆ. ನಿಮ್ಮ ಮೇಲೆಯೆ ಎಲ್ಲವೂ ಅವಲಂಬಿಸಿದೆ. ನೀವೆ ಬ್ರಾಯಿಡ ಮಾಸ್ತರ. ಆ ಟೀಮಥೀ ಟೋಪರ ಮಹಾ ಲಫಂಗ ! ಅವನ ಎಲ್ಲ ಆಸ್ತಿ ನನ್ನ ಕಡೆಗೆ ಮತ್ತೀ ಬಿದ್ದಿದೆ. ಆವಾ ಭಯಂಕರ ಕುಡುಕ, ಪಾಪರ. ಆತನನ್ನು ಮದುವೆಯಾದರೆ ಪಾಪ ಮಿಸಾ ಜಿಲ್ಬರಳು ಕೊರಗಿ ಕೊರಗಿ ಸಾಯುವದು ನಿಶ್ಚಯ."

ಹೀಗೆಂದು ಬ್ಲಾಟೋ ಬಿಕ್ಕಿ ಬಿಕ್ಕಿ ಅಳತೊಡಗಿದ. ಒಂದು ಬಾಟಲಿ

ಯಲ್ಲಿ ತುಸು ಸೆರೆ ಉಳಿದಿತ್ತು, ಅದನ್ನೂ ಅಷ್ಟು ಸೆಡ್ಡಿ ಅಂದ. "ಬಾಬೂ, ನೀವು ಪೂರ್ವಜನ್ಮವನ್ನು ಒಪ್ಪುತ್ತೀರಾ ?"

"ಅವಶ್ಯವಾಗಿ"

"ನಾನು ಪೂರ್ವಜನ್ಮದಲ್ಲಿ ಒಂದು ನೀರಡಿಸಿದ ಚಾತಕಪಕ್ಷಿಯಾಗಿದ್ದೆನು. ಮತ್ತು ಈ ಮಡಮಳು ಒಬ್ಬ ರೂಪವತಿಯಾದ ಪಾನದಾತ್ರಿಯಾಗಿದ್ದಳು. ನಮ್ಮಿಬ್ಬರಲ್ಲಿ......."

ಇಷ್ಟರಲ್ಲಿ ಬಾಥ್‌ರೂಮಿನ ಬಾಗಿಲ ಸರಿದಾಡಿತು. ಬ್ಲಾಟೋ ನನಗೆ ಐದುಬೊಟ್ಟುಗಳಿಂದ ಸನ್ನೆ ಮಾಡಿ ತಟ್ಟನೆ ತನ್ನ ಸ್ಥಳಕ್ಕೆ ಹೋಗಿ ಮಲಗಿಕೊಂಡು ಗೊರಿಕೆ ಹೊಡೆಯತೊಡಗಿದ.

ಉದ್ದಸಾಹೇಬ–ಮಡಮಳು ಈತನಿಗೆ ಟಿಮ್ಮೀ ಎಂದೆನ್ನುತ್ತಾಳೆ. ಬಾಥಾರೂಮಿನಿಂದ ಹೊರಬಿದ್ದು ತನ್ನ ಬೆಂಚಿನಮೇಲೆ ಬಂದು ಕುಳಿತ. ಆಗ ಬ್ಲಾಟೋ ನಿದ್ದೆಯಿಂದೆದ್ದವನಂತೆ ಸೋಗು ಮಾಡಿ ಆಕಳಿಸುತ್ತ ಮೈ ಒಡ್ತು ಮುರಿದ ಹಾಗು ನನ್ನ ಕಡೆಗೊಮ್ಮೆ ಕರುಣಾದೃಷ್ಟಿಯಿಂದ ನೋಡಿ ಬಾಥ್‌ರೂಮಿನೊಳಗೆ ಹೊಕ್ಕ.

ಈಗ ಟಿಮ್ಮಿಯು ಸರತಿ ಬಂತು. ಬ್ಲಾಟೋ ಒಳಗೆ ಹೋದ ಕೂಡಲೆ ಅವನು ನನ್ನ ಹತ್ತಿರ ಬಂದು ನನ್ನ ಕೈಯನ್ನು ಗಟ್ಟಿಯಾಗಿ ಹಿಡಿದ. ನಾನು ಮೊದಲೇ 'ಗುಡ್‌ಮಾರ್ನಿಂಗ ಸರ್' ಎಂದು ಬಿಟ್ಟೆ.

ಟಿಮ್ಮೀ ನನ್ನ ತೋಳನ್ನು ಬಲವಾಗಿ ತಿರುವಿದ.

"ಉ:ಫ್"

ಟಿಮ್ಮೀ ಎಂದ. "ನಿನ್ನ ಎಲುವು ಪುಡಿ ಪುಡಿ ಮಾಡೇನು ?"

ಹೆದರುತ್ತ ನಾನಂದೆ. "ಇಯೆಸ್ ಸರ್"

"ನಿನ್ನನ್ನು ಥಳಿಸಿ 'ಜೆಲ್ಲೀ' ಮಾಡ್ಯೇನು"

"ಇಯೆಸ್ ಸರ್"

"ಎರಿನ್ ಜೆಬ್ಬರಳನ್ನು ನಾನು ಮದುವೆಯಾಗಿಯೇ ತೀರುವೆನು. ನಾನು ಎಲ್ಲವನ್ನೂ ಕೇಳಿದ್ದೇನೆ. ನೀನು ನನ್ನಪರವಾಗಿ ಅವಳಿಗೆ ಹೇಳದಿದ್ದರೆ ನಿನಗೆ ಇಲ್ಲಿಯೇ ಅಪ್ಪಣೆಯೆಂದು ತಿಳಿ"

"ಇಯೆಸ್ ಸರ್"

“ನನ್ನ ಹತ್ತಿರ ಅಗಾಧ ಸಂಪತ್ತಿಯಿದೆ. ಐದು ಹೋಟೆಲು, ಹತ್ತು ಹಡಗದ ಕಂಪನಿ; ಇಪ್ಪತ್ತೈದು ಹಂದಿಯ ಕಾರಖಾನೆ. ಬ್ಲಾಟೋನ ಹತ್ತಿರ ಏನಿದೆ? ಒಂದು ಸೆರೆಯ ಭಟ್ಟಿ—ಅದು ಕಳಪೆ. ಎಲ್ಲ ಬಂಡವಾಳ ನನ್ನದು. ಬ್ಲಾಟೋ ದುಂದುಕುಡುಕ, ಲಫಂಗ, ಬದ್‌ಮಾಷ್……”

ಬ್ಲಾಟೋ ಸಿಟ್ಟಿಗೆದ್ದು ಎಲ್ಲವನ್ನೂ ಕೇಳುತ್ತಿದ್ದನೋ ಏನೋ!

ಒಮ್ಮೆಲೆ ಬಾಥ್‌ರೂಮಿನಿಂದ ಹೊರಬಿದ್ದು, ಹಾಗು ಟೇಬಲಿನ ಕಡೆಗೆ ಹಾರಿ ಮುಷ್ಟಿಯನ್ನು ತೋರಿಸಿ ಗರ್ಜಿಸಿದ “ಕುಡುಕ ಯಾವನವ? ಲಫಂಗ ಯಾವನೋ? ಬದ್‌ಮಾಷ್ ಯಾವನೋ?”



ಇಬ್ಬರಿಗೂ ಕೈಗೆ ಕೈ ಹತ್ತಿತು.

ನಮ್ಮ ದೇಶೀ ಬೈಗಳಲ್ಲಿ ಪ್ರಸಾದ ಗುಣವು ಹೆಚ್ಚೆಂಬುದನ್ನು ಎಲ್ಲರೂ ಒಪ್ಪಬೇಕು. ಆದರೆ ನಿಚ್ಚಳವಾದ ಧ್ವನಿ ಹಾಗೂ ಆರ್ಭಟೆಯನ್ನು ಕೇಳುವದಾದರೆ ವಿಲಾಯತೀ ಬೈಗಳನ್ನು ಕೇಳಿರಿ; ವಿಶೇಷತಃ ಅಮೇರಿಕನ್,

ಒಂದೊಂದು ಶಬ್ದವೆಂದರೆ ತೋಫಿನ ಗುಂಡಿನಂತೆ ಕಿವಿಯೊಳಗೆ ಹೋಗಿ ಹೃದಯವನ್ನು ನಡುಗಿಸಿ ಬಿಡುವವು. ಇಂಗ್ಲಿಷು ನನಗೆ ಚೆನ್ನಾಗಿ ಬರುವದಿಲ್ಲ. ಆದ್ದರಿಂದ ಎಲ್ಲ ಬೈಗಳ ಅರ್ಥವು ಚೆನ್ನಾಗಿ ತಿಳಿಯಲಿಲ್ಲ. ಆದರೂ ಅವುಗಳ ಸ್ವಾದವನ್ನು ನೋಡಲು ಏನೂ ತಡೆಯಾಗಲಿಲ್ಲ.

ನೋಡಿದೆ, ಒಂದು ವಿಷಯದಲ್ಲಿ ಸಾಹೇಬ ಜನರು ನಮಗಿಂತ ದುರ್ಬಲರಾಗಿದ್ದಾರೆ. ಅವರು ವಾಗ್ಯುದ್ಧವನ್ನು ಬಹಳ ಹೊತ್ತು ಮಾಡಲಾರರು. ಎರಡು ಮಿನೀಟು ಸಹ ಆಗಿರಲಿಲ್ಲ, ಇಬ್ಬರಿಗೂ ಕೈಗೆ ಕೈ ಹತ್ತಿತು. ನಾನು ಕಿಂಕರ್ತವ್ಯ ವಿಮೂಢನಾಗಿ ನೋಡುತ್ತ ನಿಂತೆ. ಗಾಡಿಯು ಅಷ್ಟರಲ್ಲಿ ಕಾನಪುರಕ್ಕೆ ಬಂದು ನಿಂತಿರುವದು ನನಗೆ ಎಚ್ಚರವೇ ಇಲ್ಲ.

ದಡದಡನೆ ಮಡಮಸಾಹೇಬಳು ಓಡಿ ಬಂದಳು. ಈ ಗಜಕಚ್ಛಪಗಳ ಯುದ್ಧವನ್ನು ನಿಲ್ಲಿಸುವದು ಅವಳ ಅಳವು ಮೀರಿದ್ದಾಗಿತ್ತು. "ಟಿಮ್ಮೀ ಡೀಯರ ಡೋಂಟ್—ಬ್ಲಾಟೋ ಡಾರ್ಲಿಂಗ ಡೋಂಟ್ — ಪ್ಲೀಜ ಪ್ಲೀಜ ಡೋಂಟ" ಎಂದು ಎಷ್ಟೋ ಒದರಿಕೊಂಡಳು. ಆದರೆ ಕೇಳುವವರಾರು? ಪ್ರಕರಣ ಬೆಳೆಯುತ್ತಿರುವದನ್ನು ನೋಡಿ ನಾನು ಗಾಡಿಯಿಂದ ಇಳಿದು ಓಡಿದೆ.

ಫಸ್ಟ್ ಸೆಕಂಡ ಕ್ಲಾಸಿನ ಎಲ್ಲ ಡಬ್ಬಿಗಳೂ ತೆರವಾಗಿದ್ದವು. ಎಲ್ಲರೂ ಡಾಯಿನಿಂಗ ಕಾರಿನಲ್ಲಿ ಕುಳಿತುಕೊಂಡು ಊಟ ಮಾಡುತ್ತಿದ್ದರು. ಯಾರಿಗೆ ಹೇಳಲಿ? ಅಷ್ಟರಲ್ಲಿ ಬಿಳೀ ಫ್ಲ್ಯಾನೆಲಿನ ಚಣ್ಣವನ್ನು ಹಾಕಿದ ಒಬ್ಬ ಸಾಹೇಬನು ಸೀಟಿ ಹೊಡೆಯುತ್ತ ಓಡಾಡುತ್ತಿರುವದು ಕಣ್ಣಿಗೆ ಬಿತ್ತು. ನಾನು ಓಡುತ್ತ ಅವನ ಕಡೆಗೆ ಹೋಗಿ ಲಗುಬಗೆಯಿಂದ "ಕಮಾ ಸರ್, ಲೇಡೀಸು ಮೇಲೆ ಭಯಂಕರ ಪ್ರಸಂಗ ಬಂದಿದೆ" ಎಂದು ಹೇಳಿದೆ. ಸಾಹೇಬ ಜೋರಿನಿಂದ ಮತ್ತೆ ಸೀಟಿ ಹೊಡೆದು ನನ್ನ ಕೂಡ ಓಡಿಬಂದ.

ಮಡಮಳು ಆಗ ತನ್ನ ಬಡಿಗೆಯನ್ನು ತೆಗೆದುಕೊಂಡು ನಿಷ್ಪಕ್ಷಪಾತದಿಂದ ಇಬ್ಬರನ್ನೂ ಹೊಡೆಯುತ್ತಿದ್ದಳು. ಆದರೆ ಅವರಿಗೆ ಇದರ ಪರಿವೆಯೇ ಇರಲಿಲ್ಲ. ಒಂದೇ ಸಮನೇ ಹೊಡೆದಾಡುತ್ತಿದ್ದರು. ಆಗಂತುಕ ಸಾಹೇಬನು "ಹ್ಯಾಲೋ ಜುಆನ್, ಏನಿದು ತಂಟೆ?" ಎಂದು ಕೇಳಿದ. ಮೇಡಮಳು ಸ್ವಲ್ಪದರಲ್ಲಿಯೆ ಎಲ್ಲ ವಿಷಯವನ್ನು ತಿಳಿಸಿದಳು. ಹೊಸ ಸಾಹೇಬ ಟಿಮ್ಮೀ

ಮತ್ತು ಬ್ಲಾಟೋ ಇಬ್ಬರನ್ನೂ ತಡೆಯುವ ಪ್ರಯತ್ನ ಮಾಡಿದ. ಆದರೆ ಅವರಿಬ್ಬರೂ ತಿರುಗಿ ಅವನ ಮೈಮೇಲೆಯೆ ಬಿದ್ದರು. ಆಗ ಹೊಸ ಸಾಹೇಬನೂ ಕೈಹಚ್ಚಿದ.

ಅಬ್ಬಬ್ಬ! ಏನು ಆ ಗುದಿಕೆಗಳು! ಅವನ ಹೊಡತಕ್ಕೆ ಇಬ್ಬರೂ ಕಂಗೆಟ್ಟರು. ಟೀಮಿಯ ತಲೆ ಹೋಗಿ ಬಾಗಿಲಕ್ಕೆ ಅಪ್ಪಳಿಸಿತು. ಕಣ್ಣು ಕತ್ತಲೆಗವಿದು ಅಲ್ಲಿಯೆ ಉರುಳಿದ. ಬ್ಲಾಟೋನ ಸ್ಥಿತಿಯಂತೂ ವಿಚಿತ್ರವಾಗಿತ್ತು. ಆತನು ಮಣ್ಣುಮುದ್ದೆಯಂತೆ ದಪ್ಪನೆ ನೆಲದ ಮೇಲೆ ಬಿದ್ದ. ಹಾಗು ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ. ಪ್ರಕರಣ ಇಲ್ಲಿಗೆ ತಣ್ಣಗಾಯಿತು.

* * * * *

ತುಸು ವಿಶ್ರಾಂತಿಯನ್ನು ತೆಗೆದುಕೊಂಡು ಮೇಮಳು ನನಗೆ ಹೊಸ ಸಾಹೇಬನ ಪರಿಚಯುವನ್ನು ಮಾಡಿಕೊಟ್ಟಳು. "ಇವರು ಪ್ರಸಿದ್ಧ ಮಿಸ್ಟರ ಬಿಲ್ ಬಾವುಂಡರ. ಮುಷ್ಟಿಯುದ್ಧದಲ್ಲಿ ಅತ್ಯಂತ ಪ್ರವೀಣರು.... ಹಾಗೂ ಇವರು ಮಿಸ್ಟರ ಚಟರ್ಜೀ, ವ್ಹೇರೀ ಡೀಯರ ಓಲ್ಡ ಫ್ರೆಂಡ"

ಸಾಹೇಬನು ನನ್ನ ಮುಖವನ್ನು ನೋಡಿ. "ಸಮ್ ಬಿಯರ್ಡ ?" ಎಂದ.

"ಗಡ್ಡವಿದ್ದರೇನಾಯಿತು, ಇವರು ಒಳ್ಳೇ ಜ್ಞಾನಿಗಳಾಗಿದ್ದಾರೆ" ಎಂದು ಮಡಮ ಎಂದಳು.

ಸಾಹೇಬನು ನನ್ನ ಕೈ ಹಿಡಿದು ರಭಸದಿಂದ ಅಗಳಾಡಿಸಿ "ಹಾ–ಡೂ-ಡೂ; ಚಳಿ ಬಹಳ ಬಿದ್ದಿದೆಯಲ್ಲವೆ ?" ಎಂದು ಕೇಳಿದ.

ತಟ್ಟನೆ ನನ್ನ ತಲೆಯಲ್ಲಿ ಒಂದು ವಿಚಾರ ಹೊಳೆಯಿತು. ಮಡಮ ಸಾಬಳ ಕಿವಿಯಲ್ಲಿ ಹೇಳಿದೆ. "ನೋಡಿರಿ ಮಿಸ್ ಜುಲನ್, ಇಷ್ಟು ಗೊಂದಲದಲ್ಲಿ ನೀವೇಕೆ ಬೀಳುವಿರಿ? ಟಿಮೀ ಮತ್ತು ಬ್ಲಾಟೋ ಇವರಿಬ್ಬರೂ ಈಗ ಹಣ್ಣಾಗಿದ್ದಾರೆ. ನನ್ನ ಅಭಿಪ್ರಾಯದಂತೆ ನೀವು ಈ ಬಿಲ್‌ಸಾಹೇಬರನ್ನೇ ಮದುವೆಯಾಗಿಬಿಡಿರಿ. ಬಹಳ ಉತ್ತಮ ಮನುಷ್ಯರಾಗಿದ್ದಾರೆ."

"ರಾಯಿಟೋ! ಇಷ್ಟು ಹೊತ್ತು ನಾನು ಈ ಮಾತು ಮರೆತುಬಿಟ್ಟಿದ್ದೆನು. ಐಯ್ ಸೇ–ಬಿಲ್, ನೀವು ನನ್ನನ್ನು ಮದುವೆಯಾಗುವಿರಾ?" ಎಂದಳು ಮಡಮ.

ಸಾಹೇಬನೆಂದ. " ರಾದರ್, ಆಗುವದಿಲ್ಲವೆಂದು ಯಾರು ಅನ್ನು ವರು....?"

ಹರಿ ! ಹರಿ ! ಸಾಹೇಬ ಜಾತಿಯು ತೀರಾ ನಾಚಿಕೆಗೆಟ್ಟದ್ದು. ಬಿಲ್ ನನ್ನು ತಡೆದು ನಾನಂದೆ " ಸಾಹೇಬ, ನಿಲ್ಲಿರಿ. ಈಗಿನಿಂದಲೇ ಹೀಗೇಕೆ ? ನಾನು ಕನ್ಯಾದಾತಾ-ಬ್ರಾಯಿಡ ಮಾಸ್ಟರ. ಮೊದಲು ನಿಮ್ಮ ಕುಲಶೀಲ ವನ್ನು ತಿಳಿದುಕೊಂಡು ಆಮೇಲೆ ನನ್ನ ಅಭಿಪ್ರಾಯವನ್ನೂ ತಿಳಿಸುವೆನು. "

ಬಿಲ್ ಹೇಳತೊಡಗಿದ. " ನನ್ನ ಅಜ್ಜ ಮೊಜೆಗಾರನಾಗಿದ್ದನು. ನನ್ನ ತಂದೆಯೂ ಚಿಕ್ಕಂದಿನಲ್ಲಿ ಮೊಜೆ ಹೊಲಿಯುತ್ತಿದ್ದನು...."

" ಇದರಿಂದ ಕುಲದ ಮರ್ಯಾದೆಯೇನೂ ನಷ್ಟವಾಗುವದಿಲ್ಲ. ನಿಮ್ಮ ಉತ್ಪನ್ನವೆಷ್ಟಿದೆ ಹೇಳಿರಿ " ಎಂದೆ ನಾನು.

ಬಿಲ್ ತುಸು ಲೆಕ್ಕ ಹಾಕಿ ಹೇಳಿದ. " ಮಿನಿಟಿನಲ್ಲಿ ಹತ್ತು ಸಾವಿರ. ತಾಸಿನಲ್ಲಿ ಆರು ಲಕ್ಷ ! ಆದರೆ ಚಿಂತಿಸುವ ಕಾರಣವಿಲ್ಲ. ನನ್ನ ಆಬಚಿಯು ಸತ್ತನಂತರ ಉತ್ಪನ್ನವು ಇನ್ನೂ ಬೆಳೆಯುವದು. ಅವಳವು ಇಪ್ಪತ್ತೈದು ದೊಡ್ಡ ದೊಡ್ಡ ಕೆರೆಗಳಿವೆ-ಉಪ್ಪುನೀರಿನವು-ಅವುಗಳಲ್ಲಿ ' ವ್ಹೇಲ ' ಮೀನಗಳು ಕಿಲಿಬಿಲಿ ಮಾಡುತ್ತಿರುತ್ತವೆ. "

" ಸಾಕು ಸಾಕು. ಇನ್ನು ಹೆಚ್ಚಿಗೆ ಹೇಳುವ ಆಗತ್ಯವಿಲ್ಲ. ನನ್ನ ಒಪ್ಪಿಗೆ ಇದೆ. ತುಸು ಮುಂದೆ ಬನ್ನಿರಿ. ನಾನು ಆಶೀರ್ವಾದ ಮಾಡುವೆ; ರೀಯಲ್ ಹಿಂದೂ ಸ್ಟಾಯಿಲ್ " ಎಂದು ಅಂದೆ.

ಆದರೆ ಅಕ್ಷತೆ, ದೂರ್ವಾ ಸಿಗಬೇಕೆಲ್ಲಿ ? ಕಿಡಕಿಯೊಳಗೆ ಹಣಿಕಿ ಹಾಕಿ " ಏ ಕೂಲೀ ಬೇಗನೆ ತುಸು ಹುಲ್ಲು ಕಿತ್ತಿಕೊಂಡು ಬಾ, ರೊಕ್ಕ ಕೊಡು ತ್ತೇನೆ " ಎಂದು ಹೇಳಿದೆ.

ಇಂಗ್ರೇಜೀ ಆಶೀರ್ವಾದವಂತೂ ನನಗೆ ಗೊತ್ತಿಲ್ಲ. ಕೇಳಿದೆ, " ಆಕ್ಷೇ ಪವಿರದಿದ್ದರೆ ನಮ್ಮ ಭಾಷೆಯಲ್ಲಿಯೆ ಹೇಳಬಹುದಲ್ಲವೆ ? "

" ಅವಶ್ಯ ಅವಶ್ಯ. "

ಸಾಹೇಬನ ತಲೆಯಮೇಲೆ ಹಿಡಿ ಹುಲ್ಲು ಬಿಟ್ಟು ನಾನೆಂದೆ." ಚಿರಂಜೀವಿ ಯಾಗು, ಹಣವಂತೂ ಬೇಕಾದಷ್ಟಿದೆ. ಮಕ್ಕಳೂ ಆಗುವರು. ಲಕ್ಷ್ಮಿ ಯನ್ನಂತೂ ಈಗ ಒಪ್ಪಿಸುತ್ತಿದ್ದೇನೆ. ಆದರೆ ಎಚ್ಚರ, ಶಿರೆ-ಗಿರೆವಿಶೇಷ

ಕುಡಿಯಬಾರದು. ಆಂ ! ಇಲ್ಲವಾದರೆ ಬ್ರಹ್ಮಶಾಪ ತಟ್ಟೀತು !" ಸಾಹೇಬನು ಮತ್ತೆ ನನ್ನ ಕೈ ಹಿಡಿದು ಜಗ್ಗಿದ. ಕೈಯು ಕೀಲೇ ತಪ್ಪಿತು !

ಮದುಮಗಳಿಗೆ ಆಶೀರ್ವಾದ ಮಾಡಿದೆ. "ಮಗಳೇ, ನಿನ್ನ ತುಟಿಗಳ ಸಿಂದೂರವು ಅಕ್ಷಯವಾಗಿರಲಿ. ವೀರಪ್ರಸವಿನಿಯಾಗುವ ಆವಶ್ಯಕತೆಯಿಲ್ಲ,- ಈ ಆಶೀರ್ವಾದವು ನಮ್ಮ ಅಬಲೆಯರಿಗಾಗಿ 'ರಿಜರ್ವ' ಆಗಿರಲಿ. ನೀ ನಿನ್ನ ಜತ ಕರೇಮನುಷ್ಯನ ದು:ಖದ ನಿಮಿತ್ತಳಾಗದಿರು. ನಾಲ್ಕಾರು ಶಾಂತ ಶಿಷ್ಟ ಮಕ್ಕಳನ್ನು ಕಟ್ಟಿಕೊಂಡು ಮನೆತನವನ್ನು ಸಾಗಿಸು."



**ಮಗಳೇ, ನಿನ್ನ ತುಟಿಗಳ ಸಿಂದೂರವು ಅಕ್ಷಯವಾಗಿರಲಿ.**

ಮದುಮಗಳು ಒಮ್ಮಿಂದೊಮ್ಮೆ ತನ್ನ ಮುಖವನ್ನೆತ್ತಿ ಐದು ದಿನಗಳಿಂದ ಬೆಳೆದು ಮುಳ್ಳಿನಂತಿದ್ದ ನನ್ನ ಗಡ್ಡದಮೇಲೆ........"

"ಛೀ ಛೀ" ಎಂದರು ವಿನೋದಬಾಬೂ.

"ಅದೇಕೆ, 'ದೇವೀ ಚೌಧುರಾಣಿ'ಯಲ್ಲಿ ಹೀಗೆಯೆ ಬರೆದಿದೆಯಲ್ಲ!" ಎಂದರು ಚಟರ್ಜಿ.

"ಒಳ್ಳೇದು ಚಟರ್ಜಿ ಮಹಾಶಯ, ಹಣ್ಣು ಮೆಣಸಿನಕಾಯಿಯ ರುಚಿ ಹೇಗಿತ್ತು?"

"ಅದರಲ್ಲಿ ಕಾರವಿಲ್ಲ. ಎಲ, ಅದರಲ್ಲಿ ಪದ್ಧತಿಯೇ ಹಾಗಿದೆ. ಇದೇ ರೀತಿಯಾಗಿ ಅವರು ತಮ್ಮ ಶ್ರದ್ಧಾಭಕ್ತಿಗಳನ್ನು ಪ್ರಕಟಗೊಳಿಸುತ್ತಾರೆ. ಇದರಲ್ಲಿ ನಾಚುವ ವಿಷಯವೇನಿದೆ?"

ಚಟರ್ಜಿಯವರು ಹೇಳತೊಡಗಿದರು. "ಆನಂತರ ನೋಡಿದೆ, ಉದ್ದ ಮತ್ತು ಲಠ್ಠ ಸಾಹೇಬರಿಬ್ಬರೂ ಸಣ್ಣ ಮೋರೆ ಮಾಡಿಕೊಂಡು ಇಳಿಯುತ್ತಿದ್ದಾರೆ-ಇಬ್ಬರು ಕೂಲಿಗಳು ಅವರ ಸಾಮಾನುಗಳನ್ನು ಇಳಿಸುತ್ತಿದ್ದಾರೆ.

ಗಾಡಿ ಬಿಟ್ಟಿತು. ಬಿಲ್ ಹಾಗು ಜೂಲಿಅನ್ ಕೈಯಲ್ಲಿ ಕೈ ಹಾಕಿಕೊಂಡು ಕುಣಿಯತೊಡಗಿದರು. ನಾನು ಕಣ್ಣುಬಿಡುತ್ತ ನಿಂತೆ.

ಜೂಲಿಅನ್‌ಳೆಂದಳು. "ಚಟರ್ಜೀ, ಇಂತಹ ಆನಂದದ ಸಮಯದಲ್ಲಿ ನೀವು ಹೀಗೆ "ಗ್ಲಮ್" ಆಗಿ ಕುಳಿತುಕೊಳ್ಳಬೇಡಿರಿ. ನಮ್ಮ ನೃತ್ಯದಲ್ಲಿ ನೀವೂ ಸೇರಿರಿ."

ನಾನೆಂದೆ. "ನನ್ನ ಟೊಂಕದಲ್ಲಿ ಶೂಲಿಯಿದೆ. ಕುಣಿಯಬಾರದೆಂದು ವೈದ್ಯರಾಜರು ಹೇಳಿದ್ದಾರೆ."

"ಹಾಗಾದರೆ ನೀವು ಹಾಡಿರಿ, ನಾವು ಕುಣಿಯುತ್ತೇವೆ."

ಏನು ಮಾಡಬೇಕು? ಯುವಕರ ಕೈಯಲ್ಲಿ ಸಿಕ್ಕಿದ್ದೆ. ಒಂದು ರಾಮಪ್ರಸಾದೀ ಹಾಡನ್ನು ಆರಂಭಿಸಿದೆ.

ಮೊಗಲಸರಾಯಿಯವರೆಗೆ ದಾರಿಯಲ್ಲೆಲ್ಲ ಹೀಗೆಯೆ ನಡೆದಿತ್ತು. ಕಡೆಗೆ ಮೊಗಲಸರಾಯ ಸ್ಟೇಶನ್ ಬಂತು. ಕಲಕತ್ತೆಗೆ ಹೋದಕೂಡಲೆ ತಮ್ಮ ಮದುವೆಯಾಗುವದೆಂದೂ ಮೂರುದಿನಗಳ ನಂತರ ಗ್ರ್ಯಾಂಡ ಹಾಟೆಲಿನಲ್ಲಿ ಬಂದು ಭೆಟ್ಟಿಯಾಗಬೇಕೆಂದೂ ಮಡಮುಳು ನನಗೆ ಹೇಳಿದಳು. ಅದೆಷ್ಟೋ ಶೇಕಹ್ಯಾಂಡ. ಅದೆಷ್ಟೋ ಅನುರೋಧ. ಆನಂತರ ನಾನು

ಕಾಶಿಯ ಗಾಡಿಯಲ್ಲಿ ಹೋಗಿ ಕುಳಿತುಕೊಂಡೆ! .... ಮರುದಿನ ಮತ್ತೆ ಕಲಕತ್ತೆಗೆ ಹೊರಟೆ.

* * * * *

ವಿನೋದಬಾಬುಗಳೆಂದರು. "ಏನು ಚಟರ್ಜಿಮಹಾಶಯ, ನಿಮ್ಮ ಮನೆಯವರಿಗೆ ಇದೆಲ್ಲ ಸುದ್ದಿ ಗೊತ್ತಾಯಿತೋ ಇಲ್ಲವೋ?"

"ಅದೇಕೆ ಗೊತ್ತಾಗುವದಿಲ್ಲ? ಮೊದಲೆ ಒಳ್ಳೇ ಸ್ವಭಾವ. ಮೇಲೆ ಐವತ್ತುವರ್ಷ ವಯಸ್ಸು. ನಿಮ್ಮ ಈಗಿನ ಕಾಲದ ಹೆಂಡತಿಯರಂತೆ ಅಭಿಮಾನದಿಂದ ಸಿಡಿದುಕೊಂಡು ಕೂಡುವಂಥ ತಿಳಿಗೇಡಿಯಲ್ಲ ಅವಳು. ಮನೆಗೆ ಹೋದ ಕೂಡಲೆ ನಾನೆ ಎಲ್ಲವನ್ನು ಹೇಳಿಬಿಟ್ಟಿದ್ದೆ."

"ಕೇಳಿ ಏನಂದನು?"

"ಕೂಡಲೆ ಒಬ್ಬ ಉಡಿಯಾ ಕೆಲಸಿಗನನ್ನು ಕರೆದು ಅವನಿಗೆ. "ಈ ಮುದುಕನ ಗದ್ದವನ್ನು ಚೆನ್ನಾಗಿ ಕೆತ್ತು" ಎಂದು ಹೇಳಿದಳು. ಆನಂತರ ಆ ಬಂಗಾರದ ಉಂಗುರವನ್ನು ಕಸಿದುಕೊಂಡು ಅದನ್ನು ಗಂಗಾಜಲದಲ್ಲಿ ತೊಳೆದು ತನ್ನ ಬೆರಳಲ್ಲಿ ಹಾಕಿಕೊಂಡಳು."

"ಮದುವೆಯ ಊಟ ಹೇಗಾಯಿತು?"

"ಎಲ, ಆ ಹಾಳು ಕತೆಯನ್ನು ಮತ್ತೆ ಕೇಳಬೇಡಿರಿ. ಗ್ರ್ಯಾಂಡ ಹಾಟೆಲಿಗೆ ಹೋಗಿ ವಿಚಾರಿಸಲಾಗಿ ಅಲ್ಲಿ ಯಾರೂ ಇಲ್ಲವೆಂದು ತಿಳಿದು ಬಂದಿತು. ಒಬ್ಬ ಖಾನಸಾಮಾ ಹೇಳಿದ. "ಅಹುದು, ಅವಳೇನೋ ಬಂದಿದ್ದಳು. ಆದರೆ ಮದುವೆಯಾದ ಮರುದಿನವೇ ಅವಳು ಓಡಿಹೋದಳು. ಸಾಹೇಬನು ಅವಳನ್ನು ಹುಡುಕಲಿಕ್ಕೆ ಹೋಗಿದ್ದಾನೆ."

---

# ತಿರುವು ಮುರುವು ෴ ෴ ෴ ෴ ෴

**ರಿಚ್‌ಮಂಡದಲ್ಲಿ ಹಿಂದೀ-ಆಂಗ್ಲ ಪಾಠಶಾಲೆ. ಮಿಸ್ಟರ್ ಕ್ರ್ಯಾವನ್ (ಶಿಕ್ಷಕರು) ಹಾಗು ಡಿಕ್, ಟಾವನ್, ಹ್ಯಾರೀ ಮೊದಲಾದ ಹುಡುಗರು.**

**ಕ್ರ್ಯಾವನ್:—** ಹೂಂ, ಬೇಗ ಮುಗಿಸಿರಿ, ನಾಲ್ಕು ಹೊಡೆಯಿತು. ಡಿಕ್, ಉಳಿದ ಇತಿಹಾಸವನ್ನನ್ನು ಓದಿಬಿಡು.

**ಡಿಕ್:—** 'ಯುರೋಪದ ದುಃಖದ ದಿನಗಳ ಅವಸಾನವಾಗಿದೆ. ಜಾತಿಜಾತಿಗಳಲ್ಲಿಯ ದ್ವೇಷ ಹಿಂಸೆ ವಿವಾದಗಳೆಲ್ಲ ದೂರಾಗಿವೆ. ಪ್ರಬಲ-ಪರಾಕ್ರಾಂತ ಭಾರತ ಸರಕಾರದ ದೋರ್ದಂಡ ಶಾಸನದ ಸುಶೀತಲ ಛಾಯೆಯಲ್ಲಿ ....' ದೋರ್ದಂಡವೆಂದರೇನು ಗುರುಗಳೆ?

**ಕ್ರ್ಯಾವನ್:—** ದೋರ್ದಂಡವೆಂದರೆ ಗೊತ್ತಿಲ್ಲವೆ? The big rod. Under the soothing influence of the big rod.

**ಡಿಕ್:—** 'ಸುಶೀತಲ ಛಾಯೆಯಲ್ಲಿ ಆಶ್ರಯವನ್ನು ಹೊಂದಿ ಸಮಸ್ತ ಯುರೋಪವು ಧನ್ಯವಾಗಿದೆ. ಆಯರ್ಲಂಡದಿಂದ ರಶಿಯಾದವರೆಗೆ, ಲ್ಯಾಪ್‌ಲ್ಯಾಂಡದಿಂದ ಸಿಸಿಲಿಯವರೆಗೆ ಎಲ್ಲೆಲ್ಲಿಯೂ ಶಾಂತಿಯು ವಿರಾಜಿಸುತ್ತಿದೆ. ಫ್ರಾನ್ಸವು ಈಗ ಜರ್ಮನಿಯ ಕುತ್ತಿಗೆಯನ್ನು ಹಿಚುಕಲಿಚ್ಛಿಸುವದಿಲ್ಲ; ಇಂಗ್ಲಂಡವು ಈಗ ಜಾತಿಜಾತಿಗಳಲ್ಲಿ ಜಗಳವನ್ನೆಬ್ಬಿಸುವದಿಲ್ಲ; ಆಸ್ಟ್ರಿಯಾ ಇಟಾಲಿಗಳು ಮಧ್ಯಸಾಗರದ ಅಧಿಕಾರದ ವಿಷಯವಾಗಿ ಹೊಡೆದಾಡುವದಿಲ್ಲ. ....' ಮಧ್ಯಸಾಗರವೆಂದರೆ ಯಾವುದು ಗುರುಗಳೆ?

**ಕ್ರ್ಯಾವನ್:—** ಇದೋ, ಎದುರಿಗಿನ ಈ ಮಾನಚಿತ್ರವನ್ನು ನೋಡಬಾರದೆ; ಇಟಾಲಿಯ ಹತ್ತರ ಸಮುದ್ರವಿದೆಯಲ್ಲ, ಅದೇ. ಆಗಿನ ಕಾಲದಲ್ಲಿ ಮೆಡಿಟರೇನಿಯನ್ ಎಂದು ಹೆಸರಿತ್ತು. ಇಂಡಿಯನ್‌ರಿಗೆ ಹಾಗೆ ಉಚ್ಚರಿಸಲಿಕ್ಕೆ ಬರುವದಿಲ್ಲವೆಂದು ಮಧ್ಯಸಾಗರವೆಂಬ ಹೆಸರು ಕೊಟ್ಟಿದ್ದಾರೆ. ಇದೇ

ರೀತಿಯಾಗಿ ಅಲಸ್ಟರಕ್ಕೆ ಬೆಲೆಸ್ತಾನಾ, ಸ್ವಿಟ್ಝರಲ್ಯಾಂಡಕ್ಕೆ ಛಭುರಾಬಾದ, ಬೋರ್ದೋರ್‌ಕ್ಕೆ ಭಾಟಿಖಾನಾ, ಮ್ಯಾಂಚೆಸ್ಟರಕ್ಕೆ ನಿಮಕೀ ಎಂದು ಕರೆಯುತ್ತಾರೆ. ಇರಲಿ, ಮುಂದೆ ಓದು.

**ಡಿಕ್:**— 'ಯುರೋಪಿಯನ್ನರು ದಿನದಿನಕ್ಕೆ ಉನ್ನತಿಯನ್ನು ಹೊಂದುತ್ತಿದ್ದಾರೆ. ಅವರ ಲೋಭವು ಕಡಿಮೆಯಾಗಿದೆ, ಅಸಭ್ಯ ವಿಲಾಸಿತೆಯು ದೂರಾಗಿದೆ, ಇಹಲೋಕದ ಮೇಲಿನ ಆಸ್ಥೆಯು ಕಡಿಮೆಯಾಗಿದೆ, ಪರಲೋಕದ ಮೇಲಿನ ನಿರ್ಭರತೆಯು ಹೆಚ್ಚಾಗುತ್ತಿದೆ. ಭಾರತದ ಪುತ್ರರು ಏಳು ಸಮುದ್ರ ಹದಿಮೂರು ನದಿಗಳನ್ನು ದಾಟಿ ಈ ಪಾಂಡವವರ್ಜಿತ ದೇಶಕ್ಕೆ ಬಂದು ನಿಃಸ್ವಾರ್ಥಭಾವದಿಂದ ಶಾಂತಿ, ಸುವ್ಯವಸ್ಥೆ ಹಾಗು ಸಭ್ಯತೆಯನ್ನು ನೆಲೆಗೊಳಿಸಿದ್ದಾರೆ.' ....ಬಳ್ಳೇದು ಇದೆಲ್ಲವೂ ನಿಜವೇ, ಸರ್?

**ಕ್ರ್ಯಾಮ್:**— ಪುಸ್ತಕದಲ್ಲಿ ಬರೆದಿದೆ. ಮತ್ತು ಇದನ್ನು ಕಲಿಸಬೇಕೆಂದು ಸರಕಾರದ ಆಜ್ಞೆಯಾಗಿದೆಯೆಂದ ಮೇಲೆ ನಿಜವಿರಲೇಬೇಕು.

**ಡಿಕ್:**— ಆದರೆ ಇದೆಲ್ಲ bosh ಎಂದು ಅಪ್ಪ ಅನ್ನುತ್ತಾನಲ್ಲ.

**ಕ್ರ್ಯಾಮ್:**— ನಿಮ್ಮ ಅಪ್ಪನದೇನು ಗಂಟು ಖರ್ಚಾಗುವದು? ಅವರು ವಕೀಲರು. ನನ್ನ ಹಾಗೆ ಸರಕಾರೀ ಪಗಾರದ ಮೇಲೆ ಹೊಟ್ಟೆ ಹೊರಕೊಳ್ಳಬೇಕಾಗಿಲ್ಲ.

**ಡಿಕ್:**— 'ಮುದ್ದು ಇಂಗ್ಲಿಷ ಬಾಲಕರೆ, ಭಾರತಸರಕಾರವು ನಿಮ್ಮ ದೇಶದ ಮೇಲೆ ಅನಂತ ಉಪಕಾರವನ್ನು ಮಾಡಿದೆಯೆಂಬುದನ್ನು ಯಾವಾಗಲೂ ನೆನಪಿನಲ್ಲಿಡಿರಿ. ನೀವು ದೊಡ್ಡವರಾದ ಮೇಲೆ ಶಾಂತರೂ ಆಜ್ಞಾಧಾರಿಗಳೂ ರಾಜನಿಷ್ಠರೂ ಆಗುವಂತೆ ಈಗಿನಿಂದಲೆ ಪ್ರಯತ್ನವನ್ನು ಆರಂಭಿಸಿರಿ.'

**ಟಾಮ್:**— ಬೂ – ಹೂ – ಹೂ – ಹೂ....

**ಕ್ರ್ಯಾಮ್:**— ಏನೋ, ಚಳಿ ಹತ್ತುತ್ತಿದೆಯೇನು? ಮತ್ತೆ ನೀನೂ ಧೋತರ ಅಂಗಿ ತೊಟ್ಟುಕೊಂಡು ಬಂದೆಯಾ? ಹಿಂದೀ ಜನರ ಅನುಕರಣೆಯನ್ನು ಮಾಡಲಿಕ್ಕೆ ಹೋಗಿ ಎಲ್ಲಿಯಾದರೂ ನ್ಯೂಮೋನಿಯಾದಿಂದ ಸತ್ತು ಹೋದೀ!

**ಟಾಮ್**:— ಅಪ್ಪನ ಅಪ್ಪಣೆ, ಏನು ಮಾಡಲಿ. ಇವತ್ತು ಶಾಲೆಯಿಂದ ತಿರುಗಿ ಹೋಗುವಾಗ ಖಾನ-ಸಾಹೇಬ ಗಾಬ್ಸನ್ ಟೋಡಿಯುವರ ಪಾರ್ಟಿಗಾಗಿ ಹೋಗಬೇಕಾಗಿದೆ. ಅವರಿಗೊಂದು ಹೊಸ ಬಿರುದು ದೊರೆತಿದೆಯುಂತಲ್ಲ. ಅಲ್ಲಿ ಅನೇಕ ಇಂಡಿಯನ್ ಸದ್ಗೃಹಸ್ಥರು ಬರುವರಂತೆ. ಆದ್ದರಿಂದ ದೇಶೀ ಉಡುಪು ನಡೆಯುವಂತಿಲ್ಲವೆಂದು ಅಪ್ಪ ಹೇಳಿದ್ದಾನೆ.

**ಕ್ರ್ಯಾವ್**:— ಹಾಗಾದರೆ ಹಿಂದೂ ಆಗಲಿಕ್ಕೆ ಏಕೆ ಹೋದೆ? ಚಣ್ಣ ಪೈರಣು ಹಾಕಿದ್ದರೆ ಬರುತ್ತಿತ್ತು.

**ಟಾಮ್**:— ಅದೇನೋ ನಿಜ. ಆದರೆ ಹಿಂದೀಯರೆ ಎಲ್ಲರಿಗಿಂತ ಸುಧಾರಿಸಿದವರೆಂದು ಅಪ್ಪನು ಅನ್ನುತ್ತಾನೆ. ಅದಕ್ಕಾಗಿ....ಬ್ರರ್ ರ್ ರ್....

**ಕ್ರ್ಯಾವ್**:— ಹೋಗು ಹೋಗು, ಬೇಗನೇ ಮನೆಗೆ ಹೋಗು. ಕಡೆಗೆ ಒಂದು ಶಾಲನ್ನಾದರೂ ಹೊದ್ದುಕೊಂಡು ಬಾ. ಏನೋ, ಎಡವಿ ಬಿದ್ದಿಯೇನು?

**ಹ್ಯಾರೀ**:— ನೋಡಿರಿ ನೋಡಿರಿ, ಟಾಮ್ ಕಚ್ಚೆಯನ್ನು ಹೇಗೆ ಹಾಕಿದ್ದಾನೆ! ಸ್ಕಿಪಿಂಗ ರೋಪಿನ ಹಾಗೆ ಕಾಣುತ್ತದೆ!

* * * * *

ಧರ್ಮಯಾಜಕರ ಮುಖಪತ್ರವಾದ '**ದಿ ಕಿಂಗಡಮ್ ಕಮ್**'ದಿಂದ ಉದ್ಧೃತವಾದದ್ದು.

ಸರ್ವನಾಶದ ಸಿದ್ಧತೆಯು ನಡೆದಿದೆ. ಭಾರತಸರಕಾರವು ನಮ್ಮ ಸಂಪತ್ತನ್ನೆಲ್ಲ ಸೂರೆಗೊಂಡಿದೆ, – ನಾವು ವಿರಕ್ತ ಧರ್ಮಯಾಜಕ ಸಂಘದವರು ಯಾವ ಕೋಲಾಹಲವನ್ನೂ ಎಬ್ಬಿಸಲಿಲ್ಲ; ಏಕೆಂದರೆ ಇಹಲೋಕದ 'ಪಾವರೋಟಿ' ಮತ್ತು ಪೋಸದ ಮೇಲೆ ನಮಗೆ ಲೋಭವಿಲ್ಲ; ಹಾಗು ಸೀಝರನಿಗೆ ಸಲ್ಲತಕ್ಕದ್ದನ್ನು ಸೀಝರನಿಗೆ ಕೊಡುವದೆ ಶಾಸ್ತ್ರ-ಸಮ್ಮತವಾಗಿದೆ. ಆದರೆ ಇಂದು ನಾವು ಇದೇನು ಕೇಳುತ್ತಿರುವೆವು? ನಮ್ಮ ಧರ್ಮದ ಮೇಲೆ ಹಸ್ತಾರೋಪವೆ! ಹಾರ್ಸರೇಸ ನಿಲ್ಲಿಸುವದಕ್ಕಾಗಿ ಕಾಯಿದೆಯಾಗುವದಂತೆ. ಆಯಿಸಕಟ್, ಎಪ್ಸಮ್ ಮೊದಲಾದ ಮಹಾತೀರ್ಥಗಳು ಇನ್ನೇನು ಸ್ಮಶಾನವಾಗಬೇಕೆ? ಧರ್ಮಶಾಸ್ತ್ರದಲ್ಲಿ ಹಾರ್ಸರೇಸಿನ ಉಲ್ಲೇಖ

ವಿಲ್ಲವೆಂದು ಬಿಶಪ್ ಸ್ಟೋನಿಬ್ರೋಕನು ಗವ್ಹರ್ನಮೆಂಟಕ್ಕೆ ತಿಳಿಸಿದ್ದಾನಂತೆ. ಆದ್ದರಿಂದ ರೇಸ ನಿಲ್ಲಿಸಿದರೆ ಕ್ರಿಸ್ತಧರ್ಮದ ಹಾನಿಯಾಗುವದಿಲ್ಲವಂತೆ! ಹಾಯ್, ಒಬ್ಬ ಧರ್ಮಯಾಜಕನ ಬಾಯಿಂದ ಇಂತಹ ಮಾತುಗಳನ್ನು ಕೇಳಬೇಕಾಯಿತೆ! ಆದರೆ ರೇಸ ಆಡುವದು ಬ್ರಿಟಿಶ್‌ಜಾತಿಯ ಸನಾತನ ಧರ್ಮವೆಂಬುದೂ ಲೋಕಾಚಾರವು ಬಾಯಿಬಲ್ಲಿಗಿಂತ ಮಿಗಿಲೆಂಬುದೂ ಈ ಬಿಶಪ್‌ರಿಗೆ ಗೊತ್ತಿಲ್ಲವೆ? ಇನ್ನೊಂದು ಭಯಂಕರ ಸಮಾಚಾರ–ಮದ್ಯಪಾನವನ್ನು ನಿರೋಧಿಸುವದಕ್ಕಾಗಿ ಕಾಯಿದೆಯಾಗುವದಂತೆ. ನಮ್ಮ ಶಾಸ್ತ್ರಸಮ್ಮತ ಸನಾತನ ಪಾನೀಯವನ್ನು ನಿಲ್ಲಿಸಿ ಭಾರತ-ಸರಕಾರವು ಭಾರತೀಯ ಜಹದ ವ್ಯಾಪಾರವನ್ನು ಹೆಚ್ಚಿಸಬೇಕೆನ್ನುತ್ತದೆಯೇನು?

* * * * *

**'ರಾಷ್ಟ್ರಮಿತ್'–ಇದರ ಕೂಡ 'ಆಂಗ್ಲಬಂಧು'ವು** ಸಮಾವಿಷ್ಟವಾಗಿದೆ–
ಪತ್ರಿಕೆಯಿಂದ ಉದ್ಧೃತವಾದದ್ದು.

ನಾವು ಖಾನಸಾಹೇಬ ಗಾಬಸನ್ ಟೋಡಿಯವರನ್ನು ಆದರಪೂರ್ವಕವಾಗಿ ಅಭಿನಂದಿಸುತ್ತೇವೆ. ಅವರು ಅತ್ಯಂತ ಯೋಗ್ಯ ವ್ಯಕ್ತಿಗಳು. ಅವರು ಉಚ್ಚಸಮ್ಮಾನದಿಂದ ವಿಭೂಷಿತರಾಗಿರುವದನ್ನು ನೋಡಿ ನಮಗೆ ಬಹಳ ಆನಂದವಾಗುತ್ತದೆ. ದೇಶೀ ಜನರ ಭಾಗ್ಯದಲ್ಲಿ ಇಂತಹ ದೊಡ್ಡ ಬಿರುದು, ಇದೇ ಮೊದಲು ದೊರೆತಿದ್ದು. ಆದರೆ ಈ ಸಂದರ್ಭದಲ್ಲಿ ನಾವು ಸರಕಾರಕ್ಕೆ, ಈ ಎಲ್ಲ ಬಹುಮೂಲ್ಯ ಉಪಾಧಿಗಳನ್ನು ವಿಶೇಷ ಅಗ್ಗ ಮಾಡಬಾರದೆಂದೂ ಆದರಿಂದ ಭಾರತೀಯ ರಾವಸಾಹೇಬ ಖಾನಸಾಹೇಬ ಪ್ರಭೃತಿಗಳು ನೊಂದುಕೊಳ್ಳುವರೆಂದೂ ಹೀಗಾಗಿ ಯುರೋಪದ ಉನ್ನತಿಗೆ ವ್ಯತ್ಯಯ ಬರುವದೆಂದೂ ಸೂಚಿಸಬಯಸುತ್ತೇವೆ. ನಾಯಿಟ, ಬ್ಯಾರನ್ ಮಾರ್ಕ್ವಿಸ್ ಡ್ಯೂಕ ಮೊದಲಾದ ದೇಶೀ ಬಿರುದುಗಳೇ ಸಾಹೇಬರಿಗಾಗಿ ಯಥೇಷ್ಟವಾಗಿವೆ. ಅದೇನೇ ಇರಲಿ, ಮಿಸ್ಟರ ಟೋಡಿಯವರು ಖಾನಸಾಹೇಬ ಟೋಡಿಯವರಾಗಿ ಬಿಟ್ಟಿರುವರೆಂದ ಮೇಲೆ ಅವರು ತಮ್ಮ ಪದಮರ್ಯಾದೆಗನುಸರಿಸಿ ನಡೆಯುವುದು ಉಚಿತ. ಅವರು ರಾಜದ್ರೋಹೀ ಲಿಬರ್ಟೀ–ಲೀಗಿನ ನೆರಳಲ್ಲಿ ಹಾಯುವದಿಲ್ಲವೆಂದು ಆಶಿಸುತ್ತೇವೆ.

* * * * *

ಗಾಬಸನ್ ಟೋಡಿಯವರ ಮನೆ. ಮಿಸೆಸ್ ಟಾಡೀ ಮತ್ತು ಅವಳ ಇಬ್ಬರು ಹೆಣ್ಣುಮಕ್ಕಳು ಫ್ಲಫೀ ಹಾಗು ಫ್ಲಾಪ್ಸೀ ಮತ್ತು ಇವರ ಶಿಕ್ಷಕಿ ಜೋಫನಾ.

**ಜ್ಯೋಫನಾ**:— ಫ್ಲಾಪ್ಸೀ, ನಿನ್ನ ಸಲುವಾಗಿ ನಾನು ಬಹಳ ಬೇಸತ್ತೆ. ಸಾಕಾಗಿ ಹೋಗಿದೆ. ಹೆರಳು ಹಾಕಿಕೊಳ್ಳುವದು ಹೀಗೆಯೆ? ಆಹಾಹಾ, ಏನು ಚೆಲುವೆ ಕಾಣುತ್ತಿರುವಿಯೆ? ಕಿವಿಗಳೆರಡೂ ಹೊರಗೇ ಕಾಣುತ್ತವೆ. ಇಷ್ಟುದ್ದ ಬೆಳೆದಿರುವಿ. ಸ್ವಲ್ಪವೂ ಕಲಿಯಲಿಲ್ಲ. ನಿಮ್ಮ ಅಕ್ಕ ಹೇಗೆ ತುರುಬು ಕಟ್ಟಿದ್ದಾಳೆ ನೋಡು!

**ಫ್ಲಾಪ್ಸೀ**:— Let her. ಕಿವಿಯ ಮೇಲೆ ಕೂದಲು ಇದ್ದರೆ ನನಗೆ ಏನೂ ಕೇಳಿಸುವದಿಲ್ಲ. ನೆರೆಮನೆಯ ಮಿಸ್ ಲ್ಯಾಂಕೀ ಗಾಸಲಿಂಗಳಂತೆ ನಾನು ಕೂದಲ ಕತ್ತರಿಸುವೆನು.

**ಜೋಫನಾ**:— ಸರಿ, ಕೂದಲು ಕತ್ತರಿಸು; ಬೋಳು ತಲೆಯಾಗಲಿ. ಹುಬ್ಬು ಬೋಳಿಸು ಅಂದರೆ ನಿನ್ನ ಚೆಲುವಿಕೆಗೆ ಎದ್ದು ಕಾಣುವದು. ಬಕ-ಪಕ್ಷಿಯಂತೆ ಕಾಣಿಸುವಿ. ಅತ್ತೆಯ ಕೈಯಲ್ಲಿ ಸಿಕ್ಕಿಯೆಂದರೆ....

**ಫ್ಲಾಪ್ಸೀ**:— Little Pussy Friskers
Shaved off her whiskers
And sharpening her paw
Scratched her mum-in-law.

**ಜೋಫನಾ**:— ಎಂಥ ತಿಳಿಗೇಡಿ ಹುಡಿಗೆಯಿದು! ಮಿಸೆಸ್ ಟೋಡಿ, ನಿಮ್ಮ ಚಿಕ್ಕ ಮಗಳನ್ನು ಸುಧಾರಿಸುವದು ನನಗಂತೂ ಸಾಧ್ಯವಿಲ್ಲ.

**ಮಿಸೆಸ್ ಟೋಡಿ**:— ಛೀ ಫ್ಲಾಪ್ಸೀ, ನೀನು ದಿನದಿನಕ್ಕೆ ಬಹಳ ಅಡ್ನಾಡಿಯಾಗುತ್ತಿರುವಿ. ಜೋಫನಕ್ಕಾ ಅವರು ನಿನ್ನ ಶಿಕ್ಷಣಕ್ಕಾಗಿ ಎಷ್ಟು ಶ್ರಮ ತೆಗೆದುಕೊಳ್ಳುತ್ತಿದ್ದಾರೆ ಗೊತ್ತಿದೆಯೆ?

**ಫ್ಲಾಪ್ಸೀ**:— ನಾನು ಕಲಿಯಲಿಕ್ಕೆ ಒಲ್ಲೆ. ಫ್ಲಫೀಗೆ ಕಲಿಸಲಿ ಸಾಕು.

**ಜೋಫನಾ**:— ಮತ್ತೆ 'ಫ್ಲಫಿ'ಯೆ! ಅಕ್ಕ ಎಂದರೆ ಏನಾಗುವದು? ಆ, ಇದೇನು ಮತ್ತೆ ನೀನು ಪೆನ್ಸಿಲ್ ಚೀಪುತ್ತಿರುವಿಯಾ! ಛೀ ಛೀ ಎಷ್ಟು ಅಸಹ್ಯ! ಇರಲಿ. ನೀನು ಆ ಕೋಣೆಗೆ ಹೋಗಿ ಆ ಉರ್ದು ಗಝುಲ್ ಪಾಠ ಮಾಡು.

**ಮಿಸೆಸ್ ಟೋಡಿ:—** ಜೋಛನಕ್ಕಾ, ನಿಮ್ಮ ಡಬ್ಬಿಯೊಳಗಿಂದ ಒಂದು ಎಲೆಯನ್ನು ತೆಗೆದುಕೊಳ್ಳಲಿಯಾ? ಥ್ಯಾಂಕ ಯೂ.

**ಜೋಛನಾ:—** ನೋಡಿರಿ ಮಿಸೆಸ್ ಟೋಡೀ, ಮಾತು ಮಾತಿಗೆ ಹೀಗೆ ಥ್ಯಾಂಕ ಯೂ – ಪ್ಲೀಜ – ಸಾರೀ ಎಂದು ಅನಬೇಡಿರಿ. ಬಹಳ ಕೆಟ್ಟ ಅಭ್ಯಾಸ. ಇದಕ್ಕಾಗಿಯೇ ನಿಮ್ಮ ಜಾತಿಯು ಉನ್ನತಿಯು ಆಗಲೊಲ್ಲದು. ತುಚ್ಛ ಕಾರಣಗಳಿಗಾಗಿ ಕೃತಜ್ಞತೆ ಅಥವಾ ದುಃಖವನ್ನು ವ್ಯಕ್ತಪಡಿಸುವದು ಭಂಡತನವೆಂದು ನಾವು ತಿಳಿಯುತ್ತೇವೆ. ತೆಗೆದುಕೊಳ್ಳಿರಿ ತುಸು ಜರದಾ.

**ಟೋಡಿ:—** ನೋ, ಥ್ಯಾಂಕ್ಸ–ಥೂಸಿಗೋ! ಜರದಾ ತಿಂದಕೂಡಲೆ ನನ್ನ ತಲೆ ತಿರುಗುವದು. ಇದಕ್ಕಿಂತ ಒಂದು ಸಿಗಾರೇಟ ಸೇದುವೆ.

**ಜೋಛನಾ:—** ಹೆಂಗಸರು ಸಿಗರೇಟ ಸೇದುವದು ಬಹಳ ಕೆಟ್ಟ. ನೀವು ಜರದಾ ತಿನ್ನುವ ಅಭ್ಯಾಸ ಮಾಡಿರಿ.

**ಟೋಡಿ:—** ಆದರೆ ಎರಡೂ ತಂಬಾಕ ಅಷ್ಟೆ?

**ಜೋಛನಾ:—** ಆದರೇನಾಯಿತು. ಒಂದು ಹೊಗೆ, ಮತ್ತೊಂದು ಪುಡಿ. ಹೊಗೆಯು ಪುರುಷರಿಗಾಗಿ, ಹಾಗು, ಪುಡಿಯು ಹೆಂಗಸರಿಗಾಗಿ. ಫ್ಲಫಿ, ಆ ಬಂಗಾಲೀ ಕಾದಂಬರಿಯನ್ನು ನೀನು ಮುಗಿಸಿರುವಿಯಾ?

**ಫ್ಲಫಿ:—** ಬಹಳ ಕಠಿಣವಾಗಿದೆ. ಚೆನ್ನಾಗಿ ತಿಳಿಯಲೊಲ್ಲದು.

**ಜೋಛನಾ:—** ತಿಳಿದುಕೊಳ್ಳುವ ವಿಶೇಷ ಅವಶ್ಯಕತೆಯಿಲ್ಲ. ಅರಿಸಿ ಕೆಲ ಕೆಲವು ಭಾಗಗಳನ್ನು ಪಾಠ ಮಾಡಿದರಾಯಿತು. ಬಂಗಾಲಿಯಲ್ಲಿಯ ಶ್ರೇಷ್ಠ ಪುಸ್ತಕಗಳ ಪರಿಚಯವು ನಿನಗೆ ಆದೆಯೆಂದು ಜನರಿಗೆ ತಿಳಿದರೆ ಸಾಕು. ಆದರೆ ನಿನ್ನ ಉಚ್ಚಾರಣೆಯು ಬಹಳ ಅಶುದ್ಧವಾಗಿದೆ. ಸಭ್ಯಸಮಾಜದಲ್ಲಿ ಕೂಡಬೇಕಾಗಿದ್ದರೆ ಶುದ್ಧವಾಗಿ ಬಂಗಾಲಿಯನ್ನು ಉಚ್ಚರಿಸುವದೂ ಕೆಲ ಉರ್ದೂ ಹಾಡುಗಳನ್ನು ಕಲಿತಿರುವದೂ ಅವಶ್ಯವಾಗಿದೆ. ಮಿಸೆಸ್ ಟೋಡೀ, ಫ್ಲಫಿಗೆ ಚಾಕಲೇಟು ಬಹಳ ತಿನ್ನಲಿಕ್ಕೆ ಕೊಡಬೇಡಿರಿ. ಹಾಗಲಕಾಯಿ ಪಲ್ಲೆಯ ವ್ಯವಸ್ಥೆ ಮಾಡಿರಿ. ಇಲ್ಲವಾದರೆ ನಾಲಿಗೆಯು ಜಡವಾಗಿಯೇ ಉಳಿಯುವದು.

**ಗಬಸನ್ ಟೋಡಿ:—** ( ನೇಪಥ್ಯದಲ್ಲಿ ) – ಡಿಯರಿ –

**ಮಿಸೆಸ್ ಟೋಡಿ:—** ಓ! ಎಲ್ಲಿದ್ದೀರಿ ನೀವು?

**ಗಬಸನ್ ಟೋಡಿ:—** ಬಾಥ್‌ರೂಮಿನಲ್ಲಿ. ಇನ್ನಷ್ಟು ಮಾವಿನ ಹಣ್ಣುಗಳನ್ನು ತೆಗೆದುಕೊಂಡು ಬಾ.

**ಜೋಛನಾ:—** ಬಾಥ್‌ರೂಮಿನಲ್ಲಿ ಮಾವಿನಹಣ್ಣೇ ?

**ಟೋಡಿ:—** ಅದಿಲ್ಲದೆ ಬೇರೆ ಉಪಾಯವಿಲ್ಲ. 'ಮಾವಿನಹಣ್ಣು ತಿನ್ನುವದಾದರೆ ಭಾರತೀಯ ಪದ್ಧತಿಯಂತೆ ತಿನ್ನುವದೇ ಯೋಗ್ಯವೆ'ಂದು ಗಾಬೀ ಅನ್ನುತ್ತಾರೆ. ಆದರೆ ನಿಮ್ಮ ಹಾಗೆ ಅವರ ಕೈಗೆ ರೂಢಿಯಾಗಿಲ್ಲ. ಏಟ್ರ್‍ಸ, ಕಾರ್ಪೆಟು, ಟೇಬಲ್‌ಕ್ಲಾಥ ಎಲ್ಲವುಗಳ ಮೇಲೆ ರಸ ಚೆಲ್ಲಿ ಹೊಲಸು ಮಾಡುತ್ತಾರೆ. ಆದ್ದರಿಂದ ಬಾಥರೂಮಿನಲ್ಲಿ ಕುಳಿತುಕೊಂಡು ಮಾವಿನ ಹಣ್ಣು ತಿನ್ನುವ ಅಭ್ಯಾಸ ಮಾಡಲಿಕ್ಕೆ ಗಾಬಿಗೆ ಹೇಳಿದ್ದೇನೆ. ಅಲ್ಲಿ ಎರಡೂ ಕೈಗಳಲ್ಲಿ ಮಾವಿನಹಣ್ಣು ಹಿಡಿದುಕೊಂಡು ಚೀಪುತ್ತಿದ್ದಾರೆ. ಗದ್ದದ ಮೇಲಿಂದ ರಸ ಇಳಿದು ಬೀಳುತ್ತಿದೆ. Horrid !

**ಜೋಛನಾ:—** ಸರಿಯಾದ ವ್ಯವಸ್ಥೆಯನ್ನು ಮಾಡಿರುವಿರಿ. ಇಲ್ಲಿ ಕೇಳಿರಿ ಮಿಸೆಸ್ ಟೋಡಿ, ನೀವು ನಿಮ್ಮ ಯಜಮಾನರಿಗೆ ಗಾಬೀ ಎಂದು ಕರೆಯುವದು ಶಿಷ್ಟತನದ ವಿರುದ್ಧವಾಗಿದೆ. ಯಾರೂ ಇಲ್ಲದಿರುವಾಗ ಗಾಬೀ ಹಾಬೀ ಎಂದು ಬೇಕಾದ್ದು ಕರೆಯಿರಿ, ಆದರೆ ಎರಡನೆಯವರ ಎದುರಿಗೆ ಹೆಸರು ತೆಗೆದುಕೊಳ್ಳಬಾರದು. ಅವಶ್ಯ ಬಿದ್ದರೆ 'ಅವರು' ಎಂದು ಅನಬೇಕು. ಇದು ನಿಮ್ಮ ಮನಸ್ಸಿಗೆ ಬರದಿದ್ದರೆ 'ಓ' ಎಂದು ಕರೆಯಬಹುದು.

**ಟೋಡಿ:—** ಇಷ್ಟೆಯೆ ಅಹುದಲ್ಲೊ ? ಆಗಲಿ, ತಾವು ತುಸು ಕುಳಿತುಕೊಳ್ಳಿರಿ. ನಾನು ಅವರಿಗಷ್ಟು ಮಾವಿನಹಣ್ಣು ಕೊಟ್ಟು ಬರುವೆ.

* * * * *

'ರಾಷ್ಟ್ರವಿತ್'ದ ಜಾಹೀರಾತುಗಳಲ್ಲಿ ಎರಡು.

**ವಿಶುದ್ಧ ಆನಂದ ಲಾಡೂ:—** ಚರಬಿ ಮಿಶ್ರಿತ ಇಂಗ್ರೇಜೀ ಬಿಸ್ಕೀಟುಗಳನ್ನು ತಿಂದು ನಿಮ್ಮ ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡಿರಿ. ನಮ್ಮ ಆನಂದ ಲಾಡುಗಳನ್ನು ತಿನ್ನಿರಿ. ಹಲ್ಲು ಗಟ್ಟಿಯಾಗುವವು. ಕೇವಲ ಅಕ್ಕಿಯ ನುಚ್ಚು ಮತ್ತು ಬೆಲ್ಲ. ಯಂತ್ರ ಸ್ಪರ್ಶವಾಗಿಲ್ಲ. ಹಿಂದೀ ಸ್ತ್ರೀಯರು ಸ್ವಹಸ್ತದಿಂದ ತಯಾರಿಸಿದ್ದು. ಒಂದು ಸೇರಿಗೆ ಐದು ಶಿಲಿಂಗು. ಎಲ್ಲ ಕಡೆಗೂ ದೊರೆಯುವವು. ತಯಾರಿಸಿದವರು–ರಸಮಯದಾಸ, ಟಿಕ್‌ಟಿಕಿಬಾಜಾರ, ಕಲಕತ್ತಾ.

**ಅಂಬುರೀ ವರಣ:—** ಮಹಮ್ಮರ ದು:ಖವನ್ನು ದೂರಾಯಿತು. ಈ ಆಶ್ಚರ್ಯಕರ ಪುಡಿಯನ್ನು ಮೋರೆಗೆ ತೊಡೆದುಕೊಂಡರೆ ಸಪ್ಪಗಿನ ಬಣ್ಣವು ಅಳಿದು ಅಚ್ಚ ಹಿಂದೀ ಸ್ತ್ರೀಯರಂತೆ ಬಣ್ಣವಾಗುವದು. ಬಣ್ಣವನ್ನು ಕಪ್ಪಾಗಿ ಕಾಣಬೇಕೆಂದಿದ್ದರೆ ಇದರ ಕೂಡ ತುಸು ಬೆರ್ದಿಗ್ರೀಸ ಕೂಡಿಸಿರಿ. ರಾಮಚಂದ್ರಜೀಯವರು ಇದನ್ನು ಹಚ್ಚುತ್ತಿದ್ದರು. ಬೆಲೆ: ಒಂದು ಪುಡಿಕೆಗೆ ಐದು ಶಿಲಿಂಗು. ಮಾರುವವರು—ಶೇಖ ಅಜಹರ, ಲೇಡನ್ ಹಾಲ್ ಸ್ಟ್ರೀಟ, ಇಂಡಿಯಾ ಹಾವುಸ, ಲಂಡನ್.

* * * * *

'ದಿ ಲಂಡನ್ ಫಾಗ್' ದಿಂದ ಉದ್ಧೃತವಾದದ್ದು

ಬರುವ ಆಶ್ವೀನಮಾಸದಲ್ಲಿ ಈ ಲಂಡನ್ ನಗರದಲ್ಲಿ ವಿರಾಟ್ ರಾಜಸೂಯ ಯಜ್ಞವಾಗುವದು. ಸ್ವಯಂ ಮಹಾಕ್ಷತ್ರಪರು ಭಾರತಸರಕಾರದ ಪ್ರತಿನಿಧಿಗಳಾಗಿ ಯಜ್ಞದ ಯಜಮಾನರಾಗುವರು. ಹೋತಾ, ಋತ್ವಿಕ್, ಮುಲ್ಲಾ, ಮೌಲಾನಾ ಮೊದಲಾದವರು ಭಾರತದಿಂದ ಬರುವರು. ಎರಡು ತಿಂಗಳ ಬಿಟ್ಟೂಬಿಡದೆ ದೀಯತಾಂ ಭುಜ್ಯತಾಂ ನಡೆಯುವದು. ಖರ್ಚು ಕೊಡುವವರು ಈ ಬಡ ಯುರೋಪೀಯರು.

ಇಡೀ ಯುರೋಪದ ಶೋಷಣಕಾರ್ಯವು ತಡೆಯಿಲ್ಲದೆ ಸಾಗಿದೆ. ಆದರೆ ಇಷ್ಟರಿಂದ ತೃಪ್ತಿಯಿಲ್ಲ. ಭಾರತಮಾತೆಯು ತನ್ನ ಖರಜಿಹ್ವೆಯನ್ನು ಚಪ ಚಪ ಅನಿಸುತ್ತ – 'ಎಲೈ ಸಪತ್ನೀ-ಪುತ್ರರೆ, ಹಿಗ್ಗಿರಿ, ಇನ್ನೊಂದು ಸಾರೆ ನಿಮ್ಮ ಎಲವುಗಳನ್ನು ಚೆನ್ನಾಗಿ ನೆಕ್ಕುವೆನು,' ಎಂದೆನ್ನುತ್ತಿದ್ದಾಳೆ.

ಸರಿಯಾಗಿ ಇದೇ ಸಮಯದಲ್ಲಿ ಹಾಗ್ ನಗರದಲ್ಲಿ ಪ್ಯಾನ್-ಯುರೋಪಿಯನ್ ಲಿಬರ್ಟೀ ಲೀಗಿನ ಅಧಿವೇಶನವು ನೆರೆಯುವದು. ಬ್ರಿಟಿಶರೇ, ಜಾನ್-ಓ-ಗ್ರೋಟ್ಸದಿಂದ ಲ್ಯಾಂಡ್ಸ-ಎಂಡದ ವರೆಗೆ ನೀವು ಎಲ್ಲೆಲ್ಲಿ ಇರುವಿರೋ ಎಲ್ಲರೂ ಈ ಅಂತರರಾಷ್ಟ್ರೀಯ ಮಹಾಸಮ್ಮೇಲನದಲ್ಲಿ ಭಾಗ ತೆಗೆದುಕೊಳ್ಳಿರಿ. ನಿಮ್ಮಲ್ಲಿ ಅಣುಮಾತ್ರವಾದರೂ ಸ್ವಾಭಿಮಾನವಿದ್ದರೆ ರಾಜಸೂಯಯಜ್ಞದ ತ್ರಿಸೀಮೆಯಲ್ಲಿ ಸುಳಿಯಬೇಡಿರಿ ಸಹ. ಒಮ್ಮೆ ಚೆನ್ನಾಗಿ ವಿಚಾರ ಮಾಡಿ ನೋಡಿರಿ, ಈ ನಿಮ್ಮ ಮೆರೀ ಇಂಗ್ಲಂಡದ-ಎಲ್ಲಿ ಒಂದು ಕಾಲಕ್ಕೆ ದುಗ್ಧ ಹಾಗು ಮಧುವಿನ ಹೊಸಲು ಹರಿಯುತ್ತಿತ್ತೋ-

ಆದರ ದಶೆಯೇನಾಗಿದೆ! ಅನ್ನವಿಲ್ಲ, ವಸ್ತ್ರವಿಲ್ಲ, ಬೀಫ್ ಇಲ್ಲ, ಬೆಣ್ಣೆಯಿಲ್ಲ, ಪಾಸೀಯುವಿಲ್ಲ. – ಈ ಸಾರೆ ಬೀಯುರ ಸಹ 'ಬಂದ' ಆಗುವುದು. ವಿದೇಶ ದಿಂದ ಗವ್ ಒರಬೇಕು. ಆಮೇಲೆ ನಿಮ್ಮ ಬ್ರೆಡ್ ತಯಾರಾಗಬೇಕು. ನಿಮ್ಮ ಕುರಿಗಳ ಕೂದಲನ್ನು ಕತ್ತರಿಸಿದ ಕೂಡಲೆ ಆ ಉಣ್ಣೆಯು ಪಂಜಾಬಕ್ಕೆ ಹೋಗುತ್ತದೆ. ಮತ್ತು ಅಲ್ಲಿಂದ ಬನಾತು ಕಂಬಳಿಗಳ ರೂಪವಾಗಿ ತಿರುಗಿ ಬಂದು ನಿಮ್ಮ ಮೈಮೇಲೆ ಏರುತ್ತದೆ. ಹಿಂದುಸ್ಥಾನದ ಹತ್ತಿಯ ಅರಿವೆಗಳು ನಿಮ್ಮ ವಿಖ್ಯಾತ ಲಿನೆನ್ ಕೈಗಾರಿಕೆಯನ್ನು ಹಾಳು ಮಾಡಿವೆ. ಹಾಯ್, ನೀವು ಯಾವ ಅರಿವೆಗಳನ್ನು ತೊಡುತ್ತಿರುವಿರಿ? ನಿಮ್ಮ ನಗ್ನತೆಯು ಮರೆ ಯಾಗಿದೆ. ಆದರೆ ನಿಮ್ಮ ನಾಚಿಕೆಯು ಅಡಗಿಲ್ಲ. ಚಳಿಯು ಅಳಿದಿದೆ ಆದರೆ ನೀವು ಒಳಗೊಳಗೇ ನಡುಗುತ್ತಿರುವಿರಿ. ನಿಮ್ಮಲ್ಲಿಯ ಉತ್ತಮೋತ್ತಮ ಆಕಳುಗಳು ಹಿಂದುಸ್ಥಾನಕ್ಕೆ ನಿರ್ಯಾತವಾಗುತ್ತಿವೆ; ಅಲ್ಲಿಯ ಹಿಂದೂ ಮುಸಲ್ಮಾನರು ಹಾಲು, ಮೊಸರು, ಬೆಣ್ಣೆ, ತುಪ್ಪ ತಿಂದು ಕೊಬ್ಬುತ್ತಿದ್ದಾರೆ. ಬೀಯರ ವ್ಹಿಸ್ಕಿಗಳ ರುಚಿಯನ್ನು ಮರೆತುಬಿಟ್ಟಿರುವಿರಿ. ಭಾರತೀಯ ಗಾಂಜಾ ಅಫುಗಳು ನಿಮ್ಮ ತಲೆಯಲ್ಲಿ ಸಾವಕಾಶವಾಗಿ 'ಅಮಲು' ಕೂಡಿ ಸುತ್ತಿವೆ. ನಿಮ್ಮ ಸರ್ವನಾಶದ ಮೇಲೆ ಭಾರತವು ತನ್ನ ಭೋಗವಿಲಾಸದ ಪ್ರಚಂಡ ಮಂದಿರವನ್ನು ಕಟ್ಟುತ್ತಿದೆ. ನೀವು ಡಿಸೆಂಬರದ ಚಳಿಯಲ್ಲಿ ಇದ್ದಲಿ ಯಿಲ್ಲದೆ ಗದಗದ ನಡಗುತ್ತಿರುವಾಗ, ಅಲ್ಲಿ, ನಿಮ್ಮ ಹಣದಿಂದಲೆ ಶಿವ್ಹ ಯೆಟಾ ಹಿಲ್ಲಿನಲ್ಲಿ ಲಕ್ಷಾವಧಿ ಟನ್ ಕಲ್ಲಿದ್ದಲಿಯನ್ನು ಸುಟ್ಟು ಕೃತ್ರಿಮ ಆಗ್ನೇಯಗಿರಿಯನ್ನು ನಿರ್ಮಿಸುತ್ತಿದ್ದಾರೆ. ಭಾರತೀಯ ಅಧಿಕಾರಿಗಳು ಚಳಿಗಾಲದಲ್ಲಿ ಅಲ್ಲಿ ಕಚೇರಿಯನ್ನು ನಡೆಸುವರಂತೆ. ಲಂಡನ್‌ದ ಚಳಿಯು ಅವರಿಗೆ ತಡೆಯುವದಿಲ್ಲವಂತೆ.

ಬಹುಧಾವಿಭಕ್ತ ಆತ್ಮಕಲಹ-ಪರಾಯಣ ಯುರೋಪಿಯನ್‌ರೇ, ಇನ್ನಾದರೂ ನೀವು ನಿಮ್ಮ ತುಚ್ಛ ಸಾಂಪ್ರದಾಯಿಕ ಸ್ವಾರ್ಥವನ್ನು ತೊರೆಯಲಾರಿರಾ? ಇನ್ನೂ ನೀವು ನಿಮ್ಮ ಆ ಆಂಗ್ಲೋ-ಸೆಲ್ಟಿಕ್ ಜಗಳ, ಫ್ರಾಂಕೋ – ಜರ್ಮನ್ ಜಗಳ, ಧನಿಕ–ಶ್ರಮಿಕರ ಜಗಳ, ಸ್ತ್ರೀ ಪುರುಷರ ಜಗಳ ಮೊದಲಾದವುಗಳನ್ನು ನಿಲ್ಲಿಸುವದಿಲ್ಲವೆ?

* * * * *

**ಹಾಯಿಡ್ ಪಾರ್ಕಿನಲ್ಲಿ ಸಭೆ. ಸರ್ ಟ್ರಿಕ್‌ಸೀ ಟರ್ನಕೋಟ ಇವರು ಭಾಷಣ ಮಾಡುತ್ತಿದ್ದಾರೆ. ಮೂರು ನಾಲ್ಕು ಸಾವಿರ ಜನರು ನೆರೆದಿದ್ದಾರೆ.**

**ಟರ್ನ್‌ಕೋಟ**:— ಮಯ್ ಕಂಟ್ರಿಮೆನ್, ನೀವು ಇಂದು ನನಗೆ, ನಾಲ್ಕಾರು ಮಾತುಗಳನ್ನು ಹೇಳುವ ಸುಯೋಗವನ್ನು ಒದಗಿಸಿಕೊಟ್ಟದ್ದಕ್ಕಾಗಿ ಅನೇಕ ಧನ್ಯವಾದಗಳು. ನಾನು ನಿಮ್ಮನ್ನು ಹೇಗೆಂದು ಕರೆಯಲಿ, ತಿಳಿಯದಾಗಿದೆ. ಏಕೆಂದರೆ ನನ್ನ ಹೃದಯವು ತುಂಬಿ ಹೋಗಿದೆ. ಪೃಥಿವಿಯಲ್ಲಿಯ ಸರ್ವಶ್ರೇಷ್ಠ ದೇಶದ ನಿವಾಸಿಗಳೂ ಭಗವಂತನ ನಿರ್ವಾಚಿತ ಜನರೂ ಆದ ಬ್ರಿಟಿನ್ – ಸ್ಯಾಕ್ಸನ್ – ನಾರ್ಮನ್ – ವಂಶೋದ್ಭವ ಇಂಗ್ಲಿಶ್ ಜನರೇ....

**ಮ್ಯಾಕ್‌ಡೂಡಲ್**:— ಇಂಗ್ಲಿಶ್ ಅನ್ನಬೇಡಿರಿ. ಬ್ರಿಟಿಶ್ ಎನ್ನಿರಿ. ಸ್ಕಾಚ್‌ರು ಏನು ಗಾಳಿಗುಂಟ ಬಂದರೋ ?

**ಟರ್ನ್‌ಕೋಟ**:—ಆಗಲಿ ಆಗಲಿ. ಬ್ರಿಟಿಶರೇ ಒಮ್ಮೆ ನಿಮ್ಮ ಆ ಪ್ರಾಚೀನ ಇತಿಹಾಸವನ್ನು ಸ್ಮರಿಸಿರಿ. ಹೇಸ್ಟಿಂಗ್ಸ – ಕ್ರೇಸೀ – ಎಜಿನ್‌ಕೋರ್ಟದ ವೀರರೆ, ಯಾರ ವಿಜಯಪತಾಕೆಯು ಒಂದು ಕಾಲದಲ್ಲಿ ಇಂಗ್ಲಂಡ, ಸ್ಕಾಟಲಂಡ, ಆಯರ್ಲಂಡ ಫ್ರಾನ್ಸಗಳಲ್ಲಿ....

**ಮ್ಯಾಕ್‌ಡೂಡಲ್**:— ಸುಳ್ಳು ಮಾತು. ಸ್ಕಾಟಲಂಡದಲ್ಲಿ ನಿಮ್ಮ ವಿಜಯಪತಾಕೆಯು ಎಂದೂ ಹಾರಿಲ್ಲ.

**ಟರ್ನ್‌ಕೋಟ**:— ಸರಿ, ಸ್ಕಾಟಲಂಡ ಬಿಟ್ಟುಬಿಟ್ಟೆ. ಯಾರ ವಿಜಯಪತಾಕೆಯು ಒಂದು ಕಾಲದಲ್ಲಿ ಆಯರ್ಲಂಡ ಫ್ರಾನ್ಸಗಳಲ್ಲಿ-

**ಓ, ಹುಲಿಗಾನ್**:— Oireland ! Say it again !

**ಟರ್ನಕೋಟ**:— ಇಲ್ಲ ಇಲ್ಲ. ವಿಜಯಪತಾಕೆಯು ಎಲ್ಲಿಯೂ ಹಾರಲಿಲ್ಲ. ಪ್ರಿಯ ಇಂಗ್ಲಿಶ್ – ಸ್ಕಾಚ್ – ಆಯಿರಿಶ್ ಮಿಶ್ರಿತ ಬ್ರಿಟಿಶ್ ಜನರೆ,....

**ಓ, ಹುಲಿಗಾನ್**:— Begorrah ! ನಾವು ಬ್ರಿಟಿಶರಲ್ಲ, ಸೆಲ್ಟಿಕ್.

**ಟರ್ನಕೋಟ**:— ಸರಿ ಸರಿ. ನನ್ನ ಬ್ರಿಟಿಶ್ ಹಾಗು ಸೆಲ್ಟಿಕ್ ಬಂಧುಗಳೆ, ಈ ದಿನ ನೀವೆಲ್ಲರೂ ಇಲ್ಲಿ ಏಕೆ ನೆರೆದಿರುವಿರೆಂಬುದು ಗೊತ್ತಿದೆಯೋ ?

**ಓ, ಹುಲಿಗಾನ್**:— Sure, Oi don't know.

**ಟ್ರನರ್‌ಕೋಟ:**— ಅದೇಕೆ ನೆರೆದಿರುವಿರೆಂಬದನ್ನು ಹೇಳಬೇಕೆ ಹಾಗಾದರೆ? ದುರ್ದೈವಿಗಳೆ, ನಿಮ್ಮ ಈ ಪಿತೃಭೂಮಿಯ ಎದೆಯ ಮೇಲೆ ಯಾವ ಅನುಷ್ಠಾನದ ಆಯೋಜನೆಯು ನಡೆದಿರುವದೆಂಬುದರ ಎಚ್ಚರ ವಿದೆಯೆ ನಿಮಗೆ? - ರಾಜಸೂಯ ಯಜ್ಞ. ಭಾರತಸರಕಾರವು ಮಹಾ ಆಡಂಬರದಿಂದ ತನ್ನ ಐಶ್ವರ್ಯ ಹಾಗೂ ಪರಾಕ್ರಮದ ಪ್ರದರ್ಶನವನ್ನು ನಡೆಸಬೇಕು. ಮತ್ತು ಇದೇ ಯುರೋಪದ ಮಾನಸೀಯ ವ್ಯಕ್ತಿಗಳು ಬಂದು ಮಹಾಕ್ಷತ್ರಪನಿಗೆ ಕುರ್ನಿಸಾತ್ ಮಾಡಿ 'ಭಾರತಸರಕಾರಕೀ ಜಯ' ಎಂದು ಉಸುರಬೇಕು, ಎಂದರೆ ಏನು! ಈ ಆವುಟ್ ಲ್ಯಾಂಡಿಶ್ ಕಾರಭಾರ, ಈ ಸ್ಯಾಕ್ರಿಲೆಜ್....

(ವೇಗದಿಂದ ಲಾರ್ಡ ಬ್ಲಾನಿಯು ಬರುವನು)

**ಲಾರ್ಡ್ ಬ್ಲಾನೀ:**— (ಜನಾಂತಿಕದಲ್ಲಿ) – ಸರ್ ಟ್ರಿಕ್ಸೀ, ಇದ ಸ್ಟೇನು ನಡೆಯಿಸಿರುವಿ ನೀನು! ನಿನ್ನ ಸರ್ವನಾಶವನ್ನು ಮಾಡಿಕೊಳ್ಳುತ್ತಿ ರುವೆಯಲ್ಲ. ನಾನು ಅದೆಷ್ಟೋ ಬಗೆಯಿಂದ ಕ್ಷತ್ರಪನಿಗೆ ಹೇಳಿ Chiltren-Hundredsದ ಮಂತ್ರಿಪದವು ನಿನಗೆ ದೊರೆಯುವಂತೆ ಮಾಡಿದ್ದೇನೆ. ಬಹಳ ಆರಾಮ ಕೆಲಸ. ಅಗದೀ ಸಿನೆಕ್ಯೂರ (Sine cure). ಆ ನೌಕರಿಯನ್ನು ಟೋಡಿಗೆ ಕೊಡಬೇಕೆಂದು ಕ್ಷತ್ರಪನ ಇಚ್ಛೆಯಿತ್ತು. ಆದರೆ ನಾನು ಬಹಳ ಹೇಳಿಕೊಂಡಿದ್ದರಿಂದ ವಿಚಾರಮಾಡುತ್ತೇನೆಂದು ಆಶ್ವಾಸನ ಕೊಟ್ಟಿದ್ದಾನೆ. ಇಷ್ಟರಲ್ಲಿಯೇ ಸುದ್ದಿ ಬರಬಹುದು. ಆದರೆ ನೀನು ಇಲ್ಲಿ ರಾಜದ್ರೋಹದ ಪ್ರಚಾರವನ್ನು ನಡೆಸಿರುವಿ.

**ಟ್ರನರ್‌ಕೋಟ:**— ಹೀಗೋ ಹಾಗಾದರೆ? ನಾನೆಲ್ಲವನ್ನೂ ಸರಿ ಮಾಡುವೆನು.

**ಸಭಿಕರು:**— Go on Tricksy, Go on.

**ಟ್ರನರ್‌ಕೋಟ:**— ಹಾಂ, ನಾನೇನು ಹೇಳುತ್ತಿದ್ದೆ–ಪ್ರಿಯ ದೇಶ ಬಾಂಧವರೆ, ಇಂಥ ಘೋರ ದುರ್ದಿನದಲ್ಲಿ ನಿಮ್ಮ ಕರ್ತವ್ಯವೇನು? ನೀವು ಈ ಯಜ್ಞದ ದೊಡ್ಡ 'ತಮಾಷೆ'ಯಲ್ಲಿ ಭಾಗ ವಹಿಸುವಿರಾ?

**ಸಭಿಕರು:**— Never, never.

**ಬಿಲ್ ಸ್ನುಕ್ಸ:**— Say guv'nor, will they stand treat? ಎಷ್ಟು ಪಿಪಾಯಿ ಸೆರೆ ಬರುವದು?

**ಟರ್ನಕೋಟ:**— ಒಂದು ಹನಿ ಸಹ ಇಲ್ಲ. ಕೇವಲ ಗಾಳಿಯನ್ನು ಹಂಚುವರು. ಬಾಂಧವರೇ, ಈ ಮಹಾಯುದ್ಧದಲ್ಲಿ ನಿಮ್ಮ ಸ್ಥಾನವೆಲ್ಲಿ?

**ಲಾರ್ಡ ಬ್ಲಾನಿ:**— ಟರ್ನಕೋಟ, ಇದೇನು ಹೇಳುತ್ತಿರುವಿ?

**ಟರ್ನಕೋಟ:**— ಹೆದರುವಿರೇಕೆ, ಮುಂದೆ ಕೇಳಿರಿಲ್ಲ! ಬಂಧುಗಳೇ, ಈ ವಿರಾಟ್‌ಯುದ್ಧಕ್ಕೆ ನೀವು ಹೋಗುವಿರಾ?

**ಸಭಿಕರು:**— ಅದಕ್ಕಿಂತ ಸೈತಾನನ ಕಡೆಗೆ ಹೋಗುವದು ಲೇಸು.

**ಟರ್ನಕೋಟ:**— ಅಲ್ಲಲ್ಲ, ಇದು ಯೋಗ್ಯವೆನಿಸುವದಿಲ್ಲ. ನೀವು ಹೋಗಲೇಬೇಕು, - ಹೋಗದೆ ನಿರ್ವಾಹವಿಲ್ಲ. ಏಕೆಂದರೆ ಭಾರತಸರಕಾರವು ತಾನಾಗಿಯೇ ನಿಮ್ಮನ್ನು ಆಹ್ವಾನಿಸಿದೆ.

**ಲಾರ್ಡ ಬ್ಲಾನಿ:**— ಹಿಯರ್, ಹಿಯರ್!

**ಸಭಿಕರು:**— ಮ್ಯಾಂವ್, ಮ್ಯಾಂವ್!

**ಟರ್ನಕೋಟ:**— ಸಭಿಕರೆ, ನಾನು ಹೇಳುವದನ್ನು ಅನ್ಯಥಾ ತಿಳಿದು ಕೊಳ್ಳಬೇಡಿರಿ. ಭಾರತದ ಸಹಾನುಭೂತಿಯನ್ನು ದೊರಕಿಸದೆ ನಮ್ಮ ಗತಿಯು ನೆಟ್ಟಗಾಗುವಂತಿಲ್ಲ. ನಮ್ಮ ಭವಿಷ್ಯವು ಅವಲಂಬಿಸಿರುವದು ಸರ ಕಾರದ ದಯೆಯ ಮೇಲೆ, ಎಂಬುದನ್ನು ಮರೆಯಬೇಡಿರಿ.... (ಕೊಳೆತ ತತ್ತಿ ಬೀಳುವದು) ಓ! ಕಣ್ಣು ಒಳೆ ಉಳಿಯಿತು. ಬಂಧುಗಳೆ, ಕರ್ತವ್ಯಪಾಲನೆ ಯಲ್ಲಿ ನಾನು ಯಾವ ಭಯವನ್ನೂ ಲೆಕ್ಕಿಸುವದಿಲ್ಲ; ಸತ್ಯವೆಂದು ನಂಬಿದು ದನ್ನು ನಿಷ್ಕಪಟದಿಂದ ಹೇಳುವೆನು.

**ಲಾರ್ಡ ಬ್ಲಾನಿ:**— ಭಲೆ, ಯೋಗ್ಯಮಾತು. ಇದೋ ಟೆಲಿಗ್ರಾಮು ಬಂದಿತು. 'ಬ್ರೇವ್ಹೋ ಸರ್ ಟ್ರಿಕ್ಸೀ,' ನಿಶ್ಚಯವಾಗಿ ಕ್ಷತ್ರಪನು ನಿನ್ನನ್ನೇ ಆರಿಸಿದ್ದಾನೆ. ನಾನು ಓದಿ ನೋಡುವೆ. ನೀನು ನಿಲ್ಲಬೇಡ, ಭಾಷಣ ಸಾಗಲಿ.

**ಟರ್ನಕೋಟ:**— ಬಂಧುಗಳೆ, ನಾನು ಹೇಳುವದೆಲ್ಲವೂ ನಿಮ್ಮ ಕಲ್ಯಾಣಕ್ಕಾಗಿ. ಇದರಲ್ಲಿ ನನ್ನ ಸ್ವಾರ್ಥವೇನೂ ಇಲ್ಲ. – ಬ್ಲಾನ್ಲೀ ಏನು ಸುದ್ದಿ?– ಪ್ರಿಯ ಬಂಧುಗಳೆ, ದೇಶದ ಮಂಗಲಕ್ಕಾಗಿ ನಾನು ಎಂಥ ಲಾಂಛನೆ ಯನ್ನು ಭೋಗಿಸಲೂ ಸಿದ್ಧನೇ ಇರುವೆನು. ಈ ನಿಮ್ಮ ಬಿಡಾಲಧ್ವನಿಯು ನನ್ನ ಜಯಧ್ವನಿಯೆಂದು ಭಾವಿಸುತ್ತೇನೆ. ನಿಮ್ಮ ಈ ಕೊಳೆತ ತತ್ತಿಯು ಎದುರಿಗೆ ನನ್ನ ತಲೆಯನ್ನು ಒಡ್ಡುತ್ತೇನೆ. ನಿಮ್ಮ ಬತ್ತಳಿಕೆಯಲ್ಲಿ ಇನ್ನೂ

ಏನಾದರೂ ನಿಗ್ರಹದ ಅಸ್ತ್ರಗಳಿದ್ದರೆ- (ಕ್ಯಾಬೀಜ)- ಇಲ್ಲ, ಇನ್ನು ಪಾರಾಗು ವಂತಿಲ್ಲ ! ಬ್ಲಾರ್ನಿ, ಬೇಗ ಹೇಳು. ಏನು ಬರೆದಿದೆ ?

**ಬ್ಲಾರ್ನಿ**:— ಪೂಅರ ಟ್ರಿಕ್ಸೀ ! ಕಡೆಗೆ ಆ ಬೆರಕಿ ಟೋಡಿಯು ನೌಕರಿ ಯನ್ನು ಹೊಡೆದುಕೊಂಡ. 'ನೆವ್ಹರ ಮಾಯಿಂಡ್.' ನೀನು ಹತಾಶನಾಗ ಬೇಡ. ಇನ್ನೊಮ್ಮೆ ಅನುಕೂಲ ಸಮಯ ಬಂದಕೂಡಲೆ ನಿನಗಾಗಿ ಪ್ರಯತ್ನ ವನ್ನು ಮಾಡುವೆನು. ಕ್ಷತ್ರಪನು ಮಹಾ ಮೂರ್ಖನಾಗಿದ್ದಾನೆ. ಟೋಡಿಯು ಸಾದಾಗಿರುವನು ಇನ್ನೂ ಅವನಿಗೆ ತಿಳಿಯಬಾರದೆ ? ನೀನು ಎಂಥ ದೊಡ್ಡ 'ಡೆಮೊಗಾಗ.'- ನಿನ್ನನ್ನು ಕಿಸೆಯಲ್ಲಿ ಹಾಕಿಕೊಳ್ಳುವ ಎಂತಹ ಸುಯೋಗವನ್ನು ಕಳೆದುಕೊಂಡನು ! ಛೀ ಛೀ !

**ಟರ್ನಕೋಟ**— ಡ್ಯಾಮ್ ಟೋಡಿ ಅ್ಯಂಡ ಡ್ಯಾಮ್ ಕ್ಷತ್ರಪ. ನನ್ನ ಪ್ರಿಯ ದೇಶಭಾಂಧವರೆ...

**ಸಭಿಕರು**:— Shut up! kick him—lynch the traitor!

**ಟರ್ನಕೋಟ**:— ಇಲ್ಲ ಇಲ್ಲ, ಮೊದಲು ನನಗೆ ಮಾತಾಡಲಿಕ್ಕೆ ಕೊಡಿರಿ. ಈ ರಾಜಸೂಯಯಜ್ಞಕ್ಕೆ ನೀವು ಹೋಗಲೇ ಬೇಕು. ಅದೇಕೆ ಹೋಗಬೇಕು ? ಗಾಳಿಯನ್ನು ತಿನ್ನಲಿಕ್ಕೊ ? ಸಲಾಮು ಹೊಡೆಯಲಿಕ್ಕೊ ? ಭಾರತಸರಕಾರದ ಜಯಜಯಕಾರವನ್ನು ಮಾಡಲಿಕ್ಕೊ ? ನೆವ್ಹರ್. ಅಲ್ಲಿ ಹೋಗಬೇಕು, ಯಜ್ಞವನ್ನು ಭಂಗಗೊಳಿಸಲಿಕ್ಕೆ, ಹೊಡೆದಾಡಲಿಕ್ಕೆ. ಭಾರತಸರಕಾರಕ್ಕೆ ಚೆನ್ನಾಗಿ ತಿಳಿಯಲಿ, ಇನ್ನೂ ತಮಾಷೆಯನ್ನು ತೋರಿಸಿ ಗಾಳಿಯನ್ನು ತಿನಿಸಿ ನಮ್ಮ ಮರುಳು ಮಾಡುವದು ಶಕ್ಯವಿಲ್ಲವೆಂದು.

**ಸಭಿಕರು**:— Long live Tricksy ! Turncoat for ever !

* * * * *

ನಾರೀಸಂಘದ ಮುಖಪತ್ರವಾದ '**ದಿ ಶಿ-ಮ್ಯಾನ**' ದಿಂದ ಉದ್ಧೃತವಾದದ್ದು

ನಾಳೆ ಮಧ್ಯಾಹ್ನ ಸರಿಯಾಗಿ ಮೂರು ಘಂಟೆಗೆ ಅಖಿಲ-ಬ್ರಿಟಿಶ್-ನಾರೀ-ವಾಹಿನಿಯ ಮೆರವಣಿಗೆಯು ಹೊರಡುವದು. ರಿಜಂಟಪಾರ್ಕದಿಂದ ಆರಂಭವಾಗಿ ಪೋರ್ಟಲ್ಯಾಂಡ ಪ್ಲೇಸ, ರಿಜೆಂಟ ಸ್ಟ್ರೀಟ, ಪಿಕ್ಯಾಡಿಲಿ ಸರ್ಕಸ್, ಟ್ರ್ಯಾಫಲ್ಗರ ಸ್ಕ್ವೇಯರದ ಮೇಲಿಂದ ಹಾದು ಈ ಪ್ರಚಂಡ ಪ್ರೊಸೆಶನ್ ಪಾರ್ಲಮೆಂಟ ಹಾವುಸನ್ನು ಮುಟ್ಟುವದು.

ಸಾವಿರಾರು ವರ್ಷಗಳಿಂದ ಪುರುಷಜಾತಿಯು ನಾರಿಯ ಮೇಲೆ ಅಧಿಪತ್ಯವನ್ನೂ ನಡಿಸುತ್ತ ಬಂದಿದೆ. ಆದರೆ ಇನ್ನು ಮೇಲೆ ಅದರ ಆಟವು

ಸಾಗದು. ನಾವು ನಮ್ಮ ಹಕ್ಕುಗಳನ್ನು ಪಡೆದುಕೊಂಡೇ ತೀರುವೆವು. ನಾವು ವ್ಹೋಟಿನ ಅಧಿಕಾರವನ್ನು ಪಡೆದಿರುವದು ನಿರರ್ಥಕವಾಗಿದೆ. 'ಲಫಂಗ'ರಾದ ಪುರುಷರು ಛಲ, ಬಲ, ಕುಶಲತೆಗಳಿಂದ ಪ್ರಾಧಾನ್ಯವನ್ನು ಮಾಡಿಕೊಂಡು ರಾಷ್ಟ್ರೀಯ ಪರಿಷತ್ತಿನಲ್ಲಿ ಸಾಧಾರಣವಾಗಿ ಏಕಾಧಿಕಾರ ವನ್ನು ನಡೆಸಿದ್ದಾರೆ. ಈ ವ್ಯವಸ್ಥೆಯು ಸಾಗಲಾರದು; ಬ್ರಿಟನ್ನಿನ ಲೋಕ ಸಂಖ್ಯೆಯಲ್ಲಿ ನೂರರಲ್ಲಿ ಅರವತ್ತು ಜನ ಹೆಂಗಸರಿದ್ದಾರೆ. ನಾವು ಈ ಅನು ಪಾತದಲ್ಲಿ ನಾರೀ ಸದಸ್ಯರನ್ನು ಬೇಡುತ್ತೇವೆ. ಸರಕಾರೀ ನೌಕರಿಯಲ್ಲಿಯೂ ನೂರರಲ್ಲಿ ಅರವತ್ತು ಸ್ಥಳಗಳು ಹೆಂಗಸರಿಗಾಗಿರಬೇಕು. ಗಂಡಸರಿಗಿಂತ ನಾವು ಏತರಲ್ಲಿ ಕಡಿಮೆಯವಾಗಿರುವೆವು ? ನಾವು ಡಿವ್ಹಾಯ್ಡೆಡ್ ಸ್ಕರ್ಟ ಧರಿಸುತ್ತೇವೆ; ಕೂದಲ ಕತ್ತರಿಸುತ್ತೇವೆ. ಸಿಗರೇಟು ಸೇದುತ್ತೇವೆ, ಕಾಕ್ ಟೇಲ ಎಳೆಯುತ್ತೇವೆ. ಇಷ್ಟಾಗಿಯೂ ಅಗತ್ಯವೆನಿಸಿದರೆ ಮೋರೆಗೆ ವೈದ್ಯ ರಾಜರ ಕೇಶತೈಲವನ್ನು ಬಳೆದುಕೊಂಡು ಗಡ್ಡ ಮೀಸೆಗಳನ್ನು ಬೆಳೆಸಲೂ ಸಿದ್ಧರೆ. ಪುರುಷರ ಕೂಡ ಯಾವ ಸಂಬಂಧವನ್ನೂ ಇಡುವದಿಲ್ಲ. ಏಕೆಂದರೆ ಅಂತಹ ಸ್ವಾರ್ಥಪರ ಜಾತಿಯು ಜಗತ್ತಿನಲ್ಲಿ ಬೇರೊಂದಿಲ್ಲ. ಈ ಜಗತ್ತು ಪುರುಷರ ಸಲುವಾಗಿಯೆ ನಿರ್ಮಾಣವಾಗಿದೆಯೆಂದು ಅವರು ತಿಳಿದಿದ್ದಾರೆ. ಅವರ ದೇವರು ಸಹ ಪುಲ್ಲಿಂಗ. ನಾವು 'ಹಿ—ಗಾಡ್' ಒಪ್ಪುವದಿಲ್ಲ. ಆಯಿ ಸಿಸ್, ಡಾಯಾನಾ, ಕಾಲೀ ಅಥವಾ ಶೂರ್ಪನಖಾ ಇವರಿಂದಲೇ ನಮ್ಮ ಕೆಲಸ ಸಾಗುವುದು.

ನಾರಿಯೆ, ನೀನಿನ್ನು ಅಬಲಾ ಸರಲಾ niminy-piminy ಗೃಹಿಣಿಯಲ್ಲ. ನೀನು ಹಲ್ಲು ಉಗುರುಗಳನ್ನು ಮಸೆದುಕೊಂಡು ಬಾ; ಭಯಂಕರ ಮೂರ್ತಿಯಾಗಿ ಈ ಮಹಾವಾಹಿನಿಯಲ್ಲಿ ಸೇರಿ ಪಾರ್ಲಮೆಂಟದ ಮೇಲೆ ಆಕ್ರಮಣಮಾಡು. ಹೇಡಿ ಪುರುಷರನ್ನು ಹೊಡೆದಟ್ಟಿ ಸರಕಾರದಿಂದ ನಿನ್ನ ಅಧಿಕಾರವನ್ನು ಪಡೆದುಕೊ.

[1] ಪುರುಷಜಾತಿಯ ಮುಖಪತ್ರವಾದ 'ದಿ ಮಿಯರ್ ಮ್ಯಾನ'ದಿಂದ ಉದ್ಧೃತ.

ಸರಕಾರವು ಏರಕೊಂಡು ಮಲಗಿಕೊಂಡಿರುವದೇನು ? ನಿನ್ನೆ ಈ ಲಂಡನ್ ನಗರದಲ್ಲಿಯ ಪೈಶಾಚಿಕ ಕಾಂಡವನ್ನು ನೋಡಲಾಗಿ ದೇಶದಲ್ಲಿ ಅರಾಜಕತೆಯು ಉಪಸ್ಥಿತವಾಗಿದೆಯೆಂದು ಅನಿಸುತ್ತದೆ. ದುರ್ವೃತ್ತರಾದ ನಾರಿಯರು ಹಗಲೂ ಹಾಡೆ ಭಯಂಕರ ಅತ್ಯಾಚಾರವನ್ನು ನಡೆಸಿದ್ದರು.

ಅಂಗಡಿಗಳನ್ನು ಮುರಿದು ಸಾಮಾನುಗಳನ್ನು ಸೂರೆ ಮಾಡಿದರು. ಬಡ ಪುರುಷರನ್ನು ಕಚ್ಚಿ ಚಿವರಿ, ಜರ್ಜರಿತರನ್ನಾಗಿ ಮಾಡಿದರು. ಆದರೆ ಸರಕಾರದ ಪ್ರೀತಿಯ ಪೋಲೀಸರು ಆಗ ಏನು ಮಾಡುತ್ತಿದ್ದರು? ಅವರು ಬಾಯಲ್ಲಿ ಎಲೆ ಅಡಿಕೆ ತುಂಬಿಕೊಂಡು ಹಲ್ಲು ತೆಗೆದು ಪಿಸಿ ಪಿಸಿ ನಗುತ್ತಿದ್ದರು; ಹಾಗು ಹೆಂಗಸರನ್ನು ಮುತ್ತಿಮುಟ್ಟಿ ಹುರಿದುಂಬಿಸಲಿಕ್ಕೆ ಚಪ್ಪಾಳಿ ಹೊಡೆಯುತ್ತ ಹೀ – ಹ .. ಹ – ಹ – ಹ ಎಂದೆನ್ನುತ್ತಿದ್ದರು. ಖಾನಸಾಹೇಬ ಗಬಸನ್ ಟೋಡಿ, ಸರ್ ಟ್ರಿಕ್ಸೀ ಟರ್ನಕೋಟ ಮೊದಲಾದ ಮಾಸಸೀಯ ದೇಶನಾಯಕರು ದೊಂಬಿಯನ್ನು ನಿಲ್ಲಿಸುವ ಉದ್ದೇಶದಿಂದ ಹೋಗಿದ್ದರು. ಆದರೆ ಹಿಂದೀ ಸಾರ್ಜಂಟರು ಅವರ ಅಪಮಾನವನ್ನು ಮಾಡಿ 'ಸಾಹೇಬರೆ, ಅತ್ತ ಕಡೆಗೆ ಹೋದರೆ ಹೊಡತ ಬಿದ್ದಾವು' ಎಂದು ಅಂದರು.

ನಿಶ್ಚಯವಾಗಿ ಈ ದೊಂಬಿಯಿಂದ ಸರಕಾರಕ್ಕೆ ಒಳಗೊಳಗೆ ಬಹಳ ಆನಂದವಾಗಿರಲಿಕ್ಕೆ ಬೇಕು. ಏಕೆಂದರೆ ದೇಶದಲ್ಲಿ ಆತ್ಮಕಲಹ ಬೆಳೆದಷ್ಟು ಸರಕಾರಕ್ಕೆ ಹೇಳಲು ಅನುಕೂಲವಾಗುತ್ತದೆ, 'ನೀವಿನ್ನೂ ಸ್ವರಾಜ್ಯಕ್ಕೆ ಅಪಾತ್ರರಿರುವಿ'ರೆಂದು.

* * * * *

'ರಾಷ್ಟ್ರವಿತ್'ದಿಂದ ಉದ್ಧೃತವಾದದ್ದು

ಇಂಗ್ಲಿಷರಲ್ಲಿ ಬುದ್ಧಿಶಾಲಿಗಳು ಯಾರಾದರೂ ಇದ್ದರೆ, ಅವರ ಸ್ವಾಧೀನತೆಯ ಆಶೆಯು ದೂರ ಸಾರಿದಂತೆಂದು ಅವರಿಗೆ ಈಗ ತಿಳಿಯುವಂತಿದೆ. ಲಿಬರ್ಟೀ ಲೀಗ, ಆಂಗ್ಲೋ–ಸೆಲ್ಟಿಕ ಯುರೋಸಿಯನ್, ಹೆಟೆರೋ – ಸೆಕ್ಚಅಲ್ ಪ್ಯಾಕ್ಟ – ಇವೆಲ್ಲ ಕೇಳಲಿಕ್ಕೆ ಚೆನ್ನಾಗಿವೆ. ಆದರೆ ಈ ತಣ್ಣಗಿನ ದೇಶದ ರಕ್ತವು ದ್ವೇಷ ಹಿಂಸೆಗಳಿಂದ ಕಾಯಿತೆಂದರೆ ಈ ತಾತ್ವಿಕ ಮಾತುಗಳಿಂದ ಆಗ ನಡೆಯುವದಿಲ್ಲ. ದೊಂಬಿಯೆದ್ದಿತೆಂದರೆ ಅದನ್ನು ಪರಿಹರಿಸಲು ಭಾರತಸರಕಾರದ ದಂಡನೀತಿ ಹಾಗು ದುರ್ದಮ ಉಡಿಯಾ ಪೋಲೀಸರೆ ಸಮರ್ಥರು.

ಸ್ವಾಯತ್ತ–ಶಾಸನವು ಬ್ರಿಟಿಶ್ ಜಾತಿಯ ಜನ್ಮಸಿದ್ಧ ಅಧಿಕಾರವೆಂದು ಅಲ್ಲಲ್ಲಿ ಸೊಲ್ಲು ಕೇಳಬರುತ್ತದೆ. ಆದರೆ ಬ್ರಿಟಿಶರೆ, ನಿಮ್ಮ ಇತಿಹಾಸವು ಏನು ಹೇಳುತ್ತದೆ? ಸ್ವಾತಂತ್ರ್ಯವೆಂದರೆ ಏನೆಂಬುದು ನಿಮಗೆಂದೂ ಗೊತ್ತಿರಲಿಲ್ಲ. ಮೊದಲು ರೋಮನ್‌ರ, ಆನಂತರ ಆಂಗ್ಲ ಸ್ಯಾಕ್ಸನ್,

ಡೇನ, ನಾರ್ಮನ್ ಪ್ರಭೃತಿ ದಸ್ಯುಜಾತಿಗಳ ಅಧೀನತೆಯಲ್ಲಿ ನಿಮ್ಮ ದಿನಗಳು ಕಳೆದಿವೆ. ಯಾರು ವಿಜೇತರ ರೂಪದಿಂದ ನಿಮ್ಮ ದೇಶಕ್ಕೆ ಬಂದರೋ ಅವರೇ ಅನಂತರ ಪರಾಜಿತರಾಗಿದ್ದಾರೆ. ನಿಮ್ಮಲ್ಲಿ ಇಂದು ಪರಾಜಿತರಾರು ವಿಜೇತರಾರು ಎಂಬುದು ತಿಳಿಯುವಂತಿಲ್ಲ. ನಿಮ್ಮಲ್ಲಿ ಯಾರಿಗೂ ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಆಗಲಿಲ್ಲ. ನಿಮ್ಮ ಜಾತಿಯಲ್ಲಿ ಧೈರ್ಯವಿಲ್ಲ. ಸ್ಥೈರ್ಯವಿಲ್ಲ; ದೇಶವು ನಿಮ್ಮದಲ್ಲ; ಧರ್ಮವು ಸಹ ನಿಮ್ಮದಲ್ಲ. ಐಕ್ಯವಂತೂ ನಿಮ್ಮಲ್ಲಿ ಯಾವಕಾಲದಲ್ಲಿಯೂ ಇರಲಿಲ್ಲ. ಸಾಮಾಜಿಕ ಆರ್ಥಿಕ ಮೊದಲಾದ ಅನೇಕಾನೇಕ ಪಕ್ಷವಿಪಕ್ಷಗಳು ನಿಮ್ಮಲ್ಲಿ. ಕ್ಷುದ್ರ ಬ್ರಿಟನ್ನದ ಅವಸ್ಥೆಯೇ ಹೀಗೆಂದ ಮೇಲೆ ಇಡೀ ಯುರೋಪದ ಮಾತನ್ನು ಎತ್ತದಿರುವದೆ ನೆಟ್ಟಗೆ! ಅನೇಕ ಜಾತಿ, ಅನೇಕ ಭಾಷೆ, ಅನೇಕ ಧರ್ಮಗಳು ಯುರೋಪವನ್ನು ಶಾಶ್ವತವಾಗಿ ವಿಚ್ಛಿನ್ನಗೊಳಿಸಿವೆ. ಕೇವಲ ಭಾರತ ಸರಕಾರದ ಶಾಸನದಿಂದ ಈ ಮಹಾದೇಶವು ತಣ್ಣಗಾಗಿದೆ. ನೀವು ಮೊದಲು ಅಷ್ಟು ಸುಧಾರಿಸಿರಿ, ಅನಂತರ ಸ್ವಾಧೀನತೆಯ ಕನಸನ್ನು ನೋಡಿರಿ. ನೀವು ಜೂಜು ಹಾಗು ಶೆರೆಯಲ್ಲಿ ಮುಣುಗಿಹೋಗಿರುವಿರಿ. ಕಾಡುಜನರಂತೆ ನೀವಿನ್ನೂ ಕುಣಿಯುತ್ತಿರುವಿರಿ. ಸ್ನಾನಮಾಡಲಿಕ್ಕೆ ಹೆದರುತ್ತೀರಿ. ಊಟವಾದ ಮೇಲೆ ಬಾಯಿ ಮುಕ್ಕಳಿಸುವದಿಲ್ಲ. ಇನ್ನು ಕೆಲವು ಕಾಲ ಶಾಂತರೂ ಶಿಷ್ಟರೂ ಆಗಿ ಎಲ್ಲ ವಿಷಯಗಳಲ್ಲಿ ಭಾರತರನ್ನು ಅನುಸರಿಸಿರಿ. ಆಮೇಲೆ ಯಥಾ ಸಮಯದಲ್ಲಿ ನಿಮಗೆ ಅಧಿಕಾರ ಕೊಡುವುದು-ಬಿಡುವುದರ ವಿಷಯವಾಗಿ ವಿಚಾರಮಾಡಲಾದೀತು.

ಭೌಮಸ್ವಾಟ ಅರಮನೆ. ಪ್ರಿನ್ಸಭೌಮ ಚೈನೀಕ ಪರ್ಯಟಕನಾದ ಲ್ಯಾಂಗಸ್ವ್ಯಾಂಗ ಮತ್ತು ಪ್ರಿನ್ಸನ ಖಾನಸಾಮಾ ಕೋಬಲ್ಟ

**ಪ್ರಿನ್ಸಭೌಮ:—** ಒಳ್ಳೇದು ಹೇರ್ ಸ್ವ್ಯಾಂಗ, ನೀವಂತೂ ಅನೇಕ ದೇಶಗಳನ್ನು ತಿರುಗಿರುವಿರಿ. ನಮ್ಮ ಈ ರಾಜ್ಯವು ನಿಮಗೆ ಹೇಗನಿಸುತ್ತದೆ?

**ಲ್ಯಾಂಗ ಸ್ವ್ಯಾಂಗ:—** ಕೆಟ್ಟ ಅಲ್ಲ. ಬಯಲು ಇದೆ, ನೀರು ಇದೆ, ರೊಟ್ಟಿ ಇದೆ, ಹುಲ್ಲು ಇದೆ, ಹಂದಿ ಕುರಿ ಎಲ್ಲವೂ ಇವೆ. ಆದರೆ ದೇಶದ ಜನರು ಎಲ್ಲರೂ ಸುಂದರಾದಂತೆ ಕಾಣುತ್ತಾರೆ. ಅದೇಕೆ ಹೇಳಿರಿ?

**ಪ್ರಿನ್ಸ:—** ಇದೇ ಮೋಜು! ಇಡೀ ಯುರೋಪದಲ್ಲಿ ಕಂಡು

ಬರುವ ಅಸಂತೋಷ ಚಾಂಚಲ್ಯಗಳು ಇಲ್ಲಿ ತೋರವು. ಖಾಸ ಭಾರತ ಸರಕಾರದವರು "ನಾವು ನಮ್ಮ 'ಖಾಸ' ರಾಜ್ಯದಲ್ಲಿ ಪ್ರಜೆಗಳಿಗೆ ನಮ್ಮ ಇಚ್ಛೆಯಂತೆ ತುಸು ಸಲಿಗೆಯನ್ನು ಕೊಡುವೆವು ಮತ್ತು ಲಗಾಮನ್ನು ನಮ್ಮ ಕೈಯಲ್ಲಿ ಇಟ್ಟುಕೊಳ್ಳುವೆವು. ನೀವಿನ್ನೂ ಅಲ್ಪವಯಿಗಳಾಗಿರುವಿರಿ. ಸಲಿಗೆ ಕೊಟ್ಟಿರುವೆವೆಂದು ಜಿಗಿದಾಡಬೇಡಿರಿ, ಹಾಳಾದೀರಿ. ನಿಮ್ಮ ರಾಜ್ಯದಲ್ಲಿ ಏನಾದರೂ ಗೊಂದಲವೆದ್ದಿತೆಂದರೆ ನಿಮ್ಮ ಕಿವಿಹಿಡಿದು ಹೊರಗೆ ಹಾಕುವೆವು." ಎಂದೆನ್ನುತ್ತಾರೆ. ಆದ್ದರಿಂದ ರಾಜ್ಯದಲ್ಲೆಲ್ಲ ಮಾದಕಪದಾರ್ಥಗಳ ವ್ಯವಸ್ಥೆಯನ್ನು ಮಾಡಿದ್ದೇನೆ, ಎಲ್ಲರೂ ಮಂಕಾಗಿಬಿಟ್ಟಿದ್ದಾರೆ. ಕೋಬಲ್ಟ, ಇನ್ನೊಂದು ಗುಳಿಗೆಯನ್ನು ಕೊಡಪಾ, ಮೂರು ಹೊಡೆಯಿತು ಕಸಿವಿಸಿಯಾಗುತ್ತಿದೆ. ಆಹಾ, ನಿಮ್ಮ ಪೂರ್ವಪುರುಷರು ಎಂಥ ಅಮೌಲ್ಯ ವಸ್ತುವಿನ ಶೋಧ ಮಾಡಿದ್ದಾರೆ, ಹೇರ ಪ್ಯಾಂಗ!

**ಲ್ಯಾಂಗ ಪ್ಯಾಂಗ:—** ಆದರೆ ಅದೀಗ ನಮ್ಮ ದೇಶದಲ್ಲಿ ಹುಟ್ಟುವದಿಲ್ಲ, ನೀವು ತಿನ್ನುವದನ್ನು ನಿಮಗಾಗಿಯೆ ಹಿಂದುಸ್ಥಾನದಲ್ಲಿ ಬೆಳೆಸುತ್ತಿದ್ದಾರೆ.

(ಪ್ರಿನ್ಸನ ಮಂತ್ರಿಯಾದ ಬ್ಯಾರೆನ್ ಫಾನ್ ಬಿಬ್‌ಲರನ ಪ್ರವೇಶ)

**ಬಿಬ್‌ಲರ್:—** ಮಹಾರಾಜ, ಇಂಗ್ಲಂಡದಿಂದ ಸರ್ ಟ್ರಿಕ್ಸಿ ಟರ್ನಕೋಟ ಇವರು ತಮ್ಮನ್ನು ಕಾಣಲಿಕ್ಕೆ ಬಂದಿದ್ದಾರೆ.

**ಪ್ರಿನ್ಸ:—** ಥೂ ಬೇಸರ ಬಂತು. ಏನೋ ಅಷ್ಟು ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕೆಂದರೆ ಆಗಲೊಲ್ಲದು. ಕರೆದುಕೊಂಡು ಬಾ. ಅಪಾ ಕೋಬಲ್ಟ, ನನ್ನನ್ನು ಎಡಮಗ್ಗಲು ಮಲಗಿಸು.

**ಲ್ಯಾಂಗಪ್ಯಾಂಗ:—** ಹಾಗಾದರೆ ನಾನಿನ್ನು ಹೋಗು......

**ಪ್ರಿನ್ಸ:—** ಬೇಡ ಬೇಡ, ಕೂಡಿರಿ. ನಾನು ಭಾರತೀಯ ಕಾಯಿದೆಯಂತೆ ಜನರ ಭೆಟ್ಟಿಯನ್ನು ತೆಗೆದುಕೊಳ್ಳುವೆನು. ಒಬ್ಬೊಬ್ಬರಿಗೆ ಅಡಿಯನ್ನ ಕೊಡುವದು ನನಗೆ ಬಗೆಹರಿಯುವದಿಲ್ಲ. ಒಮ್ಮೆಲೆ ಏಳೆಂಟು ಜನರ 'ದರ್ಬಾರ' ಕೇಳುವೆನು. ಇದರಿಂದ ಶ್ರಮವೂ ಕಡಿಮೆ, ಹರಟೆಯೂ ಚೆನ್ನಾಗುವದು.

(ಟರ್ನಕೋಟನ ಪ್ರವೇಶ)

**ಪ್ರಿನ್ಸ:—** ಹಾ – ಡೂ – ಡೂ ಸರ್ ಟ್ರಿಕ್ಸೀ? ಈ ಕುರ್ಚಿಯ ಮೇಲೆ ಕುಳಿತುಕೊಳ್ಳಿರಿ. ಮತ್ತೇನು ಸಮಾಚಾರ?

**ಟರ್ನಕೋಟ:**— ಪ್ರಿನ್ಸ, ತಾವು ಹಾಗ್ ನಗರಕ್ಕೆ ಹೋಗಲಿಕ್ಕೆ ಬೇಕು, ಪ್ಯಾನ್-ಯುರೋಪಿಯನ್ ಲಿಬರ್ಟೀ ಲೀಗಿನ ಸಭಾಪತಿಯಾಗಿ.

**ಪ್ರಿನ್ಸ:**— ಮಾಯಿನ್ ಗಟ್! ಏನನ್ನುತ್ತಾರೆ ಇವರು? ಕೋಬಲ್ಟ, ಇನ್ನೊಂದು ಗುಳಿಗೆಯನ್ನು ತೆಗೆದುಕೊಂಡು ಬಾ.

**ಟರ್ನಕೋಟ:**— ಒಳ್ಳೇದು, ಸಭಾಪತಿಯಾಗಲು ತಾವು ಆಕ್ಷೇಪಿಸುತ್ತಿದ್ದರೆ ಹಾಗೆಯೆ ಹೋಗಿರಿ. ತಾವು ಹೋಗದಿದ್ದರೆ ನಾಶು ಬಿಟ್ಟವನಲ್ಲ.

**ಪ್ರಿನ್ಸ:**— ಹಾಗ್‌ಕ್ಕೆ ಹೋಗಬೇಕೆ? ನಿಮಗೆ ಹುಚ್ಚು-ಗಿಚ್ಚು ಹಿಡಿದಿದೆಯೇನು?

**ಟರ್ನಕೋಟ:**— ಏಕೆ, ಇದರಲ್ಲಿ ಅಡ್ಡಿಯೇನು? ಪ್ಲಾಯ್‌ಕೌಂಟ ಪಫ್, ಕಾವುಂಟೆಸ್ ಗ್ರಿಮೂಲಕಿನ್, ಗ್ರ್ಯಾಂಡ ಡ್ಯೂಕ ಪ್ಯಂಜನ್ ಡ್ರ್ಯಾಮ್ ಇವರೆಲ್ಲರೂ ಹೋಗುವವರಿದ್ದಾರೆ.

**ಪ್ರಿನ್ಸ:**— ಎಲ, ಅವರನ್ನೂ ನನ್ನನ್ನೂ ಒಂದೇ ಮಾಡಿದಿರಾ? ಅವರು ನನ್ನ ಸಾಟಿಯೆ? ಅವರು ಕ್ಷುಲ್ಲಕರಾದ ಭಾರತೀಯ ಪ್ರಜೆಗಳು. ಅವರು ಹೋಗಲಿ ಸುಡಗಾಡಿಗೆ! ನಾನೊಬ್ಬ ಸ್ವತಂತ್ರ ಸಾಮಂತ ನರಪತಿಯು. ಹೋಗಬೇಕೆಂದ ಕೂಡಲೆ ಹೋಗಿಯೆ ಬಿಡಬೇಕೆ? ಇನ್ನು ಮಹಾಕ್ಷತ್ರಪನ ಅಪ್ಪಣೆಯನ್ನು ಕೇಳಲಿಕ್ಕೆ ಹೋಗಬೇಕೆಂದರೆ ಅವನು 'ರಾಜ್ಯವನ್ನು ಬಿಟ್ಟು ಈಗಿಂದೀಗಲೆ ವನವಾಸಕ್ಕೆ ಹೋಗು' ಎಂದೆನ್ನುವನು.

**ಟರ್ನಕೋಟ:**— ಹಾಗಾದರೆ ರಾಜಸೂಯ ಯಜ್ಞಕ್ಕೂ ಹೋಗುವದಿಲ್ಲವೆಂದು ವಚನ ಕೊಡಿರಿ.

**ಪ್ರಿನ್ಸ:**— ಗಾಟ್ ಇನ್ ಹಿಮ್ಮೇಲ! ನಿಮ್ಮ ತಲೆ ಕೆಟ್ಟಿದೆಯೆಂದು ಕಾಣುತ್ತದೆ. ರಾಜಸೂಯ ಯಜ್ಞಕ್ಕೆ ಹೋಗಬೇಕೆಂದು ಆರು ತಿಂಗಳಿಂದ ಸಿದ್ಧತೆಯನ್ನು ನಡೆಸಿದ್ದೇನೆ, ಕೋಟ್ಯಾವಧಿ ರೂಪಾಯಿಗಳು ವ್ಯಯವಾಗುವವು. ನಿಮ್ಮ ಮಾತು ಕೇಳಿ ಎಲ್ಲವನ್ನೂ ಬಿಟ್ಟುಬಿಡಲೋ? ಇರಲಿ ಬ್ಯಾರನ್, ಡೊಳ್ಳುಗಳೆಲ್ಲವೂ ಸರಿಯಾಗಿವೆಯಷ್ಟೆ? ಹದಿನೇಳು ಎಣಿಸಿ ನೋಡಿರುವಿಯೊ?

**ಬಿಬ್‌ಲರ:**— ಜೀಯಾ, ನಾನೆಲ್ಲವನ್ನೂ ಬಿಸಿಲಲ್ಲಿಡಿಸಿ ಖಣ ಖಣ ಎನ್ನುವಂತೆ ಮಾಡಿದ್ದೇನೆ.

**ಪ್ರಿನ್ಸ:**— ಸರಿಯಾಗಿ ಹದಿನೇಳು ಇವೆಯಷ್ಟೆ?

**ಲ್ಯಾಂಗಸ್ಪ್ಯಾಂಗ:**— ಈ ಡೊಳ್ಳುಗಳೇಕೆ ಪ್ರಿನ್ಸ ?

**ಪ್ರಿನ್ಸ್:**— ಬಾರಿಸಲಿಕ್ಕೆ. ನಾನು ಹೊರಟಕೂಡಲೆ ಹದಿನೇಳು ಡೊಳ್ಳುಗಳು ಬಾರಿಸುವವು. ಪ್ರಿನ್ಸ ಡ್ರಂಕೆನ್ ಡಾರ್ಫನಿಗೆ ಹದಿಮೂರೆ ಡೊಳ್ಳು. ನನಗೆ ಹದಿನೇಳು.

**ಲ್ಯಾಂಗ ಸ್ಪ್ಯಾಂಗ:**— ತಮಗೆ ಏನು ಕಡಿಮೆಯಾಗಿದೆ ? ಮನಸ್ಸಿನಲ್ಲಿ ಬಂದರೆ ಹದಿನೇಳರ ಸ್ಥಳದಲ್ಲಿ ಹದಿನೇಳುನೂರು ಡೊಳ್ಳು, ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು.

**ಪ್ರಿನ್ಸ:**— ಹೆ ಹೆ, ಡೊಳ್ಳಿನ ಬಗ್ಗೆ ಹಾಗೆಂದರೆ ನಡೆಯುವಂತಿಲ್ಲ. ಸರಕಾರದವರು ಎಷ್ಟು 'ಮಂಜೂರು' ಮಾಡಿರುವರೋ ಅಷ್ಟೇ ಬಾರಿಸ ಬೇಕು. ಹೆಚ್ಚಿಗೆ ಬಾರಿಸಿದರೆ ತೀರಾ ನಿರರ್ಥಕವೆಂದಾಗುವದು. ಕೋಬಲ್ಟ, ನನ್ನ ಮೂಗಿನ ಮೇಲೆ ತುಸು ತುರಿಸು ನೋಡೋಣ.

**ಟರ್ನಕೋಟ:**— ಹಾಗಾದರೆ ತಾವು ನನ್ನ ಯಾವ ಬೇಡಿಕೆಯನ್ನು ಅಂಗೀಕರಿಸುವದಿಲ್ಲವೆ ?

**ಪ್ರಿನ್ಸ:**— ಅತ್ಯಂತ ದುಃಖಿತ. ಆದರೆ ನಿಮ್ಮ ಉದ್ಯಮದ ವಿಷಯ ವಾಗಿ ನನಗೆ ಸಂಪೂರ್ಣ ಸಹಾನುಭೂತಿಯುದೆಯೆಂದು ತಿಳಿಯಿರಿ. ಬ್ಯಾರನ್ ಬಿಬ್‌ಲರ್, ನೀವು ಅಷ್ಟು ಆ ಕೋಣೆಗೆ ಹೋಗಿರಿ, ಹಾಂ.... ನೋಡಿರಿ, ಸರ್ ಟ್ರಿಕ್ಸೀ ನಿಮ್ಮ ಕೂಡ ದೇಶ ಉದ್ಧಾರ ಮಾಡಲಿಕ್ಕೆ ಹೋಗಿ ನಾನು ಈ ಪೈತೃಕ ರಾಜ್ಯವನ್ನೂ ಪೈತೃಕ ಪ್ರಾಣವನ್ನೂ ಕಳೆಯಲಾರೆ. ಏನೋ ಬದುಕಿದ್ದರೆ ಮತ್ತು ನಿಮ್ಮ ಕಾರ್ಯಸಿದ್ಧಿಯಾದರೆ ಹಾಗು ಯುರೋಪದ ಸಲುವಾಗಿ ಒಬ್ಬ ಪ್ರತಾಪಶಾಲಿಯಾದ ಎಮ್ಪರರ್ ಅಥವಾ ಕೈಸರ ಅಥವಾ ಡಿಕ್ಟೇಟರನ ಆವಶ್ಯಕತೆಯುಂಟಾದರೆ, ಆಗ ನನ್ನ ಕಡೆಗೆ ಬನ್ನಿರಿ. ಈ ಕೆಲಸವು ನಮ್ಮ ವಂಶಗತನಷ್ಟೆ; ಆದ್ದರಿಂದ ಮೈಯುಂಡಿದೆ. ಆಯಿತು, ಸರ್ ಟ್ರಿಕ್ಸೀ, ಒಂದು ಗುಳಿಗೆಯನ್ನು ನುಂಗಿ ನೋಡುವಿರೇನು ? ತಲೆಗೆ ತಂಪಾಗುವದು. ಅಭ್ಯಾಸವಿಲ್ಲವೋ ? ಒಂದು ಗ್ಲಾಸ್ ಶ್ಯಾಮ್ಪೇನು ಕುಡಿಯಿರಿ.

'ದಿ ಲಂಡನ ಫಾಗ'ದಿಂದ ಉದ್ಧೃತವಾದದ್ದು

ಎರಡು ತಿಂಗಳ ನಿರಂತರ ಹರತಾಳದ ಮಧ್ಯದಲ್ಲಿ ರಾಜಸೂಯ ಯಜ್ಞವು ಸಮಾಪ್ತವಾಯಿತು. ಯುರೋಪದ ಜನತೆಯು ಈ ಅನುಷ್ಠಾನ

ವನ್ನು ಬಹಿಷ್ಕರಿಸಿ ಆತ್ಮಸಮ್ಮಾನವನ್ನು ಉಳಿಸಿಕೊಂಡಿದೆ, ಅರ್ಥಾತ್ ಕೆಲ ಪಟ್ಟೇ ಜನರನ್ನು ಬಿಟ್ಟು ನಾವು ಯಜ್ಞಕ್ಷೇತ್ರದಲ್ಲಿ ಉಪಸ್ಥಿತರಿರಲಿಲ್ಲ, ಸುತರಾಂ ಮತ್ತೇನೂ ಸುದ್ದಿ ಗೊತ್ತಿಲ್ಲ.

* * * * *

"ರಾಷ್ಟ್ರವಿತ"ದಿಂದ ಉದ್ಧೃತವಾದದ್ದು

ರಾಜಸೂಯ ಯಜ್ಞವು ನಿರ್ವಿಘ್ನವಾಗಿ ಸಾಂಗವಾಯಿತು. ತಥಾ ಕಥಿತ ದೇಶನಾಯಕರನ್ನು ಪುರ್ಖ್ಯೋ ಎಂದು ಅಲ್ಲಗಳೆದು ಯುರೋಪದ ಜನ ಸಾಧಾರಣರು ಈ ವಿರಾಟ್ ಸಮಾರಂಭದಲ್ಲಿ ಭಾಗವಹಿಸಿ ಅತ್ಯಂತ ಹರ್ಷಿತ ರಾಗಿದ್ದಾರೆ.

ಯಜ್ಞ-ಉಪಲಕ್ಷ್ಯವಾಗಿ ಅನೇಕರು ಸರಕಾರಕ್ಕೆ ಅನೇಕ ಪ್ರಕಾರಗ ಳಿಂದ ಸಹಾಯ ಮಾಡಿದ್ದಾರೆ. ಅವರಲ್ಲಿ ಸರ್ ಟ್ರಿಕ್ಸೀ ಟರ್ನಕೋಟ ಇವರ ಹೆಸರು ವಿಶೇಷ ಉಲ್ಲೇಖ ಯೋಗ್ಯವಾಗಿದೆ. ಸರಕಾರದವರು ಬ್ರಿಟಿಶ್ ಮೇಷ-ವಂಶದ ಉತ್ಕರ್ಷ ಸಾಧನೆಗಾಗಿ ನಿಯಮಿಸಿದ ಕಮಿಶನ್ನಿನ ಪ್ರೆಸಿ ಡೆಂಟರಾಗಿ ಸರ್ ಟ್ರಿಕ್ಸೀಯವರು ಶೀಘ್ರದಲ್ಲಿಯೆ ಕಾಮರೂಪ ಯಾತ್ರೆ ಯನ್ನು ಮಾಡುವವರಿದ್ದಾರೆಂದು ಕೇಳುತ್ತೇವೆ.



# ಶ್ರೀ ಸಿದ್ಧೇಶ್ವರ ಲಿಮಿಟೆಡ್



ಕಾಲಯುಕ್ತ ಸಂವತ್ಸರ, ಮಾಘ ವದ್ಯ ದ್ವಿತೀಯಾ. ಆರ್ಮೇನೀ ಚರ್ಚಿನಲ್ಲಿ ಇದೇ ಈಗ ಹನ್ನೊಂದು ಹೊಡೆದಿದೆ. ಶ್ಯಾಮಲಾಲರು ಕೈಯಲ್ಲಿ ಚರ್ಮದ ಬ್ಯಾಗ್ ತೂಗಾಡಿಸುತ್ತ ಜೂಡಾಸ್ ಲೇನಿನಲ್ಲಿರುವ ಒಂದು ಮೂರಂತಸ್ತಿನ ಮನೆಯನ್ನು ಹೊಕ್ಕರು. ಮನೆ ಬಹಳ ಹಳೆಯದು. ಎಂದಿನಿಂದಲೂ ಬಳಿಯಲ್ಪಡುತ್ತಿರುವ ಸುಣ್ಣಬಣ್ಣಗಳಿಂದ ಅದಕ್ಕೆ, ಮೀಸೆಗೆ ಕಲಪು ಹಚ್ಚಿಕೊಂಡ ಸುಕ್ಕು ಮೈಯ ಮುದುಕನ ಸ್ವರೂಪವು ಬಂದಿದೆ. ಕೆಳಗಿನ ಅಂತಸ್ತಿನಲ್ಲಿ ಕತ್ತಲೆಗವಿದ ವಖಾರಗಳಿವೆ; ತುಂಬಾ ಸಾಮಾನುಗಳನ್ನು ಒಟ್ಟಿದ್ದಾರೆ. ಮೇಲಂತಸ್ತಿನ ಮುಂಬದಿಯಲ್ಲಿ ಅನೇಕ ಉದ್ದಿಮೆದಾರರ ಆಫೀಸುಗಳಿವೆ. ಹಿಂಬದಿಯಲ್ಲಿ ವಿಭಿನ್ನ ಜಾತೀಯ ಪರಿವಾರಗಳು

ಬೇರೆ ಬೇರೆ ಭಾಗಗಳಲ್ಲಿ ವಾಸಿಸುತ್ತವೆ. ಪ್ರವೇಶದ್ವಾರದ ಎದುರಿನಲ್ಲಿಯೆ ಮೂರಂತಸ್ತಿನ ತನಕ ಕಟ್ಟಿಗೆಯ ಹಂತವಿದೆ. 'ಉಗುಳಕೂಡದು' ಎಂದು ನೋಟೀಸು ಹಚ್ಚಿದ್ದರೂ ಬದಿಯ ಗೋಡೆಗಳು ತಾಂಬೂಲದ ಉಗುಳಿನಿಂದ ಕೆಂಪಾಗಿವೆ. ಸಣ್ಣ ಸಣ್ಣ ಇಲಿಗಳೂ ಜೊಂಡಿಂಗಗಳೂ ಪರಸ್ಪರ ಅಹಿಂಸಾ ಭಾವದಿಂದ ಸ್ವಚ್ಛಂದವಾಗಿ ಅತ್ತಿತ್ತ ಓಡಾಡುತ್ತಿವೆ. ಇವು ಆಶ್ರಮಮೃಗಗಳಂತೆ ನಿಶ್ಶಂಕವಾಗಿವೆ; ಹಂತದ ಮೇಲಿಂದ ಏರಿಳಿಯುವ ಜನರ ಪರಿವೆಯೇ ಇಲ್ಲ ಇವಕ್ಕೆ. ಒಳಗೆ ಇರುವ ಸಿಂಧೀ ಪರಿವಾರದ ಅಡುಗೆಮನೆಯಿಂದ ಹೊರಡುತ್ತಿರುವ ಇಂಗಿನ ತೀವ್ರ ಗಂಧದೊಡನೆ ಕಾಲುವೆಯ ದುರ್ಗಂಧವು ಕೂಡಿಕೊಂಡು ಎಲ್ಲೆಲ್ಲಿಯೂ ಘಮಘಮಿಸುತ್ತಿದೆ. ಆಫೀಸುಗಳ ಒಡೆಯರು ಇಂತಹ ತುಚ್ಛ ವಿಷಯಗಳನ್ನು ಲೆಕ್ಕಿಸುವದಿಲ್ಲ. ಅವರು ಯಾವಾಗಲೂ 'ಖರೀದಿ – ವಿಕ್ರಿ' 'ತೇಜೀ – ಮಂದಿ' 'ಜಮಾ – ಖರ್ಚ' ಇವೇ ಮೊದಲಾದ ಮಹತ್ಕಾರ್ಯಗಳಲ್ಲಿ ತೊಡಗಿಕೊಂಡಿರುತ್ತಾರೆ.

ಶ್ಯಾಮಲಾಲರು ಮೂರಂತಸ್ತಿನ ಮೇಲಿರುವ ಒಂದು ಕೋಣೆಯ ಕೀಲಿಯನ್ನು ತೆರೆದರು. ಬಾಗಿಲ ಬದಿಯಲ್ಲಿರುವ ಹಲಿಗೆಯ ಮೇಲೆ ಬರೆದಿದೆ- 'ಬ್ರಹ್ಮಚಾರೀ ಎಂಡ್ ಬ್ರದರ – ಇನ್ – ಲಾ, ಜನರಲ್ ಮರ್ಚಂಟ್ಸ.' ಈ ಉದ್ಯಮದ ಚಾಲಕರೆಂದರೆ ಸ್ವಯಂ ಶ್ಯಾಮಲಾಲರು ಮತ್ತು ಅವರ ಬೀಗರಾದ ಬಿಪಿನ ಚೌಧುರೀ, ಬಿ. ಎಸ್‌ಸಿ, ಇವರು. ಕೋಣೆಯಲ್ಲಿ ಕೆಲ ಹಳೆಯ ಮೇಜು, ಖುರ್ಚಿ, ಕಪಾಟು ಮೊದಲಾದ ಆಫೀಸಿನ ಸರಂಜಾಮು. ಮೇಜಿನ ಮೇಲೆ ಹಲವು ಬಗೆಯ ಖಾತೆಗಳು, ಹಂಚುವದಕ್ಕಾಗಿ ಅಚ್ಚು ಹಾಕಿಸಿದ ಪ್ರಕಟನೆಗಳು,ಒಂದು ಹಳೆಯ 'ಥ್ಯಾಕರ್ಸ ಡಿರೆಕ್ಟರೀ,' 'ಇಂಡಿಯನ್ ಕಂಪನೀಜ ಆ್ಯಕ್ಟ' ಒಂದು, ಬೇರೆ ಕಂಪನಿಗಳ ನಿಯಮಾವಲಿ ಅಥವಾ Articles ಹಾಗೂ ಇತರ ಕಾಗದಪತ್ರಗಳು ಕೆಲವು, ಗೋಡೆಗೆ ಆತಿರುವ 'ಶೆಲ್ಫಿ'ನ ಮೇಲೆ ಧೂಳಿ ಮುಸುಕಿದ ಬಾಟಲಿಗಳು ಮತ್ತು ಶೂನ್ಯಗರ್ಭ ತಾಯಿತಗಳು. ಒಂದಾನೊಂದು ಕಾಲದಲ್ಲಿ ಶ್ಯಾಮಲಾಲರು ಪೇಟಂಟ ಹಾಗು ಸ್ವಪ್ನದೋಷಾದಿಗಳ ಮೇಲಿನ ಔಷಧಗಳ ವ್ಯಾಪಾರವನ್ನು ಮಾಡುತ್ತಿದ್ದರು; ಇವು ಅದರ ನಿದರ್ಶನ.

ಶಾಮಲಾಲರ ವಯಸ್ಸು ಐವತ್ತರ ಒಳ ಹೊರಗೆ. ಮಿಂಚುವ ಕಪ್ಪು

ಪೈಬಣ್ಣ, ಅರೆನೆರೆತ ಗಡ್ಡ, ಕೊರಳ ವರೆಗೆ ಇಳಿಬಿದ್ದ ತಲೆಗೂದಲು. ತುಂಬು ಗೂದಲಿನ ಸ್ಥೂಲ ದೇಹ. ಚಿಕ್ಕಂದಿನಿಂದಲೆ ಸ್ವತಂತ್ರ ವ್ಯವಸಾಯದ ಕಡೆಗೆ ಅವರ ಪ್ರವೃತ್ತಿ; ಆದರೆ ಇಲ್ಲಿಯವರೆಗೆ ಅನೇಕ ತರದ ಉದ್ಯಮಗಳನ್ನು ಹೂಡಿದರೂ ಯಾತರಿಂದಲೂ ವಿಶೇಷ ಲಾಭವಾಗಿಲ್ಲ. ಈ. ಬಿ. ರೇಲ್ವೆಯ ಆಡಿಟ್ ಆಫೀಸಿನಲ್ಲಿಯ ನೌಕರಿಯೆ ಅವರ ಜೀವನ ನಿರ್ವಾಹದ ಮುಖ್ಯ ಸಾಧನವಾಗಿದೆ. ಊರಲ್ಲಿ ತುಸು ಜಮೀನು ಇದೆ. ಒಂದು ಪುರಾತನ ಕಾಲೀ ಮಂದಿರವೂ ಇದೆ. ಆದರೆ ಅದರ ಉತ್ಪನ್ನವು ತೀರ ಸಾಮಾನ್ಯ. ಬಿಡುವು ದೊರೆತಾಗ ಸ್ವತಂತ್ರ ವ್ಯವಸಾಯದ ಪ್ರಯತ್ನ ಮಾಡುತ್ತಾರೆ. ಈ ವಿಷಯದಲ್ಲಿ ಅವರಿಗೆ ಮುಖ್ಯ ಸಹಾಯಕರೆಂದರೆ ಅವರ ಬೀಗರಾದ ಬಿಪಿನ ಚಂದ್ರರು. ಮಕ್ಕಳಿಲ್ಲ. ಕಲಕತ್ತೆಯ ಭಾಡಿಗೆ ಮನೆಯಲ್ಲಿ ಹೆಂಡತಿ ಬೀಗರೊಡನೆ ವಾಸಿಸುತ್ತಾರೆ. ವ್ಯವಸಾಯದಲ್ಲಿ ಸಾಕಷ್ಟು ಪ್ರಗತಿಯಾದರೆ ಸಾಕು ನೌಕರಿಯನ್ನು ಬಿಟ್ಟುಬಿಡಬೇಕೆಂದು ಸಂಕಲ್ಪ ಮಾಡಿದ್ದಾರೆ. ಸಧ್ಯ ಆರು ತಿಂಗಳ ರಜೆ ಪಡೆದುಕೊಂಡು ಹೊಸ ಹುರುಪಿನಿಂದ 'ಬ್ರಹ್ಮಚಾರೀ ಎಂಡ ಬ್ರದರ – ಇನ್ – ಲಾ ' ಕಂಪನಿಯನ್ನು ಹೊರಡಿಸಿದ್ದಾರೆ.

ಶ್ಯಾಮಲಾಲರು ಧರ್ಮಭೀರು ಮನುಷ್ಯರು. ಪಂಚಾಂಗ ನೋಡದೆ ಯಾವ ಕೆಲಸವನ್ನೂ ಮಾಡುವದಿಲ್ಲ. ಅನುಕೂಲವಾದಾಗ ತಾಂತ್ರಿಕ ಸಾಧನೆಯನ್ನು ಸಹ ಮಾಡುತ್ತಾರೆ. ವ್ಯರ್ಥವಾಗಿ – ಅರ್ಥಾತ್ ಹಸಿವೆಯಿಲ್ಲದೆ–ಮಾಂಸಭೋಜನವನ್ನು ಮಾಡುವದಿಲ್ಲ; ಅಕಾರಣವಾಗಿ 'ಕಾರಣ' ಪಾನವನ್ನು ಮಾಡುವದಿಲ್ಲ. ಯಾವ ಸನ್ಯಾಸಿಗೆ ಕಿಮಿಯಾ ವಿದ್ಯೆ ಗೊತ್ತಿದೆ, ಯಾರ ಹತ್ತಿರ ವಾಮಾವರ್ತ ಶಂಖವಿದೆ ಅಥವಾ ಏಕಮುಖೀ ರುದ್ರಾಕ್ಷಿಯಿದೆ, ಯಾರು ಪಾರದ ಭಸ್ಮವನ್ನು ಮಾಡಬಲ್ಲರು ಇವೇ ಮೊದಲಾದ ವಿಷಯಗಳ ಸಂಧಾನದಲ್ಲಿ ಅವರು ತೊಡಗಿರುತ್ತಾರೆ ಸದಾ. ಕೆಲವು ತಿಂಗಳಿಂದ ಮನೆಯಲ್ಲಿ ಕಾವಿಯ ವಸ್ತ್ರಗಳನ್ನು ತೊಡುತ್ತಿದ್ದಾರೆ. ಕೆಲ ಅನುರಕ್ತ ಶಿಷ್ಯರನ್ನಾದರೂ ಕಲೆ ಹಾಕಿದ್ದಾರೆ. ಶ್ಯಾಮಲಾಲರು ಈಚೆಗೆ ತಮ್ಮನ್ನು 'ಶ್ರೀಮತ್ ಶ್ಯಾಮಾನಂದ ಬ್ರಹ್ಮಚಾರೀ ' ಎಂದು ಆಗಾಗ ಕರೆದುಕೊಳ್ಳುತ್ತಿದ್ದಾರೆ; ಹಾಗು ಇದೇ ಹೆಸರಿನಿಂದ ಎಲ್ಲ ಕಡೆಗೆ ಬೇಗನೆ ಪರಿಚಿತರಾಗಬೇಕೆಂದು ಹಾರೈಸುತ್ತಾರೆ.

ಶ್ಯಾಮಲಾಲರು ತಮ್ಮ ಆಫೀಸರೂಮಿನಲ್ಲಿ ಪ್ರವೇಶಿಸಿ ಒಂದು ನೂರುವರೆ ಕಾಲಿನ ಆರಾಮಖುರ್ಚಿಯ ಮೇಲೆ ತುಸುಹೊತ್ತು ವಿಶ್ರಮಿಸಿ ತಮ್ಮ ಆಳನ್ನು ಒದರಿದರು: “ಲಾಟೂ, ಏಲೋ ಲಾಟೂ.” ಲಾಟೂ ಇಷ್ಟು ಹೊತ್ತು ಬದಿಯ ಸಂದಿಯಲ್ಲಿ ಸ್ಟೂಲಿನ ಮೇಲೆ ಕುಳಿತುಕೊಂಡು ತೂಕಡಿಸುತ್ತಿದ್ದ. ಒಡೆಯರ ಕರೆ ಕೇಳಿ ಲಗುಬಗೆಯಿಂದ ಎದ್ದು ಬಂದ. ಶ್ಯಾಮಲಾಲರು ಆತನಿಗೆ ಹೇಳಿದರು; “ಗಂಗಾಜಲದ ಬಾಟಲಿಯನ್ನು ತೆಗೆದುಕೊಂಡು ಬಾ. ಈ ಎಲ್ಲ ಪುಸ್ತಕಗಳನ್ನಷ್ಟು ಚೆನ್ನಾಗಿ ಒರಿಸು; ಎಷ್ಟು ಧೂಳ ಕುಳಿತಿದೆ ನೋಡು.” ಲಾಟೂ ಒಂದು ತಾಮ್ರದ ಗಿಂಡಿಯನ್ನು ತಂದುಕೊಟ್ಟ, ಶ್ಯಾಮಲಾಲರು ಅದರೊಳಗಿಂದ ತುಸು ಗಂಗೋದಕವನ್ನು ತೆಗೆದುಕೊಂಡು ಮಂತ್ರೋಚ್ಚಾರಪೂರ್ವಕವಾಗಿ ಎಲ್ಲ ಕಡೆಗೆ ಸಿಂಪಡಿಸಿದರು. ಆಮೇಲೆ ಮೇಜಿನ 'ಡ್ರಾ'ದೊಳಗಿಂದ ಒಂದು ಸಿಂದೂರ ಚರ್ಚಿತ ರಬ್ಬರ್ ಸ್ಟಾಂಪ ತೆಗೆದುಕೊಂಡು ಅದರ ಸಹಾಯದಿಂದ ನೂರಾ ಎಂಟು ಸಾರೆ ದುರ್ಗಾನಾಮವನ್ನು ಬರೆದರು. ಸ್ಟಾಂಪಿನಲ್ಲಿ ಹನ್ನೆರಡು ಸಾಲು 'ಶ್ರೀ ದುರ್ಗಾ' ಎಂದು ಕೆತ್ತಿದೆ. ಆದ್ದರಿಂದ ಒಂಬತ್ತು ಸಾರೆ ಒತ್ತಿದರೆ ಸಾಕು ಕೆಲಸ ಮುಗಿಯುವದು. ಈ ಶ್ರಮಹಾರಕ ಯಂತ್ರದ ಶೋಧಕರು ಶ್ರೀಮಾನ್ ಬಿಪಿನ ಚಂದ್ರರು. ಇವರು ಈ ಯಂತ್ರಕ್ಕೆ “ದಿ ಆಟೋಮೆಟಿಕ್ ದುರ್ಗಾಗ್ರಾಫ್” ಎಂದು ಹೆಸರು ಕೊಟ್ಟಿದ್ದಾರೆ. ಇಷ್ಟರಲ್ಲಿಯೆ ಪೆಟೆಂಟ ತೆಗೆದುಕೊಳ್ಳುವವರಿದ್ದಾರೆ.

ಹೀಗೆ ನಿತ್ಯಕ್ರಿಯೆಯನ್ನು ಮುಗಿಸಿ ಶ್ಯಾಮಲಾಲರು ಪ್ರಸನ್ನಚಿತ್ತದಿಂದ ಬ್ಯಾಗಿನೊಳಗಿಂದ ಹಸಿಯಾಗಿರುವ ಪ್ರೂಫ್ ತೆಗೆದುಕೊಂಡು ಅದನ್ನು ತಿದ್ದತೊಡಗಿದರು. ಸ್ವಲ್ಪ ಹೊತ್ತಿನಲ್ಲಿಯೇ ಖಟ್ ಖಟ್ ಎಂದು ಬೂಟಿನ ಸಪ್ಪಳ ಮಾಡುತ್ತ ಅಟಲಬಾಬುಗಳು ಒಳಗೆ ಬಂದು ನುಡಿದರು: “ಏನು ಶ್ಯಾಮಬಾಬೂ, ಏನು ನಡೆದಿದೆ? ಬಂದು ಬಹಳ ಹೊತ್ತಾಯಿತೆಂದು ಕಾಣುತ್ತದೆ? ಬಹಳ ತಡವಾಯಿತು, ಕ್ಷಮಿಸಬೇಕು. ಹಾಯ್‌ಕೋರ್ಟಿನಲ್ಲಿ ಒಂದು ಮೋಶನ್ ಇತ್ತು. ಬ್ರದರ್-ಇನ್-ಲಾ ಎಲ್ಲಿದ್ದಾರೆ?”

**ಶ್ಯಾಮ:—** “ಬಿಪಿನ ಹೋಗಿದ್ದಾನೆ, ಬಾಗಬಾಜಾರದ ತೀಸಕರ

(ತೀಸಕೌಡೀ) ಬ್ಯಾನರ್ಜಿಯವರ ಕಡೆಗೆ. ಇವತ್ತು ಏನೇ ಆಗಲಿ ಅವರ ಸ್ಪಷ್ಟ ಉತ್ತರವನ್ನು ಕೇಳಿಕೊಂಡು ಬರುವನು; ಬರುವ ಹೊತ್ತೂ ಆಗಿದೆ"

ಅಟಲಬಾಬುಗಳು ಕೋಟ-ಪ್ಯಾಂಟಧಾರೀ ಸದ್ಯೋಜಾತ ಬ್ಯಾರಿಸ್ಟರ್‌ಗಳು. ತಂದೆಯ ಆಫೀಸಿನಲ್ಲಿ ಜೂನಿಯರ ಪಾರ್ಟನರರಾಗಿ ಕೆಲಸ ಮಾಡುತ್ತಿದ್ದಾರೆ. ಕೆಂಪು ಬಣ್ಣ; ಚೆಲುವರು;ಬಿಪಿನನ ಬಾಲ್ಯಸ್ನೇಹಿತರು. ವಯಸ್ಸು ಕಿರಿದಾದವರೂ ಚಾತುರಿ ಹಿರಿದು. ಕೇಳಿದರು: " ಏನು ಮುಂದುಕನು ಒಪ್ಪಿದನೆ? ಒಳ್ಳೇದು, ಆತನನ್ನು ಹಿಡಿದಿರಿ ಹೇಗೆ ?"

**ಶ್ಯಾಮು:—** ಎಲ, ತೀಸಕರಿ ಬಾಬುಗಳು ನಮ್ಮ ಶರತ್‌ನ ಅಪ್ಪರು. ಶರತ್ ಬಿಪಿನನ ಅಬಚಿಯ ಮಗ. ಶರತ್‌ನನ್ನು ಸಂಗಡ ಕರೆದುಕೊಂಡು ಹೋಗಿ ತೀಸಕರಿ ಬಾಬುಗಳಿಗೆ ಗಂಟುಬಿದ್ದೆ. ಸಹಜವಾಗಿ ಒಪ್ಪುವವನೇ ಆತ? ಬಹಳ ಬಿಗಿಯಾದ ಕೆಲಸ. ಮುಂದುಕ ಜೀನಹಂಕ. ಸಂಶಯಕ್ಕಂತೂ ಆಳತೆಯೇ ಇಲ್ಲ. ಅವನೆಂದ. " ನಾನಂತೂ ರಾಯಸಾಹೇಬ ರಿಟಾಯರ್ಡ ಡಿಪ್ಟೀ. ಸರಕಾರದಲ್ಲಿ ನನಗೆ ಮಾನಮರ್ಯಾದೆ ಅತಿಶಯ । ಕಂಪನಿಯ ಡಿರೆಕ್ಟರನಾಗಿ ಪೆನ್ಶನ್ ಕಳೆದುಕೊಳ್ಳಲಿಯಾ?" ನಾನು ಉದಾಹರಣೆ ಕೊಟ್ಟು ಕೊಟ್ಟು ಹೇಳಿದೆ, "ಎಷ್ಟೋ ದೊಡ್ಡ ದೊಡ್ಡ ರಿಟಾಯರ್ಡ ಆಫೀಸರರು ಡಿರೆಕ್ಟರಿಕೆಯನ್ನು ಮಾಡುತ್ತಾರೆ. ತಮಗೇಕೆ ಭಯ ?" ಕೊನೆಗೆ ಪ್ರತಿ ಮೀಟಿಂಗಿಗೆ ಮೂವತ್ತೆರಡು ರೂಪಾಯಿ ಫೀ ದೊರೆಯುವದೆಂಬುದನ್ನು ಕೇಳಿದನಂತರ ಬಾಯಿಗೆ ನೀರೊಡೆದವು.

**ಅಟಲ:—** ಎಷ್ಟು ರೂಪಾಯಿಗಳ ಶೆಯರ ತಕ್ಕೊಳ್ಳುತ್ತಾನಂತೆ ?

**ಶ್ಯಾಮು:—** ಆತನು ಅದರಲ್ಲಿ ಬಹಳ ಚತುರನಾಗಿದ್ದಾನೆ. ' ನಿಮ್ಮ ಬ್ರಹ್ಮಚಾರೀ ಕಂಪನಿಯು ನುಲಿಗೆ ಮಾಡುವದಿಲ್ಲವೆಂಬ ಬಗ್ಗೆ ಯಾರು ಹೊಣೆ? ನೀವಿಬ್ಬರೂ ಬೀಗಬೀಗರು ಕೂಡಿಕೊಂಡು ಮ್ಯಾನೇಜಿಂಗ ಏಜೆಂಟರಾಗಿ ಕಂಪನಿಯನ್ನು 'ಫೇಲ' ಮಾಡಿದರೆ ನನ್ನ ಹಣ ಕೊಡುವವರು ಯಾರು?' ಎಂದು ಅವನಂದ. ನಾನು ಹೇಳಿದೆ, ' ರಾಯಸಾಹೇಬ, ತಮ್ಮಂತಹ ವಿಚಕ್ಷಣರೂ ಸಾವಧಾನಿಗಳೂ ಆದ ಡಿರೆಕ್ಟರರಿರಲಾಗಿ ನುಲಿಗೆ ಮಾಡುವ ಕಾವತ್ತು ಯಾವದು ? ಲೆಖ್ಖಪತ್ರವಂತೂ ತಮ್ಮೆದುರಿಗೇ ಇರುವದು. ಫೇಲ ಆಗಗೊಡುವಿರೆಲ್ಲಿ? ದೋಷಗಳನ್ನೇ ಏಕೆ ನೋಡುವಿರಿ?

ಲಾಭದ ಕಡೆಗೆ ಅಷ್ಟು ನೋಡಿರಲ್ಲ. ಎಂತಹ ಲಾಭಕರವಾದ ವ್ಯವಸಾಯವು! ಏನಿಲ್ಲೆಂದರೂ ೫೦ ಪರ್ಸೆಂಟ ಡಿವ್ಹಿಡೆಂಟ್ ಸಿಕ್ಕರೂ ಎರಡು ವರ್ಷಗಳಲ್ಲಿಯೆ ನಿಮ್ಮ ಹಣವು ನಿಮ್ಮ ಮನೆಗೆ ಬರುವದು." ಬಹಳ ವಾದವಿವಾದದ ನಂತರ ಆತನೆಂದ. "ಒಳ್ಳೇದು ನಾನು ಶೇಯರ ತಕ್ಕೊಳ್ಳುತ್ತೇನೆ, ಆದರೆ ಬಹಳಲ್ಲ. ಡಿರೆಕ್ಟರರಾಗಲು ಎಷ್ಟು ಅವಶ್ಯವಿದೆಯೋ ಅಷ್ಟೇ. ಹೆಚ್ಚಿಗೆಕೊಡುವವನಲ್ಲ." ಈ ದಿನ ತಮ್ಮ ನಿಶ್ಚಿತ ಮತವನ್ನು ತಿಳಿಸುವೆನೆಂದು ಹೇಳಿದ್ದಾರೆ; ಅದಕ್ಕಾಗಿ ಬಿಪಿನನನ್ನೂ ಕಳಿಸಿದ್ದೇನೆ.

**ಅಟಲ:—** ಇಂತಹ ವಿಕ್ಷಿಪ್ತ ಮನುಷ್ಯನನ್ನು ನೀವು ಕೂಡಿಸಿ ಕೊಂಡಿದ್ದು ನೆಟ್ಟಗಾಗಲಿಲ್ಲ, ಶ್ಯಾಮಬಾಬೂ! ಇರಲಿ, ಮಹಾರಾಜನ ನ್ನೇಕೆ ಬಿಟ್ಟಿರಿ ?

**ಶ್ಯಾಮ:—** ಮಹಾರಾಜನನ್ನು ಹಿಡಿಯಲಿಕ್ಕೆ ದೊಡ್ಡ ಬೇಟೆಗಾರನು ಬೇಕು, ನಮ್ಮ ನಿಮ್ಮಂಥವರಿಗೆ ಸಾಧ್ಯವಿಲ್ಲ. ಇದಲ್ಲದೆ ಪಂಚಭೂತಗಳು ಕೂಡಿಕೊಂಡು ಎಲ್ಲವನ್ನೂ ಹೀರಿಕೊಂಡು ಬಿಟ್ಟಿವೆ, – ಏನೂ ಉಳಿದಿಲ್ಲ.

**ಅಟಲ:—** ಮಾರವಾಡಿಯು ಏನನ್ನುತ್ತಾನೆ ? ಅವನು ಯಾವಾಗ ಬರುವನು ?

**ಶ್ಯಾಮ:** —ಅವನಂತೂ ಬಾಯಿ ತೆರೆದುಕೊಂಡು ನಿಂತಿದ್ದಾನೆ. ತುಸು ಎಳೆ ಸಿಕ್ಕರೆ ಸಾಕು. ಇಷ್ಟರಲ್ಲಿಯೆ ಅವನು ಬರಬೇಕಾಗಿತ್ತು. ಈ ದಿನ ನಿಮಗೆ ಪ್ರಾಸ್ಪೆಕ್ಟಸ್ ಓದಿ ತೋರಿಸಿ ಮುದ್ರಿಸಲಿಕ್ಕೆ ಕೊಡಬೇಕಾಗಿದೆ. ತೀನಕರೀ ಬಾಬುಗಳಿಗೂ ಬರಲಿಕ್ಕೆ ಹೇಳಿದ್ದೆ. ಅವರಿಗೆ ಮೈಯೆಲ್ಲ ಶೂಲಿ ಯಂತೆ; ಬರಲು ಆಗುವದಿಲ್ಲವೆಂದು ತಿಳಿಸಿದ್ದಾರೆ.

" ರಾಮ ರಾಮ ಬಾಬೂಸಾಹೇಬ ! "

ಮಾರವಾಡೀ ಮಹಾಶಯರು ಬಂದರು. ಮಧ್ಯವಯಸ್ಕರು- ಕಪ್ಪು ಬಣ್ಣ. ಮೈಮೇಲೆ ಕರಿಯ ಬಣ್ಣದ ಬನಾತಿನ ಉದ್ದವಾದ ಕೋಟು, ಬಿಳಿಯ ಧೋತರ, ಕಾಲಲ್ಲಿ ವಾರ್ನಿಶ್ ಶೂ, ತಲೆಯಮೇಲೆ ಹಳದೀಬಣ್ಣದ ಮಲಮಲ್ಲಿನ ಕೈಲೆ ಸುತ್ತಿದ ಮುಂಡಾಸ, ಬೆರಳುಗಳಲ್ಲಿ ಅನೇಕ ಉಂಗುರ ಗಳು, ಕಿವಿಯಲ್ಲಿ ಹರಳಿನ ಬಾವಲಿ; ಹಣೆಯ ಮೇಲೆ ತಿಲಕ.

ಶ್ಯಾಮುಬಾಬುಗಳೆಂದರು. " ಬನ್ನಿ ಬನ್ನಿ ! ಎಲೋ ಲಾಟೂ. ಇನ್ನೊಂದು ಚೇಯರ ತೊಗೊಂಡು ಬಾ – ಕೂಡಿರಿ. ಇವರೇ ಅಟಲಬಾಬುಗಳು, ನಮ್ಮ ಸಾಲಿಸಿಟರ ದತ್ತ ಕಂಪನಿಯ ಪಾರ್ಟನರರು. ಹಾಗೂ ಇವರು, ನಮ್ಮ ಪರಮಮಿತ್ರರಾದ ಬಾಬು ಗಂಡೇರಿರಾಮ ಬಾಟ್‌ಪಾರಿಯಾ."

**ಗಂಡೇರಿ:—** ನಮಸ್ಕಾರ, ತಮ್ಮ ಹೆಸರನ್ನು ಕೇಳಿದ್ದೆವು. ಪರಿಚಯವಾಗಿ ಬಹಳ ಸಂತೋಷವಾಯಿತು.

**ಅಟಲ:—** ನಮಸ್ಕಾರ, ನಾವು ತಮ್ಮ ದಾರಿಯನ್ನೆ ಕಾಯುತ್ತ ಕುಳಿತಿದ್ದೆವು. ತಮ್ಮಂತಹ ದೊಡ್ಡ ಶೇಠರು ನಮ್ಮ ಸಹಾಯಕರಾಗಿರುವರೆಂದ ಮೇಲೆ ಕಂಪನಿಗೆ ಚಿಂತೆಯೇತರದು ?

**ಗಂಡೇರಿ:—** ಹೇ ಹೇ–ಎಲ್ಲವೂ ಭಗವಂತನ ಇಚ್ಛಾರೀ. ನಾವೊಬ್ಬರೇ ಏನು ಮಾಡಲಾದೀತು ? ಏನೂ ಇಲ್ಲ.

**ಶ್ಯಾಮು:—** ಸರಿ, ಸರಿ. ಎಲ್ಲವನ್ನೂ ಮಾಡುವವಳು ಆ ಮಾತಾ ತಾರಾ ದೀನತಾರಿಣಿಯು. ಕೇಳು ಅಟಲ, ನಮ್ಮ ಶೇಠಜಿಯವರು ಕೇವಲ ವ್ಯಾಪಾರಿಗಳೆಂದು ತಿಳಿಯಬೇಡ. ಇಂಗ್ಲಿಷು ಚೆನ್ನಾಗಿ ಬರುವದಿಲ್ಲವಾದರೂ ಇವರು ಒಳ್ಳೇ ಸುಶಿಕ್ಷಿತರಾಗಿದ್ದಾರೆ. ಶಾಸ್ತ್ರಗಳಲ್ಲಿಯೂ ಪಾಂಡಿತ್ಯವು ವಿಶೇಷವಾಗಿದೆ.

**ಅಟಲ:—** ಹೀಗೋ ! ಹಾಗಾದರೆ ತಮ್ಮಂತಹ ದೊಡ್ಡ ಮನುಷ್ಯರ ಕೂಡ ಪರಿಚಯವಾದದ್ದಕ್ಕಾಗಿ ಬಹಳ ಸಂತೋಷ.

ಇಷ್ಟರಲ್ಲಿ ಬಿಪಿನಬಾಬುಗಳೂ ಬಂದರು. ಇವರು ತುಸು ಸಾಹೇಬೀ ಶೀಲದ ಮನುಷ್ಯರು, ಒಂದು ಕಾಲದಲ್ಲಿ ವಿಲಾಯತಿಗೆ ಹೋಗಬೇಕೆಂದು ಹವಣಿಸಿದ್ದರು. ಮೈಮೇಲೆ ಕರಿಯ ಕೋಟು, ಬಿಳಿಯ ಚೊಣ್ಣ, ಕೆಂಪು ನೆಕ್‌ಟಾಯ್, ಕೈಯಲ್ಲಿ ಹಸುರು ಫೆಲ್ಟ ಹ್ಯಾಟ್. ಉಜ್ವಲ ಶ್ಯಾಮವರ್ಣ, ಬಡಕು ದೇಹ, ತುದಿ ಹಾರಿದ ಮೀಸೆಗಳು. ಶ್ಯಾಮುಬಾಬುಗಳು ಬಹು ಔತ್ಸುಕ್ಯದಿಂದ ಕೇಳಿದರು, " ಏನಾಯಿತು ನಿರ್ಣಯ ?"

**ಬಿಪಿನ:—** ಡಿರೆಕ್ಟರರಾಗಲು ಒಪ್ಪಿದ್ದಾರೆ; ಆದರೆ ಎರಡುಸಾವಿರ ರೂಪಾಯಿಗಳ ಶೇಯರ ಮಾತ್ರ ತೆಗೆದುಕೊಳ್ಳುವರಂತೆ. ನಿಮಗೆ, ಅಟಲನಿಗೆ

ಸಸಗೆ ನಾಡದು ಊಟಕ್ಕಾಗಿ ಔತಣ ಕೊಟ್ಟಿದ್ದಾರೆ. ತೆಗೆದುಕೊಳ್ಳಿ ಈ ಪತ್ರ ವನ್ನು.

**ಅಟಲ:—** ತೀನಕರಿ ಬಾಬುಗಳು ಒಮ್ಮೆಲೆ ಇಷ್ಟು ಹೇಗೆ ಉದಾರ ರಾದರು ?

**ಶ್ಯಾಮ:—** ತಿಳಿಯದು. ಬಹುಶಃ ಫೆಲೋ ಡಿರೇಕ್ಟರರನ್ನು ಒಮ್ಮೆ ಪರೀಕ್ಷಿಸಿ ನೋಡಬೇಕೆಂದಿರಬಹುದು.

**ಅಟಲ:—** ಇರಲಿ. ಇನ್ನು ಕೆಲಸಕ್ಕೆ ಆರಂಭವಾಗಲಿ. ನಾನು ಮೆಮೊರಂಡಮ್ ಮತ್ತು ಆರ್ಟಿಕಲ್‌ಗಳ ಮಸೂದೆಯನ್ನು (draft) ತಂದಿದ್ದೇನೆ. ಶ್ಯಾಮಬಾಬೂ, ಪ್ರಾಸ್ಪೆಕ್ಟಸ್ ಹೇಗೆ ಬರೆದಿರುವರೆಂಬುದನ್ನು ಓದಿ ಹಡಿರಿ.

**ಶ್ಯಾಮ:—** ಆಗಲಿ, ಎಲ್ಲರೂ ಲಕ್ಷ್ಯಗೊಟ್ಟು ಕೇಳಿರಿ, ಏನಾದರೂ ಹೆಚ್ಚುಕಡಿಮೆ ಮಾಡುವದಿದ್ದರೆ ಈಗಲೇ ಹೇಳಿರಿ. ದುಗಾರ್.... ದುಗಾರ್....

**ಜಯ ಸಿದ್ಧಿದಾತಾ ಗಣೇಶ !**

**೧೯೧೩ನೇ ಇಸವಿಯ ೭ನೇ ಕಾಯಿದೆಯ ಪ್ರಕಾರ ರಜಿಸ್ಟರ ಆದ**

# ಶ್ರೀ ಸಿದ್ಧೇಶ್ವರೀ ಲಿಮಿಟೆಡ್

ಮೂಲಧನ ! ಹತ್ತು ಲಕ್ಷ ರೂಪಾಯಿ. ೧೦ರ ಲೆಕ್ಕದಂತೆ ೧೦೦,೦೦೦ ಅಂಶಗಳಲ್ಲಿ ವಿಭಕ್ತವಾದುದು. ಅರ್ಜಿಯ ಕೂಡ ಪ್ರತಿ ಅಂಶಕ್ಕಾಗಿ ಎರಡು ರೂಪಾಯಿಗಳಂತೆ ಕಳಿಸಬೇಕು. ಉಳಿದ ಹಣವನ್ನು ಅವಶ್ಯಕತಾನುಸಾರವಾಗಿ ನಾಲ್ಕು ಕಂತುಗಳಲ್ಲಿ ನೋಟೀಸು ಮುಟ್ಟಿದ ಮೂರು ತಿಂಗಳೊಳಗಾಗಿ ಕೊಡಬೇಕು.

## ಅನುಷ್ಠಾನ-ಪತ್ರ

ಧರ್ಮವೇ ಹಿಂದೂಜನರ ಪ್ರಾಣವು. ಧರ್ಮವನ್ನು ಬದಿಗಿರಿಸಿ ಈ ಜಾತಿಯು ಯಾವ ಕಾರ್ಯವನ್ನೂ ಜರುಗಿಸುವದಿಲ್ಲ. ಅನೇಕರು ಧರ್ಮದ ಫಲವು ಪರಲೋಕದಲ್ಲಿ ದೊರೆಯುವದೆಂದು ಅನ್ನುತ್ತಾರೆ. ಆದರೆ ಇದು ಆಂಶಿಕ ಸತ್ಯ. ವಸ್ತುತಃ ಧರ್ಮವೃತ್ತಿಯ ವಿಹಿತ ಪ್ರಯೋಗದಿಂದ

ಇಹಲೌಕಿಕ ಹಾಗು ಪಾರಲೌಕಿಕ ಈ ಎರಡೂ ಬಗೆಯ ಫಲವು ದೊರೆಯುತ್ತದೆ. ಆದ್ದರಿಂದ ಚತುರ್ವರ್ಗಲಾಭದ ಉಪಾಯಸ್ವರೂಪವಾಗಿ ಈ ವಿರಾಟ್ ಉದ್ಯಮದಲ್ಲಿ ದೇಶಬಂಧುಗಳನ್ನು ಆಹ್ವಾನಿಸಲಾಗಿದೆ.

ಭಾರತವರ್ಷದ ವಿಖ್ಯಾತ ದೇವಮಂದಿರಗಳ ಆದಾಯವು ಎಷ್ಟು ವಿಪುಲವಾಗಿದೆಯೆಂಬುದರ ಕಲ್ಪನೆಯು ಜನರಿಗಿಲ್ಲ. ಬಂಗಾಲದಲ್ಲಿಯ ಒಂದೇ ಒಂದು ಮಂದಿರದ ದೈನಿಕ ಯಾತ್ರಿಕರ ಸಂಖ್ಯೆಯು ಸರಾಸರಿ ೧೫ ಸಾವಿರವಿದೆಯೆಂದು, ರಿಪೋರ್ಟಿನಿಂದ ತಿಳಿದುಬಂದಿದೆ! ಒಬ್ಬ ಯಾತ್ರಿಕನಿಂದ ನಾಲ್ಕು ಆಣೆ ಮಾತ್ರ ಮುಟ್ಟುತ್ತದೆಯೆಂಗು ತಿಳಿದರೂ ವರ್ಷಕ್ಕೆ ಹದಿಮೂರುವರೆ ಲಕ್ಷ ರೂಪಾಯಿ ಆಯಿತು. ವೆಚ್ಚವು ಎಷ್ಟೇ ಆಗಲಿ, ಯಥೇಷ್ಟ ಹಣ ಉಳಿಯುವದು. ಆದರೆ ಜನತೆಯು ಈ ಲಾಭದಿಂದ ಸರ್ವಥಾ ವಂಚಿತವಾಗಿದೆ.

ದೇಶದ ಈ ಮಹಾನ್ ಅಭಾವವನ್ನು ದೂರ ಮಾಡುವದಕ್ಕಾಗಿ ಶ್ರೀ ಸಿದ್ಧೇಶ್ವರೀ ಲಿಮಿಟೆಡ್ ಎಂಬ ಹೆಸರಿನ ಜಾಯಿಂಟ ಸ್ಟಾಕ್ ಕಂಪನಿಯು ಸ್ಥಾಪಿತವಾಗಿದೆ. ಧರ್ಮಪ್ರಾಣ ಶೇಯರಹೋಲ್ಡರರ ಹಣದಿಂದ ಒಂದು ಮಹಾನ್ ತೀರ್ಥಕ್ಷೇತ್ರದ ಪ್ರತಿಷ್ಠಾಪನೆಯನ್ನು ಮಾಡಲಾಗುವದು; ಮತ್ತು ಜಾಗೃತ ದೇವಿಯಿಂದೊಡಗೂಡಿದ ಭವ್ಯವಾದ ಮಂದಿರವನ್ನು ಕಟ್ಟಿಸಲಾಗುವದು. ಸುಯೋಗ್ಯ ಮ್ಯಾನೇಜಿಂಗ ಏಜೆಂಟರ ಕೈಯಲ್ಲಿ ಕಾರ್ಯ-ನಿರ್ವಹಣದ ಭಾರವನ್ನು ಒಪ್ಪಿಸಲಾಗಿದೆ. ಯಾವುದೇ ಪ್ರಕಾರದ ಅಪವ್ಯಯದ ಸಂಭವವಿಲ್ಲ. ಶೇಯರಹೋಲ್ಡರರಿಗೆ ಆಶಾತೀತ ದಕ್ಷಿಣೆ ಅಥವಾ ಡಿವ್ಹಿಡೆಂಡ ದೊರೆಯುವದು. ಇದರೊಡನೆಯೆ ಧರ್ಮ ಅರ್ಥ ಕಾಮ ಮೋಕ್ಷಗಳ ಲಾಭವಾಗಿ ಅವರು ಧನ್ಯರಾಗುವರು.

**ಡಿರೆಕ್ಟರರು:—** (೧) ವಿರಾಮಪ್ರಾಪ್ತ ಪ್ರವೀಣ ವಿಚಕ್ಷಣ ಡೆಪ್ಯುಟಿ ಮ್ಯಾಜಿಸ್ಟ್ರೇಟ ರಾಯಸಾಹೇಬ ಶ್ರೀಯುತ ಬಾಬು ಶೀನಕರಿ ಬ್ಯಾನರ್ಜೀ (೨) ಪ್ರಖ್ಯಾತ ವ್ಯಾಪಾರಿಗಳೂ ಕೋಟ್ಯಾಧೀಶರೂ ಆದ ಶ್ರೀಯುತ ಶೇಠ ಗಂಡೇರಿರಾಮ ಬಾಟ್‌ಪಾರಿಯಾ (೩) ಸಾಲಿಸಿಟರ್ಸ ದತ್ತ ಎಂಡ ಕಂಪನಿಯ ಪಾಲುಗಾರರಾದ ಶ್ರೀಯುತ ಬಾಬು ಅಟಲ ಬಿಹಾರೀ ದತ್ತ M. A., B. L. (೪)ವಿಖ್ಯಾತ ವೈಜ್ಞಾನಿಕರಾದ ಮಿಸ್ಟರ್ ಬಿ. ಸಿ. ಚೌಧುರೀ, B. Sc., A. S. S. (U. S. A) (೫) ಕಾಲೀ ಪದಾಶ್ರಿತ ಸಾಧಕ ಬ್ರಹ್ಮಚಾರೀ ಶ್ರೀಮತ್ ಶ್ಯಾಮಾನಂದ (ex...officio)

ಅಟಲಬಾಬುಗಳು ನಡುವೇ ಬಾಯಿಹಾಕಿ ಕೇಳಿದರು. “ಬಿಪಿನನಿಗೆ ಈ ಹೊಸ ಟಾಯಿಟಲ್ ಎಂದು ದೊರೆಯಿತು ?”

**ಶಾಮ:—** ಅದನ್ನೆಲ್ಲ ಏನು ಕೇಳುತ್ತೀರಿ ಬಿಡಿರಿ! ಐವತ್ತು ರೂಪಾಯಿ ಖರ್ಚ ಮಾಡಿ ಅಮೇರಿಕೆಯಿಂದಲೋ ಏನು ಕಾಮಸ್ಕಾಟಕಾದಿಂದಲೋ ಮೂರು ಅಕ್ಷರಗಳನ್ನು ತರಿಸಿದ್ದಾನೆ.

ಬಿಪಿನ:— ಭಲೆ! ನನ್ನ ಕ್ವಾಲಿಫಿಕೇಶನ್ ತಿಳಿಯದೆ ಅವರು ಡಿಗ್ರಿಯನ್ನು ಕಳಿಸಿರುವರೆಂದು ತಿಳಿದಿರುವಿರೇನು? ಡಿರೆಕ್ಟರರಾಗಲಿಕ್ಕೆ ಒಂದು ಪದವಿಯು ಹೆಚ್ಚಿಗೆಯಿರುವದು ನೆಟ್ಟಗಲ್ಲವೆ?

ಗಂಡೇರಿ:— ಯೋಗ್ಯ ಮಾತು. ಕೆಲಸಕ್ಕೆ ತಕ್ಕಹಾಗೆ ನೋಗು ಹಾಕಲೇಬೇಕು. ಶ್ಯಾಮಬಾಬೂ, ನೀವೂ ಇನ್ನು ಧೋತರ-ಗೀತರ ಬಿಟ್ಟು ಲಂಗೋಟಿಯನ್ನು ಹಾಕಿರಿ.

ಶ್ಯಾಮ:— ನಾನೇನು ನಾಗಾ ಸನ್ಯಾಸಿಯೆ? ನಾನು ಶಕ್ತಿಮಂತ್ರದ ಸಾಧಕ; ನನಗೆ ಬೇಕು ರಕ್ತಾಂಬರ. ಮನೆಯಲ್ಲಿಯಂತೂ ಕಾವಿಯ ವಸ್ತ್ರವನ್ನೇ ತೊಡುತ್ತೇನೆ. ಆದರೆ ಆಫೀಸಿಗೆ ಮಾತ್ರ ತೊಟ್ಟುಕೊಂಡು ಹೋಗುವದಿಲ್ಲ, ಏಕೆಂದರೆ ಎಲ್ಲರೂ ನನ್ನ ಕಡೆಗೇ ಮಿಕಿ ಮಿಕಿ ನೋಡುತ್ತಾರೆ. ಜನರ ಕಣ್ಣಿಗೆ ತುಸು ರೂಢಿಯಾಯಿತೆಂದರೆ ಸದಾ ಕಾವಿಯ ವಸ್ತ್ರಗಳನ್ನೇ ತೊಡುವೆನು. ಇರಲಿ, ಮುಂದೆ ಕೇಳಿರಿ.

" ಮೆಸರ್ಸ ಬ್ರಹ್ಮಚಾರೀ ಎಂಡ್ ಬ್ರದರ್-ಇನ್-ಲಾ ಇವರು ಈ ಕಂಪನಿಯ ಮ್ಯಾನೇಜಿಂಗ ಎಜನ್ಸಿಯನ್ನು ತೆಗೆದುಕೊಳ್ಳಲು ಒಪ್ಪಿರುವದು ಅತ್ಯಂತ ಸೌಭಾಗ್ಯದ ವಿಷಯವು. ಅವರು ಒಟ್ಟು ಲಾಭದ ಮೇಲೆ ನೂರಕ್ಕೆ ಎರಡರಂತೆ ಮಾತ್ರ ಕಮಿಶನ್ ತೆಗೆದುಕೊಳ್ಳುವರು; ಮತ್ತು ಎಲ್ಲಿಯವರೆಗೆ. ...."

ಅಟಲಬಾಬುಗಳೆಂದರು. "ಕಮಿಶನ್‌ದ ದರವನ್ನು ಇಷ್ಟೇಕೆ ಕಡಿಮೆ ಹಿಡಿದಿರಿ? ಟೆನ್ ಪರ್ಸೆಂಟ ಸಹಜವಾಗಿ ಹಿಡಿಯಬಹುದಾಗಿತ್ತು."

ಗಂಡೇರಿ:— ಏನೂ ಅವಶ್ಯವಿಲ್ಲ. ಶ್ಯಾಮಬಾಬುಗಳ ವ್ಯವಸ್ಥೆಯು ಹೇಗೂ ಸಾಗಿಕೊಂಡು ಹೋಗುವದು. ಅವರೇನು ಕಮಿಶನ್‌ದ ಮೇಲೆಯೆ ಕೈಯೂರಿಕೊಂಡು ಕುಳಿತಿಲ್ಲ.

" ಮತ್ತು ಎಲ್ಲಿಯವರೆಗೆ ಕಮಿಶನ್ ತಿಂಗಳಿಗೆ ೧೦೦೦ ರೂಪಾಯಿ ಆಗುವದಿಲ್ಲವೋ ಅಲ್ಲಿಯವರೆಗೆ ಕಡಿಮೆ ಬಿದ್ದ ರೂಪಾಯಿಗಳನ್ನು ಅಲಾವನ್ಸ ಎಂದು ತೆಗೆದುಕೊಳ್ಳುವದು."

ಗಂಡೇರಿ:— ಕೇಳಿರಿ ಅಟಲಬಾಬೂ ಕೇಳಿರಿ. ಶ್ಯಾಮಬಾಬುಗಳಿಗೆ ನೀವೇನು ಕಲಿಸುವಿರಿ?

" ಹುಗಳೀ ಜಿಲ್ಹೆಯೊಳಗಿನ ಗೋವಿಂದಪುರ ಗ್ರಾಮದಲ್ಲಿ ಶ್ರೀ ಸಿದ್ಧೇಶ್ವರೀ ದೇವಿಯು ಅನೇಕ ಶತಾಬ್ದಿಗಳಿಂದ ಪ್ರತಿಷ್ಠಿತಳಾಗಿದ್ದಾಳೆ. ದೇವಿಯ ಮಂದಿರ ಹಾಗು ಅದರ ಸುತ್ತುಮುತ್ತಲಿನ

ಆಸ್ತಿಯ ಒಡತಿಯಾದ ಶ್ರೀಮತಿ ನಿಸ್ತಾರಿಣೀದೇವಿಯು ಸ್ವಪ್ನದಲ್ಲಿ ಶ್ರೀ ಸಿದ್ಧೇಶ್ವರೀ ದೇವಿಯು ಪ್ರಕಟಳಾಗಿ, ಈ ಗೋವಿಂದಪುರ ಗ್ರಾಮದಲ್ಲಿ ಸರ್ವಪೀಠಗಳ ಸಮನ್ವಯವಾಗಿರುವದೆಂದೂ ತಾನು ತನ್ನ ಮಹಾತ್ಮ್ಯಕ್ಕೊಪ್ಪುವ ಬೃಹನ್ಮಂದಿರದಲ್ಲಿ ನೆಲಸಬೇಕೆಂದು ಬಯಸುತ್ತಿದ್ದಾಳೆಂದೂ ಅಪ್ಪಣೆ ಕೊಡಿಸಿದ್ದಾಳೆ. ಶ್ರೀಮತಿ ನಿಸ್ತಾರಿಣೀದೇವಿಯು ಅಬಲೆಯಾಗಿರುವ ಮೂಲಕ ಮತ್ತು ಈ ದೈವಾದೇಶವನ್ನು ಪಾಲಿಸಲು ಅಸಮರ್ಥಳಾಗಿರುವ ಮೂಲಕ ತನ್ನ ಎಲ್ಲ ದೇವೋತ್ತರ ಸಂಪತ್ತಿಯನ್ನು-ಮಂದಿರ, ವಿಗ್ರಹ, ಜಮೀನು ಸಹಿತ—ಈ ಲಿಮಿಟೆಡ್ ಕಂಪನಿಗೆ ಸಮರ್ಪಿಸಿದ್ದಾಳೆ.”

**ಅಟಲ:—** ಈ ನಿಸ್ತಾರಿಣೀದೇವಿಯು ಎಲ್ಲಿಂದ ಬಂದಳು ? ಎಲ್ಲ ಆಸ್ತಿಯೂ ನಿಮ್ಮದೆಂದೇ ನಾನು ತಿಳಿದಿದ್ದೆನು.

**ಶ್ಯಾಮ:—** ಅವಳು ನನ್ನ ಹೆಂಡತಿ. ಆದಿನ ಅವಳ ಹೆಸರಿನಿಂದಲೆ ಎಲ್ಲ ಕಾಗಡಪತ್ರಗಳನ್ನು ಮಾಡಿಸಿಬಿಟ್ಟಿದ್ದೇನೆ. ನಾನು ಈ ಎಲ್ಲ ವೈಷಯಿಕ ವ್ಯಾಪದಲ್ಲಿ ತೊಡಕಿಕೊಂಡು ಇರಲಾರೆ.

**ಗಂಡೇರಿ:—** ಯೋಗ್ಯ ವ್ಯವಸ್ಥೆಯನ್ನು ಮಾಡಿರುವಿರಿ. ಏನೂ ಅಡ್ಡಿಯಿಲ್ಲ ! ನಿಮಗೆ ಯಾರೂ ದೋಷಕೊಡುವಂತಿಲ್ಲ. ನಿಸ್ತಾರಿಣೀದೇವಿಯು ಗುರುತು ಯಾರಿಗಿದೆ ? ಬೆಲೆ ಎಷ್ಟು ಹಿಡಿದಿರುವಿರಿ ?

“ಇನ್ನುಮೇಲೆ ತೀರ್ಥಪ್ರತಿಷ್ಠೆ ಮಂದಿರನಿರ್ಮಾಣ ದೇವಸೇವಾದಿಗಳು ಕಂಪನಿಯಿಂದಲೇ ನಾಗಿಸಲ್ಪಡುವವು. ಹಾಗು ಇದಕ್ಕಾಗಿ ಕಂಪನಿಯು ಎಲ್ಲ ಆಸ್ತಿಯನ್ನು, ಕೇವಲ ೧೫೦೦೦ ರೂಪಾಯಿಗಳನ್ನು ಕೊಟ್ಟು, ತೆಗೆದುಕೊಳ್ಳುವ ವಚನಕೊಟ್ಟಿದೆ.”

**ಗಂಡೇರಿ:—** ಭಪ್ಪರೆ ! ಎಲ್ಲವನ್ನೂ ಪೂರೈಸಿಬಿಟ್ಟಿರಿ ಶ್ಯಾಮಬಾಬೂ ! ಅಡವಿಯೊಳಗಿನ ಹಳೆಯ ಗುಡಿ – ಅದರಲ್ಲಿ ನೂರಾರು ಇಲಿ, ಗೇಣು ಜಮೀನು – ಅದರಲ್ಲಿ ನಾಲ್ಕಾರು ಬದರಿನ ಮೆಳೆ, – ಆಯಿತು, ಇದರ ಬೆಲೆಯು ಹದಿನೈದು ಸಾವಿರವೆ ?

**ಶ್ಯಾಮ:—** ಅದೇಕೆ, ಇದರಲ್ಲಿ ಅನ್ಯಾಯವೇನಾಯಿತು? ಸ್ವಪ್ನಾದೇಶ, ಏಕಾನ್ನಪೀಠ, ಜಾಗ್ರತದೇವಿ, – ಇವೆಲ್ಲ ಸಾಮಾನ್ಯವೇನು ? ಗುಡ್ ಉಯಿಲ ಲೆಕ್ಕ ಹಿಡಿದರೆ ಹದಿನೈದು ಸಾವಿರ ರೂಪಾಯಿ ಬಹಳ ಕಡಿಮೆ.

**ಗಂಡೇರಿ:—** ಒಳ್ಳೇದು. ಹಾಗಾದರೆ ಒಬ್ಬ ಶೇಅರ ಹೋಲ್ಡರನು, 'ಸ್ವಪ್ನಗಿಪ್ನ ಎಲ್ಲವೂ ಸುಳ್ಳು, ಮೋಸಗೊಳಿಸಿ ರೂಪಾಯಿ ಎತ್ತಿ ಹಾಕಿದ್ದಾರೆ'ದು ಹಾಯಿಕೋರ್ಟಿನಲ್ಲಿ ದಾವೇ ತಂದರೆ, – ಏನು ಮಾಡುವಿರಿ ?

**ಅಟಲ:**— ಹಾಂ, ಇದು ವಿಚಾರಮಾಡತಕ್ಕ ವಿಷಯವೇನೋ ಅಹುದು. ಆದರೆ ಈ ಎಲ್ಲ ಆಧಿದೈವಿಕ ವಿಷಯಗಳು ಬಹುಶಃ ಓರಿಜಿನಲ್ ಸೈಡಿಸ ಜುರಿಸ್‌ಡಿಕ್ಶನ್‌ದಲ್ಲಿ ಬರುವದಿಲ್ಲವೆಂದು ಅನಿಸುತ್ತದೆ. ಕಾಯಿದೆಯು ಹೇಳುತ್ತದೆ – Caveat emptor, ಅರ್ಥಾತ್ ಕೊಳ್ಳುವವನೇ ಎಚ್ಚರ! ಆಸ್ತಿಯನ್ನು ಕೊಳ್ಳುವಾಗ ಏಕೆ 'ಚೌಕಶಿ' ಮಾಡಲಿಲ್ಲ? ಏನೇ ಇರಲಿ, ಒಮ್ಮೆ Expert opinion ತೆಗೆದುಕೊಳ್ಳಬೇಕಾಗಿದೆ.

" ಶೀಘ್ರದಲ್ಲಿಯೆ ಹೊಸ ದೇವಾಲಯವು ಆರಂಭವಾಗುವದು. ಅದಕ್ಕೆ ಹೊಂದಿ ಪ್ರಶಸ್ತ ನಾಟ್ಯಮಂದಿರ. ವಾದ್ಯಾಲಯ, ಭೋಗಶಾಲೆ, ಭಾಂಡಾರ ಮೊದಲಾದ ಆನುಷಂಗಿಕ ಗೃಹಾದಿಗಳೂ ಆಗುವವು. ಏನಿಲ್ಲೆಂದರೂ ಹತ್ತುಸಾವಿರ ಯಾತ್ರಿಕರಿಗೆ ಉಳಿದುಕೊಳ್ಳಲು ಯೋಗ್ಯವಾದ ಅತಿಥಿಶಾಲೆಯು ಕಟ್ಟಿಸಲ್ಪಡುವದು. ಶೇರುದಾರರು ಅಲ್ಲಿ ಭಾಡಿಗೆಯಿಲ್ಲದೆ ಇರಬಹುದು. ಮಾರ್ಕೆಟ್, ಜಾತ್ರೆ, ಥಿಯೇಟರ, ಸಿನೇಮಾ ಮೊದಲಾದ ಬಹುವಿಧ ಆಮೋದ ಪ್ರಮೋದದ ಆಯೋಜನೆಯು ಯಥೇಷ್ಟವಾಗಿ ಮಾಡಲ್ಪಡುವದು. ದೈವಾದೇಶ ಅಥವಾ ಔಷಧ ಪ್ರಾಪ್ತಿಗಾಗಿ ಯಾರಾದರೂ ಬಲಿ ಕೊಡುವದಿದ್ದರೆ ಅದಕ್ಕಾಗಿ ವೈಜ್ಞಾನಿಕ ವ್ಯವಸ್ಥೆಯನ್ನು ಮಾಡಲಾಗುವದು. ಒಟ್ಟಿನಮೇಲೆ ಹೇಳಬೇಕೆಂದರೆ ತೀರ್ಥಯಾತ್ರಿಗಳನ್ನು ಆಕರ್ಷಿಸಲು ಸರ್ವಪ್ರಕಾರದ ಉಪಾಯಗಳನ್ನು ಕೈಕೊಳ್ಳಲಾಗುವದು. ಸ್ವಯಂ ಶ್ರೀಮತ್ ಶ್ಯಾಮಾನಂದ ಬ್ರಹ್ಮಚಾರಿಯವರು ದೇವಿಯ ಸೇವಾಭಾರವನ್ನು ಹಿಸುವವರು

ದೇವಿಯ ದರ್ಶನಕ್ಕಾಗಿ ಹಾಗು ಪೂಜೆಗಾಗಿ ಯಾತ್ರಿಕರಿಂದ ದೊರೆಯುವ ದಕ್ಷಿಣೆಯಂತೂ ಸರಿಯೆ; ಇದರ ಜೊತೆಗೆ ನಾನಾ ಉಪಾಯಗಳಿಂದ ಅರ್ಥಾಗಮವಾಗುವದು. ಅಂಗಡಿ, ಸಂತೆ, ಪೇಟೆ, ಅತಿಥಿಶಾಲೆ, ಮಹಾಪ್ರಸಾದ–ವಿಕ್ರಯ ಮೊದಲಾದವುಗಳಿಂದ ಅತಿಶಯ ಪ್ರಾಪ್ತಿಯಾಗುವದು. ಇದಲ್ಲದೆ By-product recovery ಏರ್ಪಾಡನ್ನೂ ಮಾಡಲಾಗುವದು. ದೇವಿಯ ಮೇಲೆ ಏರಿಸಿದ ಹೂಗಳಿಂದ ಸುಗಂಧಿತ ತೈಲಗಳು ಮಾಡಲ್ಪಡುವವು. ಪ್ರಸಾದದ ಬಿಲ್ವಪತ್ರಗಳನ್ನೂ ತಾಯಿತದಲ್ಲಿ ತುಂಬಿ, ಚರಣಾಮೃತವನ್ನು ಬಾಟಲಿಯಲ್ಲಿ ತುಂಬಿ ಮಾರಲಾಗುವದು. ಬಲಿ ಕೊಡಲ್ಪಟ್ಟ ಕುರಿಗಳ ಚರ್ಮವನ್ನು ಹದಗೊಳಿಸಿ ಉತ್ಕೃಷ್ಟ ಕಿಡ್-ಸ್ಕಿನ್ ತಯಾರಿಸಲಾಗುವದು. ಹಾಗು ಅದನ್ನು ಹೆಚ್ಚಿನ ಬೆಲೆಗೆ ವಿಲಾಯತಿಗೆ ಕಳಿಸಲಾಗುವದು. ಎಲಬುಗಳಿಂದ ಬಿರಡೆಗಳಾಗುವವು. ಅಂತೂ ಯಾವ ಪದಾರ್ಥವೂ ನಿರರ್ಥಕವಾಗಿ ಹೋಗದು."

**ಗಂಡೇರಿ:**— ಏನು ಕುರಿ ಕೊಲ್ಲುವಿರಾ? ನಾನು ನಿಮ್ಮ ಕಂಪನಿಯನ್ನೊಲ್ಲೆ. ದೇವರಾಣೆ ನನ್ನ ಹೆಸರು ತೆಗೆದುಹಾಕಿ ಬಿಡಿರಿ.

**ಶ್ಯಾಮ:**— ನೀವಂತೂ ಸ್ವತಃ ಬಲಿ ಕೊಡುವದಿಲ್ಲವೆಂದ ಮೇಲೆ ದೋಷವೇನಿದೆ? ಇದು ಬೇಡವಾದರೆ ಕುಂಬಳಕಾಯಿಯನ್ನು ಅರ್ಪಿಸುವ ವ್ಯವಸ್ಥೆಯನ್ನು ಮಾಡಲಿಕ್ಕೆ ಬಂದೀತು.

**ಅಟಲ:**— ಕುಂಬಳಕಾಯಿಯಿಂದ ಚರ್ಮ ಹೊರತುವದಿಲ್ಲವಲ್ಲ! ಇದರಿಂದ ಉತ್ಪನ್ನವು ಕಡಿಮೆಯಾಗುವದು, ಏನಯ್ಯಾ ವೈಜ್ಞಾನಿಕ, ಕುಂಬಳಕಾಯಿಯ ಸಿಪ್ಪೆಯ ಉಪಯೋಗವನ್ನೇನಾದರೂ ಮಾಡಿಕೊಳ್ಳ ಲಿಕ್ಕೆ ಆದೀತೇನು?

**ಬಿಪಿನ:**— ಕಾಸ್ಟಿಕ್-ಫ್ಲೋಟ್ಯಾಶ್ ಹಾಕಿ ಕುದಿಸುವದರಿಂದ ಕದಾಚಿತ್ ವ್ಹೆಜೇಟೇಬಲ್ ಶೂ ಆಗಬಹುದು. ಎಕ್ಸಪೇರಿಮೆಂಟ ಮಾಡಿ ನೋಡುತ್ತೇನೆ.

**ಗಂಡೇರಿ:**— ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ. ನಾನು ಸ್ವಲ್ಪ ದಿವಸಗಳಲ್ಲಿಯೆ ನನ್ನ ಎಲ್ಲ ಶೇಯರುಗಳನ್ನು ಮಾರಿ ಬಿಡುವೆನು.

"ಲೆಕ್ಕ ಹಾಕಿ ನೋಡಲಾಗಿ ಕಂಪನಿಗೆ ವರ್ಷಕ್ಕೆ ೧೨ ಲಕ್ಷ ರೂಪಾಯಿ ಲಾಭವಾಗುವದೆಂದೂ ಅನಾಯಾಸವಾಗಿ ೧೦೦ ಪರ್ಸೆಂಟ್ ಡಿವ್ಹಿಡೆಂಡ ಕೊಡಬಹುದೆಂದೂ ಕಂಡು ಬಂದಿದೆ. ೩೦ ಸಾವಿರ ಶೇಯರುಗಳ ಅರ್ಜಿಗಳು ಬಂದ ಕೂಡಲೆ allotment ಮಾಡಲ್ಪಡುವದು. ಶೇಯರುಗಳಿಗಾಗಿ ಕೂಡಲೆ ಬರೆದುಕೊಳ್ಳಿರಿ. ತಡಮಾಡಿದರೆ ಇಂತಹ ಸುಸಂಧಿಯು ಇನ್ನೊಂದಾಗೂ ದೊರೆಯಲಿಕ್ಕಿಲ್ಲ"

**ಗಂಡೇರಿ:**—ಬರೆದುಬಿಡಿರಿ ಎರಡುವರೆ ಲಕ್ಷ ರೂಪಾಯಿಗಳ ಶೇಯರ ಮಾರಾಟವಾಗಿದೆ. ಒಂದು ಲಕ್ಷದ್ದು ನಾನು ತೆಗೆದುಕೊಳ್ಳುವೆನು. ಉಳಿದ ಒಂದುವರೆ ಲಕ್ಷ ರೂಪಾಯಿಗಳನ್ನು ಶ್ಯಾಮಬಾಬು, ಬಿಪಿನಬಾಬೂ, ಅಟಲಬಾಬೂ ಸರಿಯಾಗಿ ತೆಗೆದುಕೊಳ್ಳಲಿ, ಐವತ್ತು ಐವತ್ತು ಸಾವಿರ ರೂಪಾಯಿಗಳ ಶೇಯರು.

**ಶ್ಯಾಮ:**— ಅ–ಹಾ! ಒಳೆ ಹೇಳಿದಿರಿ. ನಾನೂ ಬಿಪಿನನೂ ಐವತ್ತು ಐವತ್ತು ಸಾವಿರ ರೂಪಾಯಿ ಎಲ್ಲಿಂದ ತರಬೇಕು? ನೀವು ಸಾವಕಾರರು, ನಿಮ್ಮ ಮಾತು ಬೇರೆ.

**ಗಂಡೇರಿ:**— ನಾನು ಇದರಲ್ಲಿ ರೂಪಾಯಿ ಹಾಕಿ ಒದ್ದಾಡಬೇಕು. ಹಾಗು ನೀವು ಮೋಜು ಮಾಡುತ್ತ ಕೂಡಬೇಕು. ಹೀಗೆ ಮಾಡಲು ನಾನೇನು ಮೂರ್ಖನೆಂದು ತಿಳಿದಿರುವಿರೋ? ಆದಾಗದು. ಈ ಹೊಣೆಯನ್ನೂ ಎಲ್ಲರೂ ಕೂಡಿಯೆ ಹೊರಬೇಕು. ಶ್ಯಾಮಬಾಬೂ, ನನ್ನ ಉದ್ದೇಶವು ತಿಳಿಯಲಿಲ್ಲವೇನು? ಯಾರೂ ಹಣ ಕೊಡಬೇಕಾಗಿಲ್ಲ. ಎಲ್ಲವೂ ಹವಾಲೀ ಜಮಾಖರ್ಚು ಆಗಿ ಉಳಿಯುವದು. ಮ್ಯಾನೇಜಿಂಗ ಏಜೆಂಟನು ಧನಕೋ ಆಗುವನು.

**ಅಟೆಲ:—** ತಿಳಿಯಿತೇ ಶ್ಯಾಮಬಾಬೂ? ನಾವೆಲ್ಲರೂ ಮ್ಯಾನೇಜಿಂಗ ಏಜೆಂಟರ ಕಡೆಯಿಂದ ಸಾಲ ತೆಗೆದು ನಮ್ಮ ನಮ್ಮ ಶೇಯರಿನ ಹಣವನ್ನು ಕಂಪನಿಗೆ ಕೊಟ್ಟಂತೆ; ಮತ್ತು ಕಂಪನಿಯು ಈ ಹಣವನ್ನು ಮ್ಯಾನೇಜಿಂಗ ಏಜೆಂಟರ ಕಡೆಗೆ ಅಮಾನತ ಇಟ್ಟಂತೆ. ಕೈಯಿಂದ ಯಾರೂ ಒಂದು ಪೈ ಸಹ ಕೊಡುವ ಅವಶ್ಯವಿಲ್ಲ; ರೂಪಾಯಿಗಳ ಜಮಾ-ಖರ್ಚ ಮಾತ್ರ ಖಾತೆಯಲ್ಲಿ ಉಳಿಯುವದು.

**ಶ್ಯಾಮ:—** ಅಂತೂ ಒಟ್ಟಿನ ಮೇಲೆ ಬೀಳುವದು ಯಾರ ತಲೆಯ ಮೇಲೆ? ಅಕಸ್ಮಾತ್ ಕಂಪನಿಯು ಫೇಲ ಆದರೆ ಕೂತಿಕು ಹೊಡತ ಶ್ಯಾಮಾನಂದನಿಗೆ! ಉಳಿದ ಕಾಲ್ (call) ಗಳ ರೂಪಾಯಿಗಳನ್ನು ಎಲ್ಲಿಂದ ಕೊಡಲಿ?

**ಗಂಡೇರಿ:—** ಹೆದರುವರೇಕೆ? ಈಗಂತೂ ಪ್ರತಿ ಶೇಯರಿಗೆ ಎರಡು ರೂಪಾಯಿಗಳಂತೆ ಕೊಡಬೇಕಾಗುವದಷ್ಟೆ. ಎರಡುವರೆ ಲಕ್ಷದ ಶೇಯರಿಗಾಗಿ ಐವತ್ತು ಸಾವಿರ ರೂಪಾಯಿ ಮಾತ್ರ ಕೊಡಬೇಕಾಗುವದು. ಪ್ರೀಮಿಯಮ್‌ದಲ್ಲಿ ಎಲ್ಲವನ್ನೂ ಮಾರಿಬಿಡೋಣ - ಅನುಕೂಲವಾದರೆ ಇನ್ನೂ ಕೆಲವು ಶೇಯರುಗಳನ್ನು ಹಿಡಿದು ಇಡೋಣವಂತೆ. ಬಹಳ ಲಾಭವಾಗುವದು. ಚಿಮರಿಮಲ್ಲ ಬ್ರೋಕರನ ಕೂಡ ಮಾತಾಡಿ ಎಲ್ಲ ವ್ಯವಸ್ಥೆಯನ್ನು ಮಾಡಿಟ್ಟಿದ್ದೇನೆ. ನಾಲ್ಕಾರು ಸಾರೆ ನಾವು ನಮ್ಮ ನಮ್ಮೊಳಗೆಯೆ ಕೊಡತೊಗೊಳ್ಳುವದನ್ನು ಮಾಡುವಾ. ಅದಲುಬದಲು ಮಾಡುವಾ, ಅಂದರೆ ದರವು ತಾನಾಗಿ ಏರಿ ಬಿಡುವದು. ಆಮೇಲೆ ಎಲ್ಲರೂ ಶೇಯರ ಕೊಳ್ಳಲಿಕ್ಕೆ ಮುಗಿಬೀಳುವರು; ದರದ ಬಗ್ಗೆ ಯಾರೂ ವಿಚಾರ ಮಾಡುವದಿಲ್ಲ. ಕಬೀರಜೀಯವರ ವಚನವನ್ನು ಕೇಳಿರಿ....

(ಮಾರವಾಡೀ ಹಿಂದಿಯಲ್ಲಿ)

**ಏಸೀ ಗತ ಸಿನ್ಸಾರಮೆ ಜ್ಯೂ ಗಾಡರಕಾ ಠಾಟ ।**
**ಏಕ ಪಢಾ ಜಬ ಗಾರಮೆ, ಸಬೇ ಜಾತ ತೇಹೀ ಬಾಟ ॥**

ಇದರ ಅರ್ಥವೇನಂದರೆ, ಸಂಸಾರದಲ್ಲಿ ಎಲ್ಲ ಜನರು ಕುರಿಯ ಹಿಂಡಿನಂತೆ ಇದ್ದಾರೆ. ಒಂದು ಕುರಿಯು ತೆಗ್ಗಿನಲ್ಲಿ ಬಿದ್ದಿತೆಂದರೆ ತೀರಿತು, ಎಲ್ಲವೂ ಹೋಗಿ ಅದರಲ್ಲಿಯೆ ಬೀಳುವವು.

ಶ್ಯಾಮಬಾಬುಗಳು ನಿಟ್ಟುಸಿರುಬಿಟ್ಟು ನುಡಿದರು. " ತಾರಾ

ಬ್ರಹ್ಮಮಯೀ, ನಿನಗೇ ಗೊತ್ತು. ನಾನಂತೂ ನಿಮಿತ್ತ ಮಾತ್ರ. ನಿನ್ನ ಕಾರ್ಯವನ್ನು ನೀನೇ ಪಾರುಗಾಣಿಸು ತಾಯೀ! ಈ ಕ್ಷುದ್ರನನ್ನು ವ್ಯರ್ಥ ಕೊಲ್ಲಬೇಡ.



'ಏಷೀ ಗತ ಸಿನ್ನಾರಮೆ...'

**ಗಂಡೇರಿ:**— ಶ್ಯಾಮಬಾಬೂ, ಕಂಪನಿಯವರು ಗುಡಿ-ಪಡಿ ಏನು ಕಟ್ಟಿಸುವದಿದೆಯೋ ಕಟ್ಟಿಸಿರಿ. ಆದರ ಜೊತೆಗೆ 'ಘಾಯಿ'ಯ ವ್ಯಾಪಾರವನ್ನಾದರೂ ಸುರುವು ಮಾಡಿರಿ. ರೂಪಾಯಿಗೆ ರೂಪಾಯಿ ಲಾಭವಾಗುವದು.

**ಶ್ಯಾಮ:**— 'ಘಾಯಿ' ಎಂದರೇನು ?

**ಗಂಡೇರಿ:**— 'ಘಾಯಿ' ಎಂದರೆ ಗೊತ್ತಿಲ್ಲವೆ ? 'ಘಿ' ಎಂದರೆ ಶುದ್ಧವಾದ ತುಪ್ಪ,- ಎಮ್ಮೆ ಆಕಳು ಕುರಿಗಳ ಹಾಲಿನಿಂದಾಗುವದು. ಹಾಗು 'ನಕಲೀ' ತುಪ್ಪಕ್ಕೆ 'ಘಾಯಿ' ಎನ್ನುತ್ತಾರೆ. ಚರಬಿ, ಶೇಂಗಾದೆಣ್ಣೆ ಮೊದಲಾದವುಗಳನ್ನು ಕೂಡಿಸಿ ತಯಾರಿಸುತ್ತಾರೆ. ಹೋದವರ್ಷ ನಾನು 'ಘಾಯಿ'ಯ ವ್ಯಾಪಾರದಲ್ಲಿ ಇಪ್ಪತ್ತೈದು ಸಾವಿರ ರೂಪಾಯಿ ಹಾಕಿದ್ದೆ. ಇಪ್ಪತ್ತು ನಾಲ್ಕುವರೆ ಸಾವಿರ ರೂಪಾಯಿ ಲಾಭವಾಯಿತು.

**ಅಟೆಲ**:— ಅಬ್ಬಾ! ಹಾಗಾದರೆ ಸಾವಿರಗಟ್ಲೆ ಹಾವುಗಳನ್ನು ಕೊಂದಿರಬಹುದಲ್ಲ?

**ಗಂಡೇರಿ**:— ಎಳ್ರೀ, ಹಾವು ಎಲ್ಲಿಂದ ಸಿಗಬೇಕು? ಅದೆಲ್ಲ ಸುಳ್ಳು ಮಾತು.

**ಅಟೆಲ**:— ಒಳ್ಳೇದು ಶೇಠಜಿ, ನೀವಂತೂ ಶಾಖಾಹಾರಿಗಳು. ತಿಲಕ ವನ್ನು ಹಚ್ಚುತ್ತೀರಿ, ಭಜನೆ ಪೂಜೆಗಳನ್ನಾದರೂ ಮಾಡುತ್ತೀರಿ.

**ಗಂಡೇರಿ**:— ಇವನ್ನೆಲ್ಲ ಮಾಡಲಿಕ್ಕೇ ಬೇಕು. ಹಿಂದೂಗಳ ಮನೆ ಯಲ್ಲಿ ಹುಟ್ಟಿದ್ದೇನೆ. ಅದೂ ಉಚ್ಚ ಕುಲದಲ್ಲಿ. ಇವೆಲ್ಲ ಬೇಡಿದರೆ ಸಿಗುವವಲ್ಲ, ತಿಳಿಯಿತೆ! ನಾನು ದಿನಾಲು ಗೀತಾ ಹಾಗು ರಾಮಾಯಣದ ಪಾರಾಯಣವನ್ನು ಮಾಡುತ್ತೇನೆ.

**ಅಟೆಲ**:— ಹಾಗಾದರೆ ಇಂತಹ ಪಾಪದ ವ್ಯವಸಾಯವನ್ನೇಕೆ ಮಾಡುವಿರಿ?

**ಗಂಡೇರಿ**:— ಪಾಪವೆ! ನನಗೇಕೆ ಪಾಪ ಬರುವದು? ಎಲ್ಲ ಕೆಲಸ ವನ್ನೂ ಕಾಸಿಮ ಅಲಿಯು ಮಾಡುತ್ತಾನೆ; ನಾನಿರುವದು ಕಲಕತ್ತೆಯಲ್ಲಿ, 'ಘಾಯಿ' ಆಗುವದು ಹಾಥರಸದಲ್ಲಿ. ನಾನೇನು ಕಣ್ಣಿನಿಂದ ನೋಡುವದಿಲ್ಲ, ಮೂಗಿನಿಂದ ಮೂಸಿ ನೋಡುವದಿಲ್ಲ. ನಾವು ಸಾವುಕಾರರು, ರೂಪಾಯಿ ಕೊಟ್ಟರೆ ಆಯಿತು ನಮ್ಮ ಕೆಲಸ. ಬಡ್ಡಿಯನ್ನು ತೆಗೆದುಕೊಳ್ಳುತ್ತೇನೆ; ಲಾಭದ ಅರ್ಧ ಪಾಲನ್ನಾದರೂ ತೆಗೆದುಕೊಳ್ಳುತ್ತೇನೆ. ನಾನೊಂದು ವೇಳೆ ರೂಪಾಯಿ ಕೊಡದಿದ್ದರೆ ಕಾಸಿಮ ಅಲಿಯು ಮತ್ತೊಬ್ಬ ಸಾವುಕಾರನ ಕಡೆಯಿಂದ ತೆಗೆದುಕೊಳ್ಳುವನು. ಪಾಪ ಬರುವದಾದರೆ ಆ ಕಳ್ಳ ಕಾಸಿಮ ಅಲಿಗೆ ಬರುವದು. ನಮಗೇನು? ಇಷ್ಟೂ ಮಾರಿ ಇದರಲ್ಲಿ ದೋಷ ತಟ್ಟು ತ್ತಿದ್ದರೆ ಪುಣ್ಯವನ್ನಾದರೂ ನಾನು ಬಹಳ ಮಾಡಿರುವೆನು. ಏಕಾದಶೀ ಶಿವ-ರಾತ್ರಿ ರಾಮನವಮಿಗಳಲ್ಲಿ ಉಪವಾಸ, ದಕ್ಷಿಣೆ ದಾನ ಎಲ್ಲವನ್ನೂ ಮಾಡು ತ್ತೇನೆ. ಎಂಟೆಂಟು ಧರ್ಮಶಾಲೆಗಳನ್ನು ಕಟ್ಟಿಸಿದ್ದೇನೆ; ಲಿಲುಆದಲ್ಲಿ, ಬಾಲೀಯಲ್ಲಿ, ಶೇವರಾಫುಲಿಯಲ್ಲಿ....

**ಅಟೆಲ**:— ಲಿಲುಆದ ಧರ್ಮಶಾಲೆಯನ್ನು ಅಶರ್ಫೀಲಾಲ ಘುನ್ ಘುನ್‌ವಾಲಾನು ಕಟ್ಟಿಸಿರುವನಲ್ಲವೆ?....

**ಗಂಡೇರಿ:—** ಕಟ್ಟಿಸಿದ್ದರೆ ಏನಾಯಿತು ? ಹೀಗಾದರೆ ಎಲ್ಲವನ್ನೂ ಅವನೇ ಕಟ್ಟಿಸಿದ್ದಾನೆ. ಆದರೆ ಕೆಲಸವನ್ನು ಯಾರು ನೋಡಿಕೊಳ್ಳುತ್ತಿದ್ದರು ? ಗುತ್ತಿಗೆಗಾರರನ್ನು ಯಾರು ತಂದರು ? ಸಾಮಾನುಗಳನ್ನು ಯಾರು ತಂದು ಕೊಟ್ಟರು ? – ಎಲ್ಲವನ್ನೂ ನಾನು ಅಶರ್ಫಿಯು– ನಮ್ಮ ಕಕ್ಕನ ಮಗ– ನಾನು ಹೇಳಿದೆನೆಂದಲ್ಲವೆ ಅವನು ಗಂಟು ಖರ್ಚುಮಾಡಿದ್ದು !

**ಅಟಲ:—** ಸರಿ ಸರಿ ! ಗಂಟು ಹಾಕಿದವನು ಅಶರ್ಫಿಲಾಲನು. ಪುಣ್ಯ ಬಂದದ್ದು ಗಂಡೇರಿಯುವರಿಗೆ !

**ಗಂಡೇರಿ:—** ಅದೇಕೆ ಬರಬಾರದು ? ಪ್ರತಿಯೊಂದು ಕಡೆಗೆ ಎರಡೆರಡು ಲಕ್ಷರೂಪಾಯಿ ಖರ್ಚುಮಾಡಿತು. ಕೂಡಿಸಿರಿ ಎಷ್ಟು ಆಯಿತು ? ಅದರಮೇಲೆ ಏನಿಲ್ಲೆಂದರೂ ನೂರಕ್ಕೆ ಐದು ರೂಪಾಯಿ ದಲಾಲಿ ಹಿಡಿಯಿರಿ; ಅಂದರೂ ಎಷ್ಟು ಆಯಿತು ! ನಾನು ಒಂದು ಪೈ ಸಹ ತೆಗೆದುಕೊಳ್ಳಲಿಲ್ಲ; ಎಲ್ಲವನ್ನೂ ಬಿಟ್ಟುಬಿಟ್ಟೆ. ಅಶರ್ಫೀಲಾಲನ ಪುಣ್ಯವು ಹದಿನಾರು ಲಕ್ಷದ್ದಾದರೆ ನನ್ನದು ಎಂಭತ್ತು ಸಾವಿರದ್ದು ಆಗಬೇಕೋ ಇಲ್ಲವೋ ?

**ಅಟಲ:—** ಚಮತ್ಕಾರಿಕ ವ್ಯವಸ್ಥೆಯೆ ಸರಿ. ಪುಣ್ಯದಲ್ಲಿಯೂ ಕೂಡ ದಲಾಲಿಯೆ ! ನಮ್ಮ ಶ್ಯಾಮಬಾಬೂ ಹಾಗು ಗಂಡೇರಿ ಶೇಠರ ಜೋಡಿಯೆಂದರೆ ಬಂಗಾರಕ್ಕೆ ಕುಂದಣವಿಟ್ಟಂತಾಗಿದೆ.

**ಗಂಡೇರಿ:—** ಅಟಲಬಾಬೂ, ನೀವು ಮೂರುನಾಲ್ಕು ಇಂಗ್ರೇಜಿ ಪುಸ್ತಕ ಓದಿ ನಮಗೆ ಧರ್ಮವನ್ನು ಕಲಿಸುವಿರಾ ? ನಿಮ್ಮ ಮಂದಿಗೆ ಧರ್ಮ ಗೊತ್ತಿಲ್ಲ. ಅವರು ಮಾಡುವದು ಮೂವತ್ತು ರೂಪಾಯಿ ನೌಕರಿ, ಕೊಡುವದು ಐದು ಬಿಲ್ಲಿಯ ನೈವೇದ್ಯ, ನಮ್ಮ ಜಾತಿಯು ಗಳಿಸುವದೂ ಲೆಕ್ಕದಂತೆ, ಪುಣ್ಯ ಮಾಡುವದೂ ಲೆಕ್ಕದಂತೆ. ನಿಮ್ಮ ರವೀಂದ್ರನಾಥರೇ ಏನಂದಿದ್ದಾರೆ.

( ಮಾರವಾಡೀ ಬಂಗಾಲಿ )*

'ಬೈರಾಗ ಸಾಧನ ಮುಕ್ತಿ ಸೋ ಹಮಾರ ನಹಿ'

ನಾನೀಗ ಹೊರಟೆ, ರೇಸಿಗೆ. ಕೌಂಟೇ ಗೇರಿಲ್ ಕುದುರೆಯ ಮೇಲೆ ಇವತ್ತು ಎರಡು ಮೂರು ನೂರು ರೂಪಾಯಿ ಹಚ್ಚುತ್ತೇನೆ.

---

* ವೈರಾಗ್ಯಸಾಧನದಿಂದ ದೊರೆಯುವ ಮುಕ್ತಿ ನನಗೆ ಬೇಕಾಗಿಲ್ಲ.

**ಅಟಲ:**— ನಾನಾದರೂ ಇನ್ನು ಹೊರಡುತ್ತೇನೆ ಶ್ಯಾಮಬಾಬೂ. ಆರ್ಟಿಕಲ್‌ದ ಮಸೂದೆಯನ್ನು ಇಟ್ಟು ಹೋಗುತ್ತೇನೆ. ನೋಡಿ ಇಡಿರಿ. ಪ್ರಾಸ್ಪೆಕ್ಟಸ್ ಅಂತೂ ದಿವ್ಯವಾಗಿದೆ. ತುಸು ಹೆಚ್ಚು ಕಡಿಮೆ ಮಾಡುವದನ್ನು ಕಡೆಗೆ ಮಾಡಿ ಕಳಿಸುವೆನು. ನಾಡದು ಮತ್ತೆ ಬರುವೆನು. ನಮಸ್ಕಾರ.

* * * * *

ಬಾಗಬಾಜಾರದಲ್ಲಿರುವ ಒಂದು ಓಣಿಯಲ್ಲಿ ತೀನಕರಿ ಬಾಬುಗಳ ಮನೆಯಿದೆ. ಪಡಸಾಲೆಯಲ್ಲಿ ಮನೆಯ ಯಜಮಾನರೂ ನಿಮಂತ್ರಿತ ಅತಿಥಿಗಳೂ ಕೂಡಿಕೊಂಡು ಹರಟೆ ಹೊಡೆಯುತ್ತಿದ್ದಾರೆ; ಒಳಗಿನಿಂದ ಊಟದ ಕರೆ ಯಾವಾಗ ಬರುವದೆಂಬುದರ ಪ್ರತೀಕ್ಷೆಯನ್ನೇ ಮಾಡುತ್ತಿದ್ದಾರೆ. ಹೊತ್ತೇನೋ ಬಹಳವಾಗಿದೆ. ಆದರೆ ಯಾರಿಗೂ ಅವಸರವಿಲ್ಲ. ಇಂದು ರವಿವಾರ.

ತೀನಕರಿ ಬಾಬುಗಳ ವಯಸ್ಸು ಸುಮಾರು ಅರವತ್ತು ವರ್ಷ. ದೇಹ ಕ್ಷೀಣ. ಗಡ್ಡ ಬೋಳಿಸಿದ್ದಾರೆ. ಜೀರ್ಣ ಮೀಸೆಗಳಿಗೆ ತಂಬಾಕದ ಹೊಗೆಯಿಂದ ನಾಸೀಪುಡಿ ಬಣ್ಣ ಏರಿದೆ. ಮಾತಾಡುವಾಗ ಅವು ಜೊಂಡಿಂಗದ ಮೀಸೆಗಳಂತೆ ಅಲುಗಾಡುತ್ತವೆ. ದೈವದ ಮೇಲೆ ಇವರಿಗೆ ವಿಶೇಷ ವಿಶ್ವಾಸವಿಲ್ಲ; ಶ್ಯಾಮಲಾಲರ ಪ್ರಾಮಾಣಿಕತೆಯ ಬಗ್ಗೆ ಇನ್ನೂ ಸಂದೇಹವಿದೆ. ಕೇವಲ ಲಾಭದ ಆಶೆಯಿಂದ ಕಂಪನಿಯಲ್ಲಿ ಪಾಲುಗಾರರಾಗಿದ್ದಾರೆ. ಆದರೆ ಇಂದು ಕಾಲೀಘಾಟದಿಂದ ಇದೇ ಸ್ನಾನಮಾಡಿಬಂದ ಶ್ಯಾಮಬಾಬುಗಳ ಅಭಿನವ ಮೂರ್ತಿಯನ್ನು ನೋಡಿ ತುಸು ಆಕರ್ಷಿತರಾಗಿದ್ದಾರೆ. ಶ್ಯಾಮಬಾಬುಗಳು ಇಂದು ರಕ್ತವರ್ಣದ ವಸ್ತ್ರಗಳನ್ನು ಧರಿಸಿ, ಕಾವಿಯ ಬಣ್ಣದ ಶಲ್ಲೆಯನ್ನು ಹೊದೆದುಕೊಂಡು, ಕಾಲಲ್ಲಿ ವ್ಯಾಘ್ರಚರ್ಮದ ಮೊಚ್ಚೆಯನ್ನು ಮೆಟ್ಟಿಕೊಂಡು ಸಜ್ಜಾಗಿದ್ದಾರೆ. ತಲೆಯ ಮತ್ತು ಗಡ್ಡದ ಕೂದಲುಗಳಿಗೆ ಸವುಳುಕಾರವನ್ನು ತೊಡೆದಿದ್ದು ಅವು ಹರವಿವೆ. ಹಣೆಯಮೇಲೆ ಸಿಂದೂರದ ವಿಶಾಲವಾದ ತಿಲಕವು ಶೋಭಿಸುತ್ತಿದೆ.

ತೀನಕರಿ ಬಾಬುಗಳು ತಂಬಾಕ ಸೇದುತ್ತ ಹೇಳುತ್ತಿದ್ದರು: ''ನೋಡಿರಿ, ಸ್ವಾಮೀಜಿ, ಲೆಕ್ಕವೇ ಉದ್ಯಮದ ಮೂಲ. ಡೆಬಿಟ್ - ಕ್ರೆಡಿಟ್ ಸರಿಯಾಗಿದ್ದು ಬ್ಯಾಲನ್ಸಿನ ಮೇಳವಿದ್ದರೆ ತೀರಿತು, ಆ ಬಿಝಿನೆಸ್ಸಿನಲ್ಲಿ ಏನೂ ಭಯವಿಲ್ಲ.''

ಶ್ಯಾಮ:— ತಾವು ಹೇಳುವದು ಅಕ್ಷರಶಃ ನಿಜವಾಗಿದೆ. ಅದಕ್ಕಾಗಿಯೆ ನೀವು ಬೇಕೆಂದು ನಾವನ್ನುವುದು. ಆಗಾಗ ಬಂದು ತಮಗೆ ತುಸು ತೊಂದರೆ ಕೊಡುವೆವು; ಲೆಕ್ಕದ ವಿಷಯವಾಗಿ ತಮ್ಮ ಆಲೋಚನೆಯನ್ನು ಕೇಳುವೆವು.

ತೀನಕರಿ:— ಛೇ. ಇದರಲ್ಲಿ ತೊಂದರೆಯ ಮಾತು ಎಲ್ಲಿಯದರೀ ! ನಾನು ನಿಮ್ಮ ಎಲ್ಲ ಅಕೌಂಟ್ಸ್ ಸರಿಪಡಿಸಿಕೊಡುವೆನು. 'ಓವರಟೈಂಗ ಮಾತ್ರ ಬೇಗಬೇಗ ಆಗಲಿ. ಡಿರೆಕ್ಟರರ ಫೀ ಬಗ್ಗೆ ತುಸು ಖರ್ಚು ಹೆಚ್ಚಾಗಬಹುದು. ಆದರೆ ಇದರಿಂದ ಬಹಳ ಲಾಭವಿದೆ. ನೋಡಿರಿ, – ಅಡಿಟರ–ಗಿಡಿಟರ ನನಗೆ ಗೊತ್ತಿಲ್ಲ. ಎಲ, ತಮ್ಮ ಜಮಾಖರ್ಚು ತಮಗೇ ತಿಳಿಯುವದಿಲ್ಲವೆಂದಮೇಲೆ ಒಬ್ಬ ಹೊರಗಿನ ಹುಡುಗ ಬಂದು ಏನು ತಿಳಿಸಿಯಾನು ? ಈಗಿನ ಕಾಲದಲ್ಲಿ ಅದೊಂದು ಹೊಸ 'ಬುಕ್ ಕೀಪಂಗ' ಬಳಕೆಯಲ್ಲಿ ಬಂದಿದೆ. ಅದೇನು ಗೊತ್ತಿದೆಯೆ ? ಅದೊಂದು ಕಣ್ ಕಟ್ಟಿನ ಆಟ. ಯಾರಿಗೂ ತಿಳಿಯಬಾರದೆಂಬುದೇ ಅವರ ಉದ್ದೇಶ. ನನಗಂತೂ ಇಷ್ಟು ಗೊತ್ತು – ಇದ್ದುದೂ ಅಷ್ಟೆ – ದಿನಾಲು ಎಷ್ಟು ರೂಪಾಯಿ ಬಂದವು, ಎಷ್ಟು ಹೋದವು, ಎಷ್ಟು ಉಳಿದವು. ನಾನು ಅಮರಾಗಾಥಿಯ ಸಬ್‌ಡಿವ್ಹಿಜನ್‌ದ ಟ್ರೆಝುರಿಯ ಚಾರ್ಜಿನಲ್ಲಿದ್ದಾಗ, ಕಾಲೇಜಿನಿಂದ ಪಾಸಾದ ಬೋಳುಮೀಸೆಯ ಒಬ್ಬ ಹೊಸ ಡಿಪ್ಟೀ ಬಂದ, ನನ್ನ ಕಡೆಗೆ ಕೆಲಸ ಕಲಿಯಲಿಕ್ಕೆ. ಹುಡುಗನಂತಿದ್ದ. ಏನೂ ತಿಳಿಯುತ್ತಿದ್ದಿಲ್ಲ. ಆದರೆ ಅಹಂಕಾರದಿಂದ ಸೆಟೆದುಕೊಂಡು ನಡೆಯುತ್ತಿದ್ದ. ನೋಡಿರಲ್ಲ ಅವನ ಸೊಕ್ಕು ಎಷ್ಟಿದ್ದೀತು, ನನ್ನ ಕೆಲಸದಲ್ಲಿಯೆ ತಪ್ಪು ತೆಗೆಯಬೇಕೆ ! ಕೊನೆಗೆ ಕೋಲ್ಡಹ್ಯಾಮ್ ಸಾಹೇಬರಿಗೆ ಬರೆಯಲೇಬೇಕಾಯಿತು – "ಹುಜೂರ, ತಾವು ಬಾದಶಹನ ಜಾತಿಯವರು. ತಾವು ನಾಲ್ಕೇಟು ಹೊಡೆದರೂ ಸಹನವಾಗುವದು; ಆದರೆ ಈ ದೇಶೀ ಕತ್ತೆಯ ಒದಿಕೆಯನ್ನು ಸಹನಮಾಡುವದು ಮಾತ್ರ ಸಾಧ್ಯವಿಲ್ಲ." ಆಗ ಸಾಹೇಬರು ಸ್ವತಃ ಬಂದರು. ಎಲ್ಲ ವಿಷಯವನ್ನು ಪರಾಮರ್ಶಿಸಿ ಆ ಹುಡುಗನನ್ನು ಕರೆದು ಮರೆಯಲ್ಲಿ ಒಳಿತಾಗಿ ಛೀ ಹಾಕಿದರು. ಆಮೇಲೆ ನನ್ನ ಬೆನ್ನು ಚಪ್ಪರಿಸಿ ನಕ್ಕು ಹೇಳಿದರು: 'ವೆಲ್ ತೀನಕರಿ ಬಾಬೂ, ನೀವಂತೂ ನಮ್ಮ ಹಳೆಯ ಸೀನಿಯರ ಆಫೀಸರರು. ಒಬ್ಬ ಯಂಗ ಚಾಪ್ ನಿಮ್ಮ ಯೋಗ್ಯತೆಯನ್ನು

ಏನು ಬಲ್ಲನು ? ' ಆನಂತರ ನನ್ನನ್ನು ನವಗಾಂವದ ಎಕ್ಸಾಯಿಜ ಡಿಪಾರ್ಟ್‌ಮೆಂಟಿಗೆ ವರ್ಗಮಾಡಿದರು. ಸರಿ, ಆ ವಿಷಯ ಬೇರೆಯಾಯಿತು. ಕೇಳಿರಿ, ಅಂಥಿಂಥವನಲ್ಲ ನಾನು. ನಾನು ಮಹಾ ನಿಷ್ಠುರ ಮನುಷ್ಯ. ' ಜಬರ್ದಸ್ತ ಅಮಲದಾರ'ನೆಂದು ನನ್ನ ಖ್ಯಾತಿಯಿತ್ತು. ಮಂದಿರ-ಗಿಂದಿರ ನನಗೆ ಗೊತ್ತಿಲ್ಲ; ಆದರೆ ನನಗೆ ತಿಳಿಯದಂತೆ ಒಂದು ಪೈಯನ್ನಾದರೂ ಯಾರರ ನೆಗವಿ ಹಾಕಿ ಯಾರೇನು ! ರಕ್ತವನ್ನು ನೀರು ಮಾಡಿ ಗಳಿಸಿದ ಹಣವನ್ನು ನಿಮ್ಮ ಕೈಯಲ್ಲಿ ಒಪ್ಪಿಸುತ್ತಿದ್ದೇನೆ, ನೋಡಿರಿ ಎಲ್ಲಿಯಾದರೂ....

**ಶ್ಯಾಮ:—** ರಾಯಸಾಹೇಬ, ತಾವೂ ಚೇಷ್ಟೆ ಮಾಡುತ್ತಿರುವಿರಲ್ಲ. ತಮ್ಮ ಹಣವು ತಮ್ಮದಾಗಿಯೆ ಉಳಿಯುವದು. ಮತ್ತೆ ನೂರ್ಮಡಿಯಾಗಿ ಬೆಳೆಯುವದು. ನೋಡಿರಲ್ಲ, ನಾನು ನನ್ನ ಎಲ್ಲ ಪಿತ್ರಾರ್ಜಿತ ಆಸ್ತಿಯನ್ನು-ಐವತ್ತು ಸಾವಿರ ರೂಪಾಯಿಗಳನ್ನು – ಇದರಲ್ಲಿ ಹಾಕಿದ್ದೇನೆ. ನನ್ನ ಮಾತು ಬಿಡಿರಿ, ನಾನು ಸರ್ವಸ್ವತ್ಯಾಗೀ ಸನ್ಯಾಸಿ – ಧನಕನಕಾದಿಗಳು ನನಗೆ ಬೇಕಾಗಿಯೇ ಇಲ್ಲ – ಬಂದ ಲಾಭವನ್ನೆಲ್ಲ ದೇವಿಯ ಸೇವೆಯಲ್ಲಿಯೆ ವಿನಿಯೋಗಿಸುವೆನು. ಆದರೆ ಈ ಬಿಪಿನ ಮತ್ತು ಅಟಲರನ್ನು ನೋಡಿರಲ್ಲ, ಇಬ್ಬರೂ ಐವತ್ತು ಐವತ್ತು ಸಾವಿರ ರೂಪಾಯಿ ಹಾಕಿದ್ದಾರೆ. ಗಂಡೇರಿಯು ಒಂದು ಲಕ್ಷದ ಶೆಯರ ತೆಗೆದುಕೊಂಡಿದ್ದಾನೆ. ಅವನಿಗಿಂತ ಚತುರನಾದ ವ್ಯಾಪಾರಿಯು ಯಾವನಿದ್ದಾನೆ ? ಲಾಭವು ನಿಶ್ಚಿತವೆಂದೇ ಅವನು ಇದರಲ್ಲಿ ಕೈ ಹಾಕಿರಲಿಕ್ಕೆ ಬೇಕಷ್ಟೆ ?

**ತೀನಕರಿ:—** ಹೀಗೋ ಹೀಗೋ ? ಕೇಳಿ ಏನೋ ತುಸು ಭರವಸೆ ಯುಂಟಾಗಿದೆ. ಆದರೆ ಒಮ್ಮೆ ಕೋಲ್ಡ್‌ಹ್ಯಾಮ್ ಸಾಹೇಬರನ್ನು ಕನ್ಸಲ್ಟ ಮಾಡಿದರೆ ಹೇಗೆ ? ಇಂತಹ ಸಾಹೇಬರು ಅಪರೂಪ, ನೋಡಿರಿ.

ಇಷ್ಟರಲ್ಲಿ, ಅಡಿಗೆಯಾಗಿದೆಯೆಂದು ಆಳು ಬಂದು ಹೇಳಿದ.

" ಎಳಲಿಕ್ಕೆ ಅಪ್ಪಣೆಯಾಗಲಿ ಬ್ರಹ್ಮಚಾರೀ ಮಹಾಶಯ. ಬನ್ನಿರಿ ಅಟಲಬಾಬೂ, ನಡೆಯೋ ಬಿಪಿನ ! " ತೀನಕರಿ ಬಾಬುಗಳು ಎಲ್ಲರನ್ನೂ ಒಳಗೆ ಕರೆದುಕೊಂಡು ಹೋದರು.

ಶ್ಯಾಮಬಾಬುಗಳೆಂದರು. "ಇದೇನು ರಾಯಸಾಹೇಬ, ರಾಜಸೂಯ ಯಜ್ಞವನ್ನೆ ಹೂಡಿ ಬಿಟ್ಟಿರುವಿರಲ್ಲ ! ಅದೇನು ತಾವು ಕುಳಿತುಕೊಳ್ಳಲಿಲ್ಲ ? "

**ಶೀನಕರಿ:—** ಈ ಸಂಧಿವಾತವೊಂದಿದೆಯಲ್ಲ. ಏನು ಮಾಡಲಿ ? ಇಲ್ಲವಾದರೆ ಅವಶ್ಯವಾಗಿ ಕುಳಿತುಕೊಳ್ಳುತ್ತಿದ್ದೆ. ಅನ್ನ ಊಟಮಾಡುವದಿಲ್ಲ. ತುಸು ಸಜ್ಜಿಗೆ ತಿನ್ನುತ್ತೇನೆ.

**ಶ್ಯಾಮ:—** ನಾನು ತಮಗಾಗಿ ಒಂದು ಫೇತ್ಕಾರಿಣೀ-ತಂತ್ರೋಕ್ತ ಕವಚವನ್ನು ಕೊಟ್ಟು ಕಳಿಸುವೆನು. ಅದನ್ನು ಧಾರಣ ಮಾಡಿ ನೋಡಿರಿ....

**ಶೀನಕರಿ:—** ಹಾಂ, ಸ್ವಾಮೀಜಿ, ಇನ್ನೊಂದು ಮಾತು ಮರೆತಿದ್ದೆ. ನಿಮ್ಮ ತಂತ್ರಶಾಸ್ತ್ರದಲ್ಲಿ,ಮನುಷ್ಯನ ಮಾನಮರ್ಯಾದೆಯು ವೃದ್ಧಿಯಾಗುವಂತಹ ಪ್ರಕ್ರಿಯೆಯೇನಾದರೂ ಇದೆಯೇನು ?

**ಶ್ಯಾಮ:—** ಅವಶ್ಯವಾಗಿ ಇದೆ. ಕುಲಾರ್ಣವ ತಂತ್ರದಲ್ಲಿ ' ಅಮಾನಿನಾಂ ಮಾನದೇನ ' ಎಂದಿದೆ. ಅರ್ಥಾತ್ ಕುಲಕುಂಡಲಿನಿಯು ಜಾಗ್ರತಳಾದಳೆಂದರೆ ಮಾನರಹಿತ ವ್ಯಕ್ತಿಗೂ ಮಾನವನ್ನು ಕೊಡುವಳು. ಇದೇಕೆ ತಮಗೆ ಬೇಕಾಗಿದೆ ?

**ಶೀನಕರಿ:—** ಹೇ: ಹೇ: ಏನೋ ಸಹಜವಾಗಿ ಕೇಳಿದೆ. ಏನು ಹೇಳಿ ಬಿಡಲಿಯಾ ? ನಮ್ಮ ಕೋಲ್ಡ್‌ಹ್ಯಾಮ್ ಸಾಹೇಬರು ಹೇಳಿದ್ದರು, ಅನುಕೂಲವಾದ ಕೂಡಲೆ ಗವ್ಹರ್ನರ ಸಾಹೇಬರಿಗೆ ಭೆಟ್ಟಿಯಾಗಿ ನನಗೊಂದು ದೊಡ್ಡ ಪದವಿಯನ್ನು ಕೊಡಿಸುವೆವೆಂದು. ತಿರುಗಿ ಮುರುಗಿ ರಿಸಾಯಿಲಂಡ ಮಾಡುವದು ಅಷ್ಟು ನೆಟ್ಟಗಲ್ಲ. ಆದ್ದರಿಂದ ಏನೋ ತಂತ್ರಮಂತ್ರದಿಂದ ಆಗುತ್ತಿದ್ದರೆ ನೋಡಬೇಕೆಂದಿದ್ದೆ. ವಿಶೇಷ ವಿಶ್ವಾಸವೇನೂ ಇಲ್ಲ; ಆದರೂ....

**ಶ್ಯಾಮ:—** ಛೇ ವಿಶ್ವಾಸವಿಡಲೇಬೇಕು. ಶಾಸ್ತ್ರಗಳೆಂದಾದರೂ-ಸುಳ್ಳಾಗುವವೆ ? ತಾವು ನಿಶ್ಚಿಂತರಾಗಿರಿ; ಈ ವಿಷಯದಲ್ಲಿ ನಾನು ನನ್ನ ಸಮಸ್ತ ಸಾಧನೆಯನ್ನು ನಿಯೋಜಿಸುವೆನು. ಆದರೆ ಸದ್ಗುರು ಮಾತ್ರ ಅವಶ್ಯ ಬೇಕು. ದೀಕ್ಷೆಯಿಲ್ಲದೆ ಇಂತಹ ಕೆಲಸಗಳಾಗುವದಿಲ್ಲ. ಸಿಕ್ಕ ಸಿಕ್ಕವರು ಗುರುಗಳಾದರೂ ನಡೆಯುವಂತಿಲ್ಲ. ಇನ್ನು ಖರ್ಚಿನ ವಿಷಯ. ಅದು ಯಥಾಸಾಧ್ಯ ಕಡಿಮೆಯಾಗುವಂತೆ ಮಾಡುವದು ನನ್ನನ್ನು ಕೂಡಿತು.

**ಶೀನಕರಿ:—** ಇರಲಿ. ಮುಂದೆ ನೋಡಲಿಕ್ಕೆ ಬಂದೀತು. ಒಳ್ಳೇದು, ನಿಮ್ಮ ಆಫೀಸಿಗಾಗಿ ಅನೇಕ ಜನರ ಆವಶ್ಯಕತೆಯುಂಟಾಗಬಹುದಲ್ಲವೆ. ಅಂs..., ನಮ್ಮ ಹೆಂಡತಿಯ ತಂಗಿಯ ಮಗನೊಬ್ಬನಿದ್ದಾನೆ. ಅವನ ಬಗ್ಗೆ

ಏನಾದರೂ ಅಷ್ಟು ವ್ಯವಸ್ಥೆ ಮಾಡಬೇಕು. ಉದ್ಯೋಗವಿಲ್ಲದೆ ಕುಳಿತು ಕೊಂಡು ಅನ್ನಧ್ವಂಸ ಮಾಡುತ್ತಿದ್ದಾನೆ; – ಓದು ಬರಹ ಕಲಿಯಲಿಲ್ಲ; – ಕೆಟ್ಟ ಸಂಗತಿಗೆ ಬಿದ್ದು ಉಡಾಳನಂತೆ ತಿರುಗುತ್ತಿದ್ದಾನೆ. ಏನಾದರೂ ಒಂದು ಕೆಲಸ ದೊರೆತರೆ ಬಹಳ ಚೆನ್ನಾಗುವದು. ಹುಡುಗ ಕೆಲಸದಲ್ಲಿ ಬಹಳ ಚುರು ಕಾಗಿದ್ದಾನೆ. ಶೀಲಸ್ವಭಾವಾದಿಗಳೂ ಚೆನ್ನಾಗಿವೆ.

**ಶ್ಯಾಮ:**— ತಾವು ಹೆಚ್ಚಿಗೆ ಹೇಳಬೇಕಾಗಿಲ್ಲ. ನಾನು ಅವನನ್ನು ಮಂದಿರದ ಹೆಡ್ ಪೂಜಾರಿಯನ್ನಾಗಿ ಮಾಡುವೆನು. ಈಗಾಗಲೆ ಹದಿನೈದು ಅರ್ಜಿಗಳು ಬಂದಿವೆ – ಅದರಲ್ಲಿ ಐವರು ಗ್ರ್ಯಾಜುಏಟರು. ಆದರೆ ನಮ್ಮ ಆಪ್ತನ – ಕ್ಲೇಮು ಎಲ್ಲರ ಮೇಲೆ.

**ತೀನಕರಿ:**— ಇನ್ನೊಂದು ಅನುರೋಧ. ನಮ್ಮ ಮನೆಯಲ್ಲಿ ಕಂಚಿನ ಒಂದು ಹಳೆಯ ಘಂಟೆಯಿದೆ, – ಸ್ವಲ್ಪ ಸೀಳಿದೆ, ಆದರೆ ಬಹಳ ಉತ್ತಮ ಕಂಚಿನದು. ಅದು ನಿಮ್ಮ ಮಂದಿರದ ಕೆಲಸಕ್ಕೆ ಬರಬಹುದಲ್ಲ? ಅಗ್ಗ ಮಾಡಿ ಕೊಟ್ಟು ಬಿಡುವೆನು.

**ಶ್ಯಾಮ:**— ಅವಶ್ಯ ತೆಗೆದುಕೊಳ್ಳುವೆನು. ಆಗಿನ ಕಾಲದ ಜಿನಸು ಗಳು ಈಗ ಬೇಕೆಂದರೂ ಸಿಗುವವೆಲ್ಲಿ?

*　　*　　*　　*　　*

ಗಂಡೇರಿಯ ಭವಿಷ್ಯವಾಣಿಯು ಸಫಲವಾಯಿತು. ಮೋಹಕ ಜಾಹೀ ರಾತುಗಳ ಸುರಿಮಳೆಯಿಂದಲೂ ಪ್ರತಿಷ್ಠಾಪಕರ ಮಹಾ ಪ್ರಯತ್ನದಿಂದಲೂ ಎಲ್ಲ ಶೇಯರುಗಳು ಮಾರಾಟವಾಗಿ ಹೋಗಿವೆ. ಜನರು ಶೇಯರ ಕೊಳ್ಳು ವದಕ್ಕಾಗಿ ಆತುರರಾಗಿದ್ದಾರೆ. ಪೇಟೆಯಲ್ಲಿ ರಭಸದಿಂದ ಕೊಡತೊಗೊಳ್ಳು ವದು ನಡೆದಿದೆ.

ಅಟಲಬಾಬುಗಳೆಂದರು. "ಇನ್ನೇನು ಶ್ಯಾಮಬಾಬೂ, ನಾವು ನಮ್ಮ ಎಲ್ಲ ಶೆಯರುಗಳನ್ನು ಮಾರಿಬಿಡೋಣ. ಗಂಡೇರಿಯಂತೂ ಬಹಳ ದೂರ ಹೊಡೆದಿದ್ದಾನೆ! ಇವತ್ತು ಡಬಲ್ ದರ ಇದೆ. ಎರಡು ದಿನಗಳನಂತರ ಯಾರೂ ಮಾತಾಡಿಸುವದಿಲ್ಲ."

**ಶ್ಯಾಮ:**— ಮಾರುವದಿದ್ದರೆ ಮಾರಿಬಿಡಿರಿ. ಆದರೆ ಕೈಯಲ್ಲಿ ಏನಾದರೂ ಸ್ವಲ್ಪ ಇಟ್ಟುಕೊಳ್ಳಬೇಕಷ್ಟೆ; ಇಲ್ಲವಾದರೆ ಡಿರೆಕ್ಟರರಾಗಿ ಉಳಿಯುವದೆಂತು?

**ಅಟೆಲ:—** ಡಿರೆಕ್ಟರಿಕೆಯನ್ನು ನೀವೇ ಮಾಡಿರಿ. ನಾನಿನ್ನು ಈ ಗೊಂದಲದಲ್ಲಿ ಇರಲಾರೆ. ಸಿದ್ಧೇಶ್ವರಿಯ ಕೃಪೆಯಿಂದ ನಮ್ಮ ಕಾರ್ಯ ಸಿದ್ಧಿಯಂತೂ ಆಗಿದೆ.

**ಶ್ಯಾಮ:—** ಈಗಿನ್ನೂ ಆರಂಭ. ಮಂದಿರ, ಅತಿಥಿಶಾಲೆ, ಮಾರ್ಕೆಟ್ ಮೊದಲಾದವುಗಳನ್ನು ಇನ್ನೂ ಕಟ್ಟಿಸುವದಿದೆಯಲ್ಲ ? ನಿಮ್ಮನ್ನು ಈಗಲೇ ಬಿಡುವದು ಹೇಗೆ !

**ಅಟೆಲ:—** ಇದ್ದು ಲಾಭವೇನು ? ಮಂದಿ ಆಡಿಕೊಂಡರೆ ಆಡಿಕೊಳ್ಳಲಿ, ನಮ್ಮ ಮೈಗೇನೂ ಹತ್ತುವದಿಲ್ಲ. ಈಗಂತೂ ಬ್ರದರ - ಇನ್ - ಲಾ ಕಂಪನಿಯ 'ಸಿಝುನ್ ' ಇದೆ. ನಾವು ಇಲ್ಲಿಗೇ ಅಪ್ಪಣೆ ತೆಗೆದುಕೊಳ್ಳುತ್ತೇವೆ.

**ಶ್ಯಾಮ:—** ಎಲ, ಇಷ್ಟೇಕೆ ಗಡಿಬಿಡಿ? ಒಬ್ಬರೇ ಹೋದರೆ ಯಾತ್ರೆಯ ಫಲವು ದೊರಕುವದೆ? ಸಂಜೆಯ ಮುಂದೆ ನಿಮ್ಮ ಮನೆಯ ಕಡೆಗೆ ಬರುವೆನು – ಗಂಡೇರಿರಾಮನನ್ನು ಕರೆದುಕೊಂಡು ಬರುವೆನು.

* * * * *

ಒಂದುವರೆ ವರ್ಷವಾಗಿದೆ. ಬ್ರಹ್ಮಚಾರೀ ಎಂಡ ಬ್ರದರ-ಇನ್-ಲಾ ಕಂಪನಿಯ ಆಫೀಸಿನಲ್ಲಿ ಡಿರೆಕ್ಟರರ ಸಭೆ ನೆರೆದಿದೆ.



**ನ – ನ – ನನಗೆ ಹೇಳಿರಿ ಮೊದಲು**

ಸಭಾಪತಿ ತೀನಕರ ಬಾಬುಗಳು ಮೇಜಿನಮೇಲೆ ಮುಷ್ಟಿಯಿಂದ ಗುದ್ದುತ್ತ ಅನ್ನುತ್ತಿದ್ದರು. " ನ – ನ – ನನಗೆ ಹೇಳಿರಿ ಮೊದಲು, ರೂಪಾಯಿಗಳೆಲ್ಲ ಎಲ್ಲಿ ಹೋದವು ? ನಾನು ಮನೆಯಲ್ಲಿರುವದೇ ಕಠಿಣವಾಗಿದೆ, ಎಲ್ಲರೂ ಬಂದು ನನಗೇ ಗಂಟುಬೀಳುತ್ತಾರೆ. ಅವರ ಕಾಟ ತಡೆಯದಾಗಿದೆ.

ಇದ್ದಲಿಯವನು ಬಂದು ತನ್ನ ಇಪ್ಪತ್ತೈದುಸಾವಿರ ರೂಪಾಯಿ ಕೊಡಬೇಕೆನ್ನುತ್ತಾನೆ, – ಇಟ್ಟಂಗಿಯವನು ಹನ್ನೆರಡುಸಾವಿರ ಎನ್ನುತ್ತಾನೆ,– ಇನ್ನೂ ಪ್ರೆಸ್ಸಿನವರಿದ್ದಾರೆ, ಶಾರ್ಪರ ಕಂಪನಿಯಿದೆ, ಕುಂಡೂ ಮುಕರ್ಜಿಯಿದ್ದಾನೆ. ಇನ್ನೂ ಯಾರಾರದು ಎಷ್ಟೆಷ್ಟು ಕೊಡುವದಿದೆಯೋ ಯಾರಿಗೆ ಗೊತ್ತು? ಎಲ್ಲರೂ ಕೋರ್ಟಿಗೆ ಹೋಗುವೆವೆಂದು ಅನ್ನುತ್ತಿದ್ದಾರೆ.ಮಂದಿ–ರವು ಯಾವ ಲೋಕದಲ್ಲಿದೆಯೋ ದೇವರೇ ಬಲ್ಲ. – ಇಷ್ಟರಲ್ಲಿಯೆ ಎರಡು ಲಕ್ಷ ರೂಪಾಯಿಗಳು ಹಾರಿ ಹೋದವೆ? ಆ ಭಂಡ ಬ್ರಹ್ಮಚಾರಿಯು ಎಲ್ಲಿದ್ದಾನೆ? 'ಕಣ್ಣು ತಪ್ಪಿಸಿ ಓಡಾಡುತ್ತಿದ್ದಾನೆ, ಆಫೀಸಿಗೆ ಬರುವದಿಲ್ಲ' ಎಂದು ಕೇಳಿದ್ದೇನೆ.

**ಅಟಲ:**— ಮಿ. ಬ್ರಹ್ಮಚಾರಿಯವರು, ದೇವಿಯು ತಮ್ಮನ್ನು ಬೇರೆ ಕಾರ್ಯಕ್ಕಾಗಿ ಕರೆದಿರುವಳೆಂದೂ ಈ ಕೆಲಸದಲ್ಲಿ ಅಷ್ಟೊಂದು ಉತ್ಸಾಹವುಳಿದಿಲ್ಲವೆಂದೂ ಅನ್ನುತ್ತಾರೆ. ಆದರೂ ಇವತ್ತು ಮೀಟಿಂಗಿಗೆ ಬರುವೆವೆಂದು ಹೇಳಿದ್ದಾರೆ.

ಬಿಪಿನನೆಂದ. "ಹೀಗೇಕೆ ಗಾಬರಿಯಾಗುವಿರಿ ಸರ್? ಲೆಕ್ಕದ ಪುಸ್ತಕವಂತೂ ತಮ್ಮೆದುರಿಗೆ ಇದೆ. ನೋಡಿರಲ್ಲ, – ಜಮೀನ ಖರೀದಿ ಖಾತೆ, - ಶೇಯರ ದಲಾಲೀಖಾತೆ, Preliminary expenses, ಇಟ್ಟಂಗಿ ತಯಾರಿಸಿದ್ದು, establishment, ಜಾಹೀರಾತಿನ ಖರ್ಚು, ಆಫೀಸ ಖರ್ಚು....

**ತೀನಕರಿ:**— ಸುಮ್ಮನಿರಲಿ ಪ್ರೋಕರಿ! ಓತೀಕಾಟಕ್ಕೆ ಬೇಲೀ ಸಾಕ್ಷಿ....!

ಇಷ್ಟರಲ್ಲಿ ಶ್ಯಾಮಬಾಬುಗಳೂ ಅಲ್ಲಿಗೆ ಬಂದರು. "ಏನಿದು ವಾಗ್ವಾದ?" ಎಂದರು ಅವರು.

**ತೀನಕರಿ:**— ಏನು; ನಮ್ಮ ತಲೆ! ನನಗೆ ಲೆಕ್ಕ ಬೇಕು.

**ಶ್ಯಾಮ:**— ಓಹೋ, ಬೇಕಾದ ಹಾಗೆ ನೋಡಿರಲ್ಲ. ಇದಕ್ಕಿಂತ ಸಯುಕ್ತಿಕವಾದ ಮಾತು ಯಾವುದು? ಇಷ್ಟೇ ಅಲ್ಲ, ಒಂದು ದಿನ ತಾವು ಗೋವಿಂದಪುರಕ್ಕೆ ಸ್ವತಃ ಹೋಗಿ ಏನೇನು ಕೆಲಸವಾಗಿದೆಯೆಂಬುದನ್ನು ಪ್ರತ್ಯಕ್ಷ ನೋಡಿಕೊಂಡು ಬನ್ನಿರಿ.

**ತೀನಕರಿ:—** ಥಲೆ! ವಾತದಿಂದ ಮೊದಲೇ ಮೈ ಕೈ ಹಿಡಿದಿವೆ. ಆ ಮೇಲೆ ನಿಮ್ಮ ಆ ಹಾಳು ಗೋವಿಂದಪುರಕ್ಕೆ ಹೋಗಿ ನಾಳೆ ಸಾಯುವವ ಇವತ್ತೇ ಸಾಯಬೇಕೆನ್ನುತ್ತೀರೇನು! ಆದಾಗದು. ನನ್ನ ಹಣವನ್ನು ನನಗೆ ತಿರುಗಿ ಕೊಟ್ಟು ಬಿಡಿರಿ. ಕಂಪನಿಯಂತೂ ಹಳ್ಳಾ ಹಿಡಿದಿದೆ. ಶೇಯರ ಹೋಲ್ಡರರು ಕೋಲಾಹಲವನ್ನೆಬ್ಬಿಸಿದ್ದಾರೆ.

ಶ್ಯಾಮಬಾಬುಗಳು ಹಣೆ ಹಣೆ ಘಟ್ಟಿಸಿಕೊಂಡು ನುಡಿದರು. "ಎಲ್ಲವೂ ಆ ಜಗನ್ಮಾತೆಯ ಇಚ್ಛೆಯು. ಮನುಷ್ಯನು ಬಗೆಯುವದೊಂದು, ಆದು ಆಗುವದೊಂದು. ಇಷ್ಟರಲ್ಲಿ ಮಂದಿರವು ಮುಗಿಯಲಿಕ್ಕೆ ಬೇಕಾಗಿತ್ತು. ಆದರೆ ಅನೇಕ ಅಜ್ಞಾತಪೂರ್ವ ಕಾರಣಗಳಿಂದ ವೆಚ್ಚವು ಹೆಚ್ಚಾಗಿ ಹಣದ ಕೊರತೆಯುಂಟಾಯಿತು; ಇದರಲ್ಲಿ ನಮ್ಮ ಅಪರಾಧವೇನು? ಆದರೆ ಚಿಂತಿಸುವ ಕಾರಣವಿಲ್ಲ. ಇನ್ನು ತಾನಾಗಿಯೆ ಎಲ್ಲವೂ ಸರಿಹೋಗುವದು. ಇನ್ನೊಂದು 'call' ದ ಹಣ ಬಂದ ಕೂಡಲೇ ಎಲ್ಲ ಸಾಲವೂ ಮುಟ್ಟಿಬಿಡುವದು. ಕೆಲಸವೂ ಒತ್ತರದಿಂದ ಮುಂದೆ ಸಾಗುವದು"

ಗಂಡೇರಿಶೇಠರೆಂದರು. "ಇನ್ನು ಯಾರು ರೂಪಾಯಿ ಕೊಡುವರು? ನಿಮ್ಮ ಮೇಲಿನ ಜನರ ವಿಶ್ವಾಸವೆಲ್ಲ ಹಾರಿದೆ."

**ಶ್ಯಾಮ:—** ವಿಶ್ವಾಸವಿಡದಿದ್ದರೆ ಉಪಾಯವಿಲ್ಲ. ನಾನು ನನ್ನ ಹೊಣೆಯಿಂದ ಮುಕ್ತನಾದೆ, ಮಾತೆಯು ತನ್ನ ಮನಬಂದಂತೆ ತನ್ನ ಕಾರ್ಯವನ್ನು ಸಾಗಿಸಿಕೊಳ್ಳಲಿ. ನನ್ನನ್ನು ಶ್ರೀ ವಿಶ್ವೇಶ್ವರನು ಕಾಶಿಗೆ ಎಳೆಯುತ್ತಿದ್ದಾನೆ. ಅಲ್ಲಿಯೆ ಹೋಗಿ ಆಶ್ರಯಿಸುವೆನು.

**ತೀನಕರಿ:—** ಹಾಗಾದರೆ ಕಂಪನಿಯು ಮುಣುಗಿತೆಂದು ಅನ್ನುತ್ತೀರೇನು?

**ಗಂಡೇರಿ:—** ನೀರಿನಲ್ಲಿ ನೀರಲ್ಲಿ!

**ಶ್ಯಾಮ:—** ಒಳ್ಳೇದು ತೀನಕರಿಬಾಬೂ, ನಮ್ಮ ಮೇಲೆ ಜನರ ವಿಶ್ವಾಸವುಳಿಯಲಿಲ್ಲವೆಂದಮೇಲೆ ನಾವು ಮ್ಯಾನೇಜಿಂಗ ಎಜೆನ್ಸಿಯನ್ನು ಬಿಟ್ಟುಬಿಡುವದೇ ನೆಟ್ಟಗೆ. ಪೇಟಿಯಲ್ಲಿ ತಮ್ಮ ಪತ್ತು ಇದೆ, ಮರ್ಯಾದೆಯಿದೆ, ಜನರೂ ನಂಬಿಕೆಯುಳ್ಳವರಾಗಿದ್ದಾರೆ; ತಾವೇ ಮ್ಯಾನೇಜಿಂಗ ಡಿರೆಕ್ಟರರಾಗಿ ಕಂಪನಿಯನ್ನೇಕೆ ಸಾಗಿಸಬಾರದು?

ಅಟೆಲ:— ಇದು ಮಾತ್ರ ಬಹು ಸೂಕ್ಷ್ಮವಾದ ಮಾತು.

ತೀನಕರಿ:— ಸರಿ ! ಸುಮ್ಮನೇ ನಾನು ಅಪಕೀರ್ತಿಯನ್ನು ಹೊರಲೋ ? ಮನೆಯ ಅನ್ನವನ್ನು ತಿಂದು ಮಂದಿಯ ದನ ಕಾಯಲೋ ?

ಶ್ಯಾಮ:— ಪುಕ್ಕಟೆಯಾಗಿ ಏಕೆ ದುಡಿಯುವಿರಿ? ನಾನು ಇದೇ ಮೀಟಿಂಗಿನಲ್ಲಿ ಪ್ರಸ್ತಾಪ ಮಾಡುತ್ತೇನೆ—“ ರಾಯಸಾಹೇಬ ಶ್ರೀಯುತ ಬಾಬೂ ತೀನಕರಿ ಬ್ಯಾನರ್ಜಿಯವರಿಗೆ ತಿಂಗಳಿಗೆ ೧೦೦೦ ರೂಪಾಯಿಗಳಂತೆ ಪಾರಿಶ್ರಮಿಕವನ್ನು ಕೊಟ್ಟು ಕಂಪನಿಯನ್ನು ನಡೆಸುವ ಭಾರವನ್ನು ಒಪ್ಪಿಸೋಣಾಗಬೇಕು. ಇಂತಹ ಯೋಗ್ಯರೂ ಕಾರ್ಯದಕ್ಷರೂ ಆದ ವ್ಯಕ್ತಿಗಳು ದುರ್ಲಭ. ” ಇದಲ್ಲದೆ ನಾವು ಏನಾದರೂ ತಪ್ಪುಗಳನ್ನು ಮಾಡಿದ್ದರೆ ಅದಕ್ಕೆ ತಾವು ಹೊಣೆಗಾರರಾಗಲಾರಿರಿ.

ತೀನಕರಿ:— ಈ-ಈ-ಈಗಲೇ ನಾನು ಮಾತು ಕೊಡುವದಿಲ್ಲ. ಚೆನ್ನಾಗಿ ವಿಚಾರಮಾಡಿ ನೋಡುವೆನು.

ಅಟೆಲ:— ರಾಯ ಸಾಹೇಬ, ತಾವು ಇನ್ನು ಹೀಗೆ ಹಿಂಜಾಳಿಸುತ್ತ ಕೂಡಬೇಡಿರಿ. ತಮ್ಮ ಮೇಲೆಯೆ ಎಲ್ಲ ಭರವಸೆ.

ಶ್ಯಾಮ:— ಅಭಯ ಕೊಡುವದಾದರೆ ಇನ್ನೂ ಒಂದು ಅರಿಕೆಯಿದೆ. ನನಗೆ ಚೆನ್ನಾಗಿ ತಿಳಿದಿದೆ. ಅರ್ಥವು ಅನರ್ಥಕಾರಿಯಾಗಿದೆ; ಅಧ್ಯಾತ್ಮಸಾಧನೆಯಲ್ಲಿ ಅದೊಂದು ಬಾಧಕ. ಆದ್ದರಿಂದ ನಾನು ನನ್ನ ಎಲ್ಲ ಆಸ್ತಿಯನ್ನು ದಾನಮಾಡಿ ಬಿಟ್ಟಿದ್ದೇನೆ; ಕಂಪನಿಯ ಹದಿನಾರು ನೂರು ಶೇಯರುಗಳು ಮಾತ್ರ ಉಳಿದಿವೆ. ಅವುಗಳನ್ನು ನಾನು ಸತ್ಪಾತ್ರರಿಗೆ ಅರ್ಪಣೆ ಮಾಡಬೇಕೆಂದಿದ್ದೇನೆ. ತಾವು ಅವುಗಳನ್ನು ತೆಗೆದುಕೊಂಡುಬಿಡಿರಿ. ಪ್ರೀಮಿಯಮ್ ಬಯಸುವದಿಲ್ಲ, ಕೊಂಡಬೆಲೆ ೩೨೦ ರೂಪಾಯಿಗಳನ್ನು ಮಾತ್ರ ಕೊಟ್ಟುಬಿಡಿರಿ.

ತೀನಕರಿ:— ಅಂತೂ ಚೆನ್ನಾಗಿಯೆ ನನ್ನ ಗೋಣು ಮುರಿಯಬೇಕೆಂದು ಹಂಚಿಕೆ ಮಾಡಿದಂತೆ ಕಾಣುತ್ತಿದೆ.

ಶ್ಯಾಮಲಾಲರು ಕಿವಿಯಲ್ಲಿ ಬೊಟ್ಟು ಇಟ್ಟುಕೊಂಡು ನುಡಿದರು. “ ಶಿವ ಶಿವ ! ನಾನು ಇದನ್ನು ತಮ್ಮ ಹಿತಕ್ಕಾಗಿಯೆ ಹೇಳುತ್ತಿದ್ದೇನೆ.

ನಿಮಗೆ ಅಷ್ಟು ಬೆಲೆ ಕೊಡಲಿಕ್ಕೆ ಇಚ್ಛೆಯಿಲ್ಲದಿದ್ದರೆ ತುಸು ಕಡಿಮೆ ಕೊಡಿರಿ, – ಇಪ್ಪತ್ತುನಾಲ್ಕು ನೂರು....ಎರಡುಸಾವಿರ–ಸಾವಿರ–....

**ತೀನಕರಿ:**— ಒಂದು ಕಾಸು ಸಹ ಇಲ್ಲ.

**ಶ್ಯಾಮು:**— ಕೇಳಿರಿ, ಬ್ರಾಹ್ಮಣನಿಗೆ ಬ್ರಾಹ್ಮಣನ ದಾನ–ಪ್ರತಿಗ್ರಹ ಗಳು ನಿಷಿದ್ಧ. ಇಲ್ಲವಾದರೆ ತಮ್ಮಂಥ ಮಹಾನುಭಾವರಿಗೆ ನಾನು ಹಾಗೆಯೆ ಕೊಡಬೇಕಾಗಿತ್ತು. ಎಷ್ಟರ ಬೆಲೆ ಹಿಡಿದರೆಂಬಾದರಾಯಿತು. ಐನೂರು ರೂಪಾಯಿ ಕೊಡಿರಿ ಆಯಿತೋ ಇಲ್ಲೋ? Transfer form ನನ್ನ ಹತ್ತರ ತಯಾರ ಇದೆ,— ಬಿಪಿನ ತೊಗೊಂಡು ಬಾ!

**ತೀನಕರಿ:**— ನಾನು ಐ – ಐ – ಎಂಬತ್ತು ರೂಪಾಯಿ ಕೊಡುತ್ತೇನೆ!

**ಶ್ಯಾಮು:**— ತಥಾಸ್ತು. ಬಹಳ ಹಾನಿಯಾಯಿತು. ಆದರೆ ಮಾತೆಯ ಇಚ್ಛೆಯೇ ಹಾಗಿದೆ....

**ಗಂಡೇರಿ:**— ತೀನಕರಿ ಬಾಬೂ, ಲಾಭ ಬಹಳವಾಯಿತು.

ತೀನಕರಿ ಬಾಬುಗಳು ಕಿಸೆಯೊಳಗಿಂದ ಮನೀಬ್ಯಾಗ್ ತೆಗೆದು ಅದೇ ದೊರೆತ ಪೆನ್ಶನ್‌ದ ಹಣದೊಳಗಿಂದ ಹತ್ತು ರೂಪಾಯಿಗಳ ಎಂಟು ನೋಟುಗಳನ್ನು ತೆಗೆದುಕೊಂಡು ಐದಾರು ಸಾರೆ ಎಣಿಎಣಿಸಿ ಕೊಟ್ಟರು. ಶ್ಯಾಮುಲಾಲರು ಅವುಗಳನ್ನು ಕಿಸೆಯಲ್ಲಿ ಹಾಕಿ ಹೇಳಿದರು. 'ಹಾಗಾದರೆ ನಾನಿನ್ನು ಬರುತ್ತೇನೆ. ಮನೆಯಲ್ಲಿ ಸತ್ಯನಾರಾಯಣನ ಪೂಜೆಯಿದೆ–ಕಂಪನಿಯ ಭಾರವು ತಮ್ಮ ಮೇಲೆ ಎಂದು ನಿಶ್ಚಿತವಾದಂತಾಯಿತು. ಶುಭಮಸ್ತು ಮಾತಾ ಸಿದ್ಧೇಶ್ವರಿಯು ತಮಗೆ ಮಂಗಳವನ್ನುಂಟುಮಾಡಲಿ.'

ಶ್ಯಾಮುಲಾಲರು ಹೊರಟುಹೋದಮೇಲೆ ತೀನಕರಿಬಾಬುಗಳು ನಸುನಕ್ಕು ನುಡಿದರು: "ಏನೇ ಇರಲಿ. ಶ್ಯಾಮುಬಾಬೂ ಒಳ್ಳೆಯ ಮನುಷ್ಯ. ತುಸು 'ಹವಾಬಗ" ಎಂದು ಕಂಡರೂ ಸ್ವಭಾವ ಉದಾರವಾಗಿದೆ. ಕಂಪನಿಯ ಭಾರವಂತೂ ನನ್ನ ತಲೆಯ ಮೇಲೆ ಬಿತ್ತು. ಏಳೆಂಟು ತಿಂಗಳ ಈ ಸಂಧಿವಾತದ ಮೂಲಕ ಮನೆ ಹಿಡಿದು ಕೂಡಬೇಕಾಯಿತು. ಏನೂ ನೋಡಲಿಕ್ಕೆ ಆಗಲಿಲ್ಲ. ಇಲ್ಲವಾದರೆ ಕಂಪನಿಯ ಗತಿಯು ಹೀಗೇಕೆ ಆಗುತ್ತಿತ್ತು?

ಆಗಲಿ. ಇನ್ನು ಗಟ್ಟಿಯಾಗಿ ಕೆಲಸಕ್ಕೆ ತೊಡಗಬೇಕು. ಪ್ರತಿಯೊಂದೂ ವ್ಯವಸ್ಥಿತವಾಗಿರಬೇಕು ನನಗೆ–ನನ್ನ ಹತ್ತಿರ ಯಾರ ಠಕ್ಕತನವೂ ನಡೆಯದು.

**ಗಂಡೇರಿ:—** ತಾವು ಇನ್ನು ಏನೂ ಶ್ರಮಪಡಬೇಕಾಗಿಲ್ಲ. ಕಂಪನಿಯು ಮುಣುಗಿತು. ತಮಗೂ ಇನ್ನು ಅಪ್ಪಣೆ.

**ತೀನಕರಿ:—** ಏನಂದಿರಿ ! ಕಂಪನಿಯು ಮುಣುಗಿತೆ !! ಹಾಗಾದರೆ ನನ್ನ ಪಗಾರ....

**ಗಂಡೇರಿ:—** ಹಾಃ ಹಾಃ ! ಪಗಾರ ಬೇಕೋ ! ಯಾರು ಕೊಡುವವರು ಪಗಾರ? ತೀನಕರಿ ಬಾಬೂ, ಶ್ಯಾಮಬಾಬುಗಳ ಯುಕ್ತಿಯು ನಿಮಗೆ ತಿಳಿಯಲಿಲ್ಲವೆ ? ತೊಂಬತ್ತು ಸಾವಿರ ರೂಪಾಯಿ ಕಂಪನಿಗೆ ಸಾಲವಾಗಿದೆ. ಎರಡು ದಿನಗಳ ನಂತರ ಲಿಕ್ವಿಡೇಶನ್ ಆಗುವದು. ಲಿಕ್ವಿಡೇಟರನು ಸೆಕಂಡ ಕ್ಲಾಸ್‌ದ ಹಣವನ್ನು ವಸೂಲ ಮಾಡುವನು. ಆಗ ಸಾಲವು ಮುಟ್ಟುವದು.

**ತೀನಕರಿ:—** ಅಂ ! ಏನನ್ನುತ್ತೀರಿ ! ನಾನಿನ್ನು ಒಂದು ಪೈ ಸಹ ಕೊಡುವದಿಲ್ಲ.

**ಗಂಡೇರಿ:—** ಸರಕಾರವು ಕಿವಿ ಹಿಡಿದು ವಸೂಲು ಮಾಡುವದು. ಕಾಯಿದೆಯು ಯಾರಿಗೂ ಬಿಟ್ಟಿದ್ದಲ್ಲ, ತಿಳಿಯಿತೆ ?

**ಆಟಲ:—** ತಾವು ಒಬ್ಬರೇ ಕೊಡಬೇಕಾಗುವದೆಂದಲ್ಲ. ಪ್ರತಿಯೊಬ್ಬ ಶೆಯರಹೋಲ್ಡರನು ತನ್ನ ಒಂದೊಂದು ಶೆಯರಿಗಾಗಿ ಮತ್ತೆ ಎರಡೆರಡರಂತೆ ರೂಪಾಯಿಗಳನ್ನು ಕೊಡಬೇಕಾಗುವದು. ಈ ಮೊದಲು ತಮ್ಮವು ೨೦೦ ಶೆಯರುಗಳಿದ್ದವು. ಇವತ್ತು ಶ್ಯಾಮಬಾಬುಗಳ ೧೬೦೦ ಶೆಯರುಗಳನ್ನು ಕೊಂಡಿರುವಿರಿ. ಈ ೧೮೦೦ ಶೆಯರುಗಳಿಗಾಗಿ ತಾವು ಮೂವತ್ತಾರುನೂರು ರೂಪಾಯಿಗಳನ್ನು ಕೊಡಬೇಕಾಗುವದು. ಸಾಲ ಮುಟ್ಟಿ, ಲಿಕ್ವಿಡೇಶನ್‌ದ ಖರ್ಚು ಕಳೆದು ಏನೋ ತುಸು ಹಣ ಉಳಿದರೆ ಅದು ತಿರುಗಿ ಬಂದೀತು.

**ತೀನಕರಿ:—** ನೀವು ಎಷ್ಟು ಕೊಡಬೇಕಾಗುವದು ?

ಗಂಡೇರಿರಾಮನು ಎರಡೂ ಮುಷ್ಟಿಗಳನ್ನು ಅಲ್ಲಾಡಿಸಿ. " ಏನೂ ಇಲ್ಲ, ಏನೂ ಇಲ್ಲ ! ಎಲ, ನಮ್ಮ ಇದ್ದುಬಿದ್ದ ಎಲ್ಲ ಶೆಯರುಗಳನ್ನು ಶ್ಯಾಮಬಾಬೂ ತಕ್ಕೊಂಡಿದ್ದರು. ಅವುಗಳನ್ನೇ ಇಂದು ನಿಮಗೆ ಮಾರಲಿಕ್ಕೆ ಕೊಟ್ಟಿದ್ದಾರೆ.

**ಶೀನಕರಿ:**— ಕಳ್ಳರು – ಕಳ್ಳರು – ಎಲ್ಲರೂ ಕಳ್ಳರು ! ನಾನು ಈಗಿಂದೀಗಲೇ ವಿಲಾಯತಿಗೆ ಕೋಲ್ತಹ್ಯಾಮರ್ ಸಾಹೇಬರಿಗೆ ಪತ್ರ ಬರೆಯುತ್ತೇನೆ.

**ಅಟಲ:**— ಹಾಗಾದರೆ ನಾವಿನ್ನು ಹೊರಡುತ್ತೇವೆ. ನಮ್ಮ ಶೆಯರುಗಳಂತೂ ಇಲ್ಲ. ಅರ್ಥಾತ್ ನಾವು ಡಿರೆಕ್ಟರರೂ ಅಲ್ಲ. ತಾವೇ ಕೆಲಸ ಮಾಡಿರಿ. ನಡೆಯಿರಿ ಗಂಡೇರಿಶೇಠ !

**ಶೀನಕರಿ:**— ಅಂ....

**ಗಂಡೇರಿ:**— ರಾಮ ರಾಮ !



# ಒಪ್ಪೋಲೆ

ಪುಸ್ತಕದಲ್ಲಿ ಅನೇಕ ಮುದ್ರಣದೋಷಗಳಿವೆ. ಎಲ್ಲ ಅಶುದ್ಧ ಶಬ್ದಗಳ ಶುದ್ಧಪಾಠವನ್ನು ಕೊಟ್ಟರೆ ಒಪ್ಪೋಲೆಯು ಬಹಳ ಉದ್ದವಾಗಿ ಓದುಗರಿಗೆ ಬೇಸರವನ್ನುಂಟುಮಾಡಬಹುದು. ಆದುದರಿಂದ ಮಹತ್ತ್ವದ ದೋಷಗಳನ್ನಷ್ಟು ಆರಿಸಿ ಅವುಗಳ ಶುದ್ಧರೂಪವನ್ನು ಕೊಡಲಾಗಿದೆ. ಉಳಿದ ದೋಷಗಳನ್ನು ಓದುಗರು ತಾವೇ ಸುಧಾರಿಸಿಕೊಂಡು ಓದಬೇಕೆಂದು ಬಿನ್ನಹ. ತೊಂದರೆಗಾಗಿ ಕ್ಷಮೆಯಿರಲಿ.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೯ | ೨೩ | ಕಾರ್ಯ | ಶೌರ್ಯ |
| ೨೪ | ೫ | ಅಧ್ಯಕ್ಷತೆ | ಆಢ್ಯತೆ |
| ೪೩ | ೩ | Carabral | Cerebral |
| ,, | ೧೩ | ಸ್ಪೃಗ್ನ್ವೇ | ಸ್ಪೃ ಇವೇ |
| ೫೫ | ೮ | ಜನಾಬರಿಕೆ | ಜನಾಬರಿಗೆ |
| ೮೫ | ೨೧ | ತೃಪ್ತಳಾಗಿ | ತ್ರಸ್ತಳಾಗಿ |
| ೮೮ | ೧೬ | ಅಭಿಸಂಧಾತ | ಅಭಿಸಂಪಾತ |
| ೯೧ | ೧೬ | ಅನ್ಯೋನ್ಯ | ಅನ್ಯಾನ್ಯ |
| ೧೦೧ | ೨೮ | ನೋಡುತ್ತಿರಮಿಯಲ್ಲ | ನೋಡುತ್ತಿರುವಿಯಲ್ಲ |
| ೧೦೬ | ೨೫ | ಚರಚ್ಚಂದ್ರ | ಶರಚ್ಚಂದ್ರ |
| ೧೧೯ | ೫ | ಜಾತಕಪಕ್ಷಿ | ಚಾತಕಪಕ್ಷಿ |
| ,, | ೨೫ | ಋರಿಸ್ | ಮಿಸ್ |
| ೧೨೫ | ೭ | ಆದರಲ್ಲಿ | ಅವರಲ್ಲಿ |
| ೧೪೩ | ೨ | ಖಾಸ ಭಾರತ | ಭಾರತ |
| ೧೪೬ | ೧೩ | ಮೋಘವಂಶ | ಮೋಷವಂಶ |
| ೧೫೮ | ೧೭ | ಹಿಸುವವರು | ವಹಿಸುವವರು |
| ೧೬೨ | ೬ | ಶಾಖಾಹಾರಿಗಳು | ಶಾಕಾಹಾರಿಗಳು |
| ೧೬೮ | ೯ | ನಮ್ಮ | ನಿಮ್ಮ |
| ೧೭೪ | ೧೨ | ಕ್ಲಾಸ್ | ಕಾಲ್ ( Call ) |

'ವಿರಂಚಿ ಮಹಾರಾಜ'ದ ಕೊನೆಯ ಪರಿಚ್ಛೇದದ ಮೊದಲಿನ ಎರಡು ಸಾಲುಗಳು ಅದರ ಹಿಂದಿನ ಪರಿಚ್ಛೇದದವು.

# ಟಿಪ್ಪಣಿಗಳು

## ವಿರಿಂಚಿ ಮಹಾರಾಜ

೧ ದುರ್ಗಾಪೂಜೆ— ಬಂಗಾಲದ ರಾಷ್ಟ್ರೀಯ ಹಬ್ಬ. ಆಶ್ವೀನ ಶು. ೧ರಿಂದ ೧೦ರ ವರೆಗೆ ಆಗ ಮನೆ ಮನೆಗಳಲ್ಲಿ ದುರ್ಗಾದೇವಿಯ ಪ್ರತಿಮೆಗಳನ್ನಿಟ್ಟು ಸಂಭ್ರಮದಿಂದ ಪೂಜೆಯನ್ನು ಮಾಡುತ್ತಾರೆ. ಶಾಲೆ, ಕಾಲೇಜು, ಕೋರ್ಟು, ಕಚೇರಿಗಳಿಗೆಲ್ಲ ಆಗ ರಜೆಯಿರುತ್ತದೆ.

೨ ಬಾಬು— ಇದೊಂದು ಮರ್ಯಾದಾರ್ಥಕ ಪದ. ನಮ್ಮಲ್ಲಿ 'ರಾಯರು' ಎಂದಂತೆ. ಇದನ್ನು ಹೆಸರಿನ ಹಿಂದೆ ಅಥವಾ ಮುಂದೆ ಹಚ್ಚುತ್ತಾರೆ. ಎರಡು ಶಬ್ದಗಳಿಂದ ಕೂಡಿದ ಹೆಸರಿದ್ದರೆ ಮೊದಲನೆಯ ಶಬ್ದದ ಮುಂದೆ ಹಚ್ಚುವ ಸಾಂಪ್ರದಾಯವಿದೆ.

೩ ಐನ್‌ಸ್ಟಾಯಿನ್— ಪ್ರಖ್ಯಾತ ವೈಜ್ಞಾನಿಕನು. ಯಹೂದೀ ಜಾತಿಯವನು. ಈತನ ಸಾಪೇಕ್ಷವಾದದ ಸಿದ್ಧಾಂತವು ವಿಜ್ಞಾನಶಾಸ್ತ್ರದಲ್ಲಿ ಕ್ರಾಂತಿಯನ್ನುಂಟುಮಾಡಿತು. (ಸನ್ ೧೯೦೫ ರಲ್ಲಿ). ಹಿಟ್ಲರನ ಆಳಿಕೆಯಲ್ಲಿ ಈತನು ಜರ್ಮನಿಯಿಂದ ನಿರ್ಯಾತಿತನಾಗಿ ಈಗ ಅಮೇರಿಕೆಯನ್ನು ಆಶ್ರಯಿಸಿದ್ದಾನೆ. ಈತನಿಗೆ ನೋಬೆಲ್ ಪಾರಿತೋಷಕವು ದೊರೆತಿದೆ.

೪ ಬ್ರಹ್ಮಸಮಾಜ— ರಾಜಾ ರಾಮಮೋಹನ ರಾಯ ಇವರು ಇದನ್ನು ೧೮೨೮ರಲ್ಲಿ ಸ್ಥಾಪಿಸಿದರು. ಬ್ರಹ್ಮಸಮಾಜದವರು ತಮ್ಮ ಮಂದಿರಗಳಲ್ಲಿ ನಿರಾಕಾರ ದೇವರ ಉಪಾಸನೆಯನ್ನು ಮಾಡುತ್ತಾರೆ. ಇವರಲ್ಲಿ ಜಾತಿಭೇದವಿಲ್ಲ. ವಿಧವಾವಿವಾಹಕ್ಕೆ ಪ್ರತಿಬಂಧವಿಲ್ಲ. ಸನಾತನಿಗಳಿಗೂ ಇವರಿಗೂ ಬಗೆ ಹರೆಯದಿರುವದು ಆಶ್ಚರ್ಯವಲ್ಲ.

೫ ಟುಟೆನ್ ಖಾಮೆನ್— ಕ್ರಿ. ಪೂ. ೧೩೫೮ – ೧೩೫೩ರಲ್ಲಿ ಈತನು ಇಜಿಪ್ತದೇಶವನ್ನು ಆಳುತ್ತಿದ್ದನು. ಇತ್ತೀಚೆಗೆ ಇವನ ಸಮಾಧಿಯನ್ನು ಅಗೆದಾಗ ಅದರಲ್ಲಿ ಅನೇಕ ಬಹುಮೂಲ್ಯ ವಸ್ತುಗಳು ದೊರೆತವು. ಇತಿಹಾಸ ಪ್ರಪಂಚದಲ್ಲಿ ಇದರಿಂದ ಚಲ-ವಿಚಲವುಂಟಾಯಿತು.

೬ ಹಮುರಾಬ್ಬಿ— ಬ್ಯಾಬಿಲೋನಿಯಾದ ( ಇಂದಿನ ಇರಾಕ ) ಅರಸ. ಕ್ರಿ. ಪೂ. ೨೧೨೩ರಿಂದ ೨೦೮೦ರ ವರೆಗೆ ಆಳುತ್ತಿದ್ದನು. ಇವನೊಬ್ಬ ಸ್ಮೃತಿಕಾರ, (Law giver) ಸ್ವಯಂ ಸೂರ್ಯದೇವನು ಇವನಿಗೆ ಧರ್ಮಶಾಸ್ತ್ರವನ್ನು ಬೋಧಿಸಿದನಂತೆ. ಬಾಯಿಬಲ್ಲಿನಲ್ಲಿಯೂ ಇದರ ಕಥೆ ಬರುತ್ತದೆ.

೭ ನೆಬೂಚಾಡ ನಾಜಾರ— ಕ್ರಿ. ಪೂ. ೬೦೫-೫೬೨ ವರೆಗೆ ಇವನು ಬ್ಯಾಬಿಲೋನಿಯಾದ ಅರಸನಾಗಿದ್ದನು. ಇವನು ಮಹಾ ಶೂರನೂ ಚತುರ ಶಿಲ್ಪಿಯೂ ಆಗಿದ್ದನು. ಜಗತ್ತಿನ ಏಳು ಆಶ್ಚರ್ಯಗಳಲ್ಲಿ ಎಣಿಸಲ್ಪಡುತ್ತಿರುವ ಬ್ಯಾಬಿಲೋನಿಯಾದ ತೂಗುವ ತೋಟ (Hanging garden) ವನ್ನು ನಿರ್ಮಿಸಿದವನು ಇವನು. ಇವನ ಕಥೆಯಾದರೂ ಬಾಯಿಬಲ್ಲಿನಲ್ಲಿ ಬರುತ್ತದೆ.

೮ ಪಿಥೆ ಕಂಥ್ರೋಪಸ್ ಇರೆಕ್ಟಸ್ ಮಿಸಿಂಗ್ ಲಿಂಕ್ } ಒಂದೇ ಒಂದು ಜೀವಕೋಶದಿಂದ ಇಂದು ನಮಗೆ ಅಸಂಖ್ಯಾಕವಾಗಿ ಕಾಣುವ ಪ್ರಾಣಿಗಳು ಹುಟ್ಟಿದವೆಂದೂ ವಿಕಾಸ ಪ್ರಾಣಿಯಿಂದ ಕ್ರಮಶಃ ವಿಕಾಸ ಹೊಂದುತ್ತ ಮನುಷ್ಯ ಪ್ರಾಣಿಯು ಆವಿರ್ಭಾವವಾಯಿತೆಂದೂ ವಿಕಾಸವಾದಿಗಳ ಅಭಿಪ್ರಾಯ. ಈ ಸಿದ್ಧಾಂತದಂತೆ ಮೊದಲು ಅನೇಕ ಪ್ರಾಣಿಗಳು ಹುಟ್ಟಿದನಂತರ ಕಪಿಗಳು ಹುಟ್ಟಿದವು. ಅನಂತರ ಬೇರೊಂದು ಪ್ರಾಣಿ. ಆಮೇಲೆ ಮನುಷ್ಯ ಪ್ರಾಣಿ. ಆದರೆ ಕಪಿ ಹಾಗು ಮನುಷ್ಯ ಇದರ ನಡುವಿನ ಪ್ರಾಣಿಯ ಸುಳಿವು ಇನ್ನೂ ಹತ್ತಿಲ್ಲ. ಇದಕ್ಕೆ ಕಳೆದು ಹೋದ ಕೊಂಡಿ ಅಥವಾ Missing link ಎಂದೆನ್ನುತ್ತಾರೆ.

ಕೆಲವರು ಜಾವಾದಲ್ಲಿ ದೊರೆತ ಒಂದು ಅಸ್ಥಿಪಂಜರವೇ ಈ ನಡುವಿನ ಪ್ರಾಣಿಯದೆಂದು ಅಭಿಪ್ರಾಯ ಪಡುತ್ತಾರೆ. ಅದಕ್ಕೆ ಅವರು ಪಿಥೆಕಂಥ್ರೋಪಸ್ ಇರೆಕ್ಟಸ್ (Pithecanthropus Erectus) ಅಥವಾ ನೆಟ್ಟಗೆ ನಿಲ್ಲಬಲ್ಲ ಕಪಿಮಾನವನೆಂದು ಕರೆಯುತ್ತಾರೆ. ಈ ಕಪಿಮಾನವನು ಐದು ಲಕ್ಷ ವರ್ಷಗಳ ಹಿಂದೆ ಇರುತ್ತಿದ್ದನಂತೆ.

೯ ನಿಯೋಲಿಥಿಕ್ ಮ್ಯಾನ್— ಮನುಷ್ಯಪ್ರಾಣಿಯು ಕಾಡು ಸ್ಥಿತಿಯಿಂದ ಸುಧಾರಿಸುತ್ತ ಇಂದಿನ ಉನ್ನತ ಸ್ಥಿತಿಗೆ ಬಂದನು. ಅವನ ಜನನದಿಂದ ಇಂದಿನ ವರೆಗಿನ ಕಾಲದಲ್ಲಿ ಅನೇಕ ಯುಗಗಳನ್ನು ಕಲ್ಪಿಸಿದ್ದಾರೆ. ಅವುಗಳಲ್ಲೊಂದು ಈ Neolithic age ಅಥವಾ ನವಶಿಲಾಯುಗ. ಈ ಯುಗದಲ್ಲಿ ಒಕ್ಕಲುತನವು ಆರಂಭವಾಯಿತು. ಈ ಯುಗದ ಮನುಷ್ಯನಿಗೆ ಲೋಹಗಳ ಪರಿಚಯವಿತ್ತು. ಪಶುಗಳನ್ನು ಸಾಕಬಲ್ಲವನಾಗಿದ್ದನು. ನೆಯ್ಗೆಯ ಕಲೆಯನ್ನು ಅರಿತಿದ್ದನು. ಈ ಮನುಷ್ಯನು ೧೫-೧೬೦೦೦ ವರ್ಷಗಳ ಹಿಂದೆ ಇರುತ್ತಿದ್ದನಂತೆ.

೧೦ ದರವಾನ— ಬಾಗಿಲ ಕಾಯುವ ಆಳು.

( ಸೂಚನೆ:— ಈ ಕಥೆಯಲ್ಲಿ ಬಾಲಕಿಯು ಕೆಂಪು ಸೀರೆಯನ್ನುಟ್ಟು ಕೊಂಡಿದ್ದಳೆಂದು ಉಲ್ಲೇಖ ಬಂದಿದೆ. ಇದರಿಂದ ನಮ್ಮ ಕಡೆಯವರಿಗೆ ತಪ್ಪು ಕಲ್ಪನೆಯುಂಟಾಗುವ ಸಂಭವವಿದೆ. ಬಂಗಾಲದಲ್ಲಿ ಕುಮಾರಿಯರೂ ಸಧವೆಯರೂ ಕೆಂಪು ಸೀರೆ ಉಡುವ ವಾಡಿಕೆಯಿದೆ. ವಿಧವೆಯರು ಬಿಳೀ ಪತ್ತಲವನ್ನುಡುತ್ತಾರೆ. )

## ಸ್ವಯಂವರಾ

ಅಂಬುವಾಚಿ— ಭೂದೇವಿಯು ರಜಸ್ವಲೆಯಾಗಿರುವ ದಿನಗಳು. ಆಷಾಢವದ್ಯ ೭ರಿಂದ ೧೦ರ ವರೆಗೆ. ಆಗ ನೆಲ ಅಗೆಯುವದು ನಿಷಿದ್ಧ.

## ತಿರುವು ಮುರುವು

ಜಾನ್-ಓ-ಗ್ರೋಟ್‌ಸ್ (John o' groat's house): ಇದು ಗ್ರೇಟ ಬ್ರಿಟ್‌ನ್‌ದ ಉತ್ತರ ದಿಕ್ಕಿನಲ್ಲಿರುವ ತುಟ್ಟತುದಿ. ಸನ್ ೧೬೦೦ನೇ ಇಸ್ವಿಯಲ್ಲಿ ಗ್ರೋಟ ಎಂಬ ಡಚ್ ಗೃಹಸ್ಥನು ಇಲ್ಲಿ ಒಂದು ಮನೆಯನ್ನು ಕಟ್ಟಿಸಿದನು. ಆದರಿಂದ ಈ ಹೆಸರು ಬಂದಿದೆ.

ಆಯಿಸಿಸ್— ಪ್ರಾಚೀನ ಕಾಲದಲ್ಲಿ ಇಜಿಪ್ತ ದೇಶದ ಜನರು ಪೂಜಿಸುತ್ತಿದ್ದ ದೇವರಾಜ ಆಸಿರಿಸ್‌ನ ಹೆಂಡತಿ ಹಾಗೂ ತಂಗಿ. ( ವಿಚಿತ್ರವಲ್ಲವೆ! ) ಇವಳು ಸಮುದ್ರದ ಅಧಿದೇವತೆ.

ಡಯಾನಾ— ಒಬ್ಬ ರೋಮನ್ ದೇವತೆ. ಗ್ರೀಕ ಪುರಾಣಗಳಲ್ಲಿ ಇವಳಿಗೆ ಆರ್ಟೆಮಿಸ್ ಎಂದು ಹೆಸರು. ಇವಳ ಅಣ್ಣನಾದ ಅಪೋಲೋ ಸೂರ್ಯನೆಂದೂ ಇವಳು ಚಂದ್ರ ಎಂದೂ ಅವರ ಭಾವನೆ. ಇವಳು ಬೇಟೆಯ ಅಧಿದೇವತೆ. ಶರಚಾಪ ಧಾರಿಣಿ.

## ಶ್ರೀ ಸಿದ್ಧೇಶ್ವರೀ ಲಿಮಿಟೆಡ್

ಕಾರಣಪಾನ— ಶಾಕ್ತ ಸಾಂಪ್ರದಾಯದಲ್ಲಿ ಮದ್ಯಪಾನ ಮತ್ತು ಮಾಂಸಾಶನ ಮೊದಲಾದವುಗಳು ಸಾಧನೆಯ ಅಂಗವೆಂದು ಎಣಿಸಲ್ಪಡುತ್ತವೆ. ಮದ್ಯಪಾನಕ್ಕೆ ಕಾರಣ ಪಾನವೆಂದು ಶಾಕ್ತರು ಕರೆಯುತ್ತಾರೆ.

ಗುಡ್ ಉಯಿಲ್— (Good will) ವ್ಯವಹಾರದಲ್ಲಿ ವ್ಯವಹಾರಸ್ಥರ ಪತ್ತಿಗೆ ಧನರೂಪದಿಂದ ಬರುವ ಬೆಲೆ.




*The magic beauty of this Cream is its invisibility to the naked eye and the Natural tone imparted — to the skin.*

Manufactured by the makers of the Famous Mysore Sandal Soap

**GOVT. SOAP FACTORY**

BANGALORE

# ನಮ್ಮ ಸಹಾಯಕರು ಮತ್ತು ಪೋಷಕರು.

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ಈ ವರ್ಷವೂ ನೆರವಿತ್ತು ಪ್ರೋತ್ಸಾಹಿಸಿದ ಮಹನೀಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ. ಇದರಂತೆ ಕನ್ನಡಿಗರೆಲ್ಲರೂ ಸಹಾಯಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ಪೋಷಕರಾಗಿಯಾಗಲಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

**ಪೋಷಕರು:—**

ಶ್ರೀಮಂತ ವೆಂಕಟಾದ್ರಿ ಶ್ರೀನಿವಾಸ ಬಹದ್ದೂರ ದೇಸಾಯಿ ನೊರಟೂರ ೧೦-೦-೦

ಶ್ರೀ. ರಾಘವೇಂದ್ರರಾವ ಮನಸಬ್ದಾರ. ಹೈದ್ರಾಬಾದ ೧೦-೦-೦

ಶ್ರೀ. ಎಚ್. ಬಿ. ಕೊಣ್ಣೂರ ಎಮ್. ಎ. ಬಿಜಾಪುರ ೧೦-೦-೦

**ಸಹಾಯಕರು:—**

೧. ಶ್ರೀ ಗುಂಜೀಕರ ಧೀರೇಂದ್ರರಾಯರು ಬಿ. ಕಾಮ್ ಧಾರವಾಡ ೫-೦-೦

೨. ಶ್ರೀ. ಕಲ್ಲಪ್ಪಾ ಸೋಮಪ್ಪಾ ಗುಂಜಾಳ ಧಾರವಾಡ ೫-೦-೦

೩. ,, ಎಸ್. ಎಸ್. ಪಕ್ರಿ ಬಿ. ಎ. ಬಾಗಿಲುಕೋಟೆ ೫-೦-೦

೪. ,, ಆರ್. ಜಿ. ದೇಶಪಾಂಡೆ ಎಂ. ಎ. ಇನ್‌ಕಮ್ ಟ್ಯಾಕ್ಸ ಆಫೀಸರ ಸಾತಾರಾ ೫-೦-೦

೫. ,, ಅಶ್ವಥರಾವ ಮಹಿಷಿ ವಕೀಲರು ಶಿರಹಟ್ಟಿ ೫-೦-೦

೬. ,, ಅಪ್ಪಣ್ಣಾ ರತ್ತಿ. ಕುಲಕರ್ಣಿ ನರಗುಂದ ೫-೦-೦

೭. ,, ಮನೋಹರರಾವ ದೇಶಪಾಂಡೆ ಬಿ. ಎ. ಬಿ. ಟಿ. ಅಥಣಿ ೫-೦-೦

೮. ಪ್ರೊ. ರಂಗನಾಥ ಮುಗಳಿ ಎಮ್. ಎ. ಬಿ. ಟಿ. ಸಾಂಗ್ಲಿ ೫-೦-೦

೯. ಶ್ರೀ. ಬಿ. ಜಿ. ಚಿಮ್ಮಲಗಿ ಹೈದ್ರಾಬಾದ ೫-೦-೦

೧೦. ಶ್ರೀ. ಆರ್. ಬಿ. ಅಭ್ಯಂಕರ ಬಿ. ಎ. ಎಲೆಲ್.ಬಿ. ಮಿರಜಿ ೫-೦-೦

೧೧. ,, ವ್ಹಿ. ಎಸ್. ಅಡವಿ ಅಸಿಸ್ಟಂಟ ಅಕೌಂಟಂಟ್ ಜನರಲ್ ಮುಂಬಯಿ ೫-೦-೦

೧೨. ,, ಗುರುರಾವ ಜೋರಾಪೂರ ಬಿ. ಎ. ಎಲೆಲ್ ಬಿ.
ಬಾಗಿಲುಕೋಟಿ ೫-೦-೦

೧೩. ,, ಬಿ. ಡಿ. ಅಕ್ಕಿ ಬಿ. ಎ. ಎಲೆಲ್ ಬಿ. ವಕೀಲರು
ಬಿಜಾಪೂರ ೫-೦-೦

೧೪. ಗ. ಬಾ. ಸೀತಾಬಾಯಿ ಪರ್ವತೀಕರ ಬಾಗಲಕೋಟಿ ೫-೦-೦

೧೫. ಶ್ರೀ ಗುರುರಾಜ ಭೀ. ಜೋಶಿ ಬಿ. ಎ. ಬಿ.ಟಿ. ಗದಗ ೫-೦-೦

೧೬. ಶ್ರೀ. ಎಲ್. ಜಿ. ಬಿಜಾಪುರ ವರ್ತಕರು ಬಾಗಲಕೋಟಿ ೫-೦-೦

೧೭. ,, ಎಸ್ ಬಿ. ಸಾಸನೂರ ಬಿ. ಎ. ಎಲ್ಎಲ್ ಬಿ.
ವಕೀಲರು ಬಾಗಲಕೋಟಿ ೫-೦-೦

೧೮. ,, ನಾರಾಯಣರಾವ ಜೋಶಿ ಬಿ.ಎ. ಎಲೆಲ್ ಬಿ.
ಬೆಳಗಾಂವಿ ೫-೦-೦

೧೯. ,, ವಡವಡಿಗಿ ವೆಂಕಟರಾಯರು ಬಾಗಿಲುಕೋಟಿ ೫-೦-೦

೨೦. ,, ಸಿ. ಕೆ. ವೆಂಕಟರಾಮಯ್ಯ ಎಂ. ಎ. ಬಿ. ಎಲ್
ಬೆಂಗಳೂರ ೫-೦-೦

೨೧. ,, ಜೀವನದಾಸ ದೇವೀದಾಸ ಪುಣೇಕರ
ಹತ್ತೀಕಾಳ ವ್ಯಾಪಾರಸ್ಥರು ಗದಗ ೫-೦-೦

೨೨. ,, ಮೋಹನರಾವ್ ಕರೀಕಟ್ಟಿ ಬಿ. ಎ.
ಸಬ್ ರಜಿಸ್ಟ್ರಾರರು ಕಾರವಾರ ೫-೦-೦

೨೩. ಶ್ರೀಮಂತ ಸರದಾರ ಬಾಳಾಸಾಹೇಬ ಭೀಮಪ್ಪ ಗಿರಿಯಪ್ಪ
ದೇಸಾಯಿ ಕೌಜಲಗಿ ೫-೦-೦

೨೪. ಶ್ರೀ. ಸಿ. ಸಿ. ಅಬಕಾರ ವರ್ತಕರು ಬನಹಟ್ಟಿ ೫-೦-೦

೨೫. ,, ಜಿ. ವಿ. ಜೇವೂರು ಆಯ. ಸಿ. ಎಸ್ ಡಾಯರೆಕ್ಟರ
ಜನರಲ್ ಆಫ್ ಪೋಸ್ಟ್ಸ ಡಿಲ್ಲಿ ೫-೦-೦

೨೬. ಡಾ. ಆರ್. ಎಸ್. ಗುಡಿ ಎಲ್. ಸಿ. ಪಿ. ಎಸ್.
ಬಿಜಾಪುರ ೫-೦-೦

೨೭. ಶ್ರೀ. ಎಸ್. ಎಸ್. ರಾಮಚಂದ್ರರಾಯರು ಕೊಡಗು ೫-೦-೦

೨೮. ,, ವೀರಭದ್ರಪ್ಪಾ ಬಳ್ಳಾರಿ ಗೌ. ಕಾ. ಕರ್ನಾಟಕ
ವಣಿಕ ಸಂಘ ಗದಗ ೫-೦-೦

೨೯. ,, ಶೀತೂಮಾಧವಾಚಾರ್ಯ ಡಂಬಳ ಪೆನ್ಶನ್
ಮಾಸ್ತರ ಗದಗ ೫-೦-೦